# ಲಿಂಗಸೂಗೂರು ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ)

ಸಂಶೋಧಕರು
ನೋಂದಣಿ ಸಂ. ೧೮೦೧೯೦೩೦೦೧೯

ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೯

# ಲಿಂಗಸೂಗೂರು ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ)

ಸಂಶೋಧಕರು

ನೋಂದಣಿ ಸಂ. ೧೮೦೧೯೦೩೦೦೧೯




ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೧೯

## ಪರಿವಿಡಿ

# ಅಧ್ಯಾಯ: ಒಂದು

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಪೂರ್ವಾಧ್ಯಯನಗಳ ಸಮೀಕ್ಷೆ

೧.೪. ಅಧ್ಯಯನದ ಸ್ವರೂಪ

೧.೫. ಅಧ್ಯಯನದ ವಿಧಾನ

## ಅಧ್ಯಾಯ: ಒಂದು

# ಪ್ರಸ್ತಾವನೆ

ಮಾನವ ಸಂಘಜೀವಿ ಎಂಬುದಕ್ಕೆ ಪ್ರಬಲ ಕಾರಣವೆಂದರೆ ಅವನಾಡುವ ಭಾಷೆ. ಇದರಿಂದಾಗಿ ಮಾನವನು ತನ್ನ ಅನುಭವಗಳನ್ನು ಇತರರೊಂದಿಗೆ ಹಂಚಿಕೊಳ್ಳಲು ಹಾಗೂ ಒಂದೆಡೆ ನೆಲೆನಿಂತು ಜೀವಿಸಲು ಸಾಧ್ಯವಾಯಿತು. ಭಾಷೆ ಮನುಷ್ಯನಿಗೆ ದೈವದತ್ತವಾಗಿ ಬಂದ ಅಮೂಲ್ಯವಾದ ಕೊಡುಗೆ ಎಂಬುದು ಸರ್ವವಿಧಿತ. ವಿಶಿಷ್ಟ ಸಂವಹನ ಕಲೆಯಾದ ಈ ಭಾಷೆಯಿಂದಾಗಿ ಮಾನವ ಎಲ್ಲಾ ದೃಷ್ಟಿಯಿಂದಲೂ ಎಲ್ಲಾ ಕ್ಷೇತ್ರಗಳಲ್ಲಿ ಇತರ ಜೀವಿಗಳಿಗಿಂತ ವಿಭಿನ್ನವಾಗಿ ತನ್ನ ಅಸ್ತಿತ್ವವನ್ನು ಸ್ಥಾಪಿಸಿ, ಕಾಪಾಡಿಕೊಂಡು ಬಂದಿದ್ದಾನೆ. ಮಾನವನು ಆರಂಭದ ಅವಧಿಯಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುತ್ತಾ, ಗಡ್ಡೆ-ಗೆಣಸುಗಳನ್ನು ತಿನ್ನುತ್ತಾ ಗುಹೆಗಳಲ್ಲಿ ವಾಸಿಸುತ್ತಾ ಅನಾಗರಿಕ ಜೀವನವನ್ನು ನಡೆಸುತ್ತಿದ್ದನು. ಕಾಲಾಂತರದಲ್ಲಿ ನಾಗರಿಕತೆಯನ್ನು ಮೈಗೂಡಿಸಿಕೊಂಡು ಒಂದು ಕಡೆ ನೆಲೆನಿಂತು ಜೀವನ ನಡೆಸತೊಡಗಿದನು.

ಪ್ರಾಚೀನ ಕಾಲದಲ್ಲಿ ಒಂದೇ ಬುಡಕಟ್ಟಿಗೆ ಸೇರಿದ ಹಲವು ಕುಟುಂಬಗಳು ಒಂದೇ ಧ್ಯೇಯಗಳನ್ನು ಹೊಂದಿದವುಗಳಾಗಿರುತ್ತಿದ್ದವು. ಹಾಗಾಗಿ ಅವರಲ್ಲಿ ಬಲವಾದ ಬಂಧುತ್ವವಿರುತ್ತಿತ್ತು. ಒಂದೇ ರಕ್ತ ಸಂಬಂಧವುಳ್ಳ ಕುಟುಂಬಗಳು ಬರುಬರುತ್ತಾ ವಿಸ್ತಾರಗೊಂಡು ಅವುಗಳ ವ್ಯವಸ್ಥೆಯನ್ನು ನೋಡಿಕೊಳ್ಳಲು ಒಬ್ಬ ಮುಖ್ಯಸ್ಥನನ್ನು ಹೊಂದಿರುವುದು ಅವಶ್ಯವಾಯಿತು. ಆ ಮುಖ್ಯಸ್ಥನಿಗೆ ವಿಧೇಯರಾಗಿದ್ದು ಅವನು ಹಾಕಿದ ನಿಯಮ ಕಟ್ಟಳೆಗಳಿಗೆ ಎಲ್ಲರೂ ಮರ್ಯಾದೆಯನ್ನು ಕೊಡುತ್ತಿದ್ದರು. ಮುಖ್ಯಸ್ಥನು ಕಾಲಾಂತರದಲ್ಲಿ ರಾಜನಾಗಿ ಆಳಲು ಪ್ರಾರಂಭಿಸಿದನು.

ರಾಜನಾದ ವ್ಯಕ್ತಿಯು ನಂತರದಲ್ಲಿ ತನ್ನದೇ ಆದ ಸಾಮ್ರಾಜ್ಯವನ್ನು ಕಟ್ಟಿದನು. ನಂತರದ ದಿನಗಳಲ್ಲಿ ತನ್ನ ಸಂತತಿಯನ್ನು ಬೆಳಸತೊಡಗಿದನು. ಕಾಲಾಂತರದಲ್ಲಿ ಒಂದು ಸಂತತಿಯು

ಮತ್ತೊಂದು ಸಂತತಿಯ ನಡುವಿನ ಘರ್ಷಣೆಯಿಂದ ಹಳೆಯ ಸಂತತಿಗಳು ಕಣ್ಮರೆಯಾದವು. ಹೊಸ ಸಂತತಿಗಳು ಬರತೊಡಗಿದವು. ಆದರೆ ಈ ಸಂತತಿಗಳು ನಾಶವಾದರೂ ಅವರ ಜೀವನ ಶೈಲಿಯನ್ನು ಪರಿಚಯಿಸುವ ವಸ್ತುಗಳಾದ ಶಾಸನಗಳು, ಸ್ಮಾರಕಗಳು, ಆಯುಧಗಳು, ನಾಣ್ಯಗಳು ಆಕರಗಳಾಗಿ ಉಳಿದವು. ಆದರೂ ಸಹ ಇಂತಹ ಸಂದರ್ಭದಲ್ಲಿ ಆಳ್ವಿಕೆ ಮಾಡಿದಂತಹ ಹಳೆಯ ಸಂತತಿಗಳು ಬಿಟ್ಟುಹೋದ ಪ್ರಮುಖ ಸಾಮಗ್ರಿಗಳಾದ ಶಾಸನಗಳು, ಸ್ಮಾರಕಗಳಾದ ಅರಮನೆಗಳು, ದೇವಾಲಯಗಳು, ಕೋಟೆ-ಕೊತ್ತಲಗಳು, ಪುಷ್ಕರಣಿಗಳು, ಕೆರೆಗಳು, ಬಾವಿಗಳು, ನಾಣ್ಯಗಳು, ಮೂರ್ತಿಗಳು, ಆಯುಧಗಳು ದೊರೆಯಲ್ಪಟ್ಟವು. ಇವುಗಳಲ್ಲಿ ಕೆಲವು ವಿನಾಶದ ಅಂಚಿನಲ್ಲಿದ್ದರೆ, ಇನ್ನೂ ಕೆಲವು ಮಣ್ಣಿನಲ್ಲಿ ಮಣ್ಣಾಗಿ ಹೋಗಿವೆ. ಇನ್ನೂ ಕೆಲವು ಸಂಪೂರ್ಣವಾಗಿ ಕಣ್ಮರೆಯಾಗಿವೆ. ಇಂತಹ ಸಂದರ್ಭದಲ್ಲಿ ಪ್ರಮುಖವಾಗಿ ದೊರೆಯುವ ಸಾಮಗ್ರಿಗಳಲ್ಲಿ ಶಾಸನಗಳು ಪ್ರಮುಖ ಆಕರಗಳಾಗಿವೆ. ಇವುಗಳ ಸಹಾಯದಿಂದ ಅಂದಿನ ರಾಜ-ಮಹಾರಾಜರುಗಳು ವಂಶ ವಿವರಗಳು, ಅವರ ಸಾಧನೆಗಳು, ಮಾಡಿದ ಯುದ್ಧ ಪ್ರಕಾರಗಳು, ರಾಜ್ಯಾಡಳಿತ ವ್ಯವಸ್ಥೆ, ಅಂದಿನ ಜೀವನ ಶೈಲಿ, ಆರ್ಥಿಕ, ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲಬಹುದಾಗಿದೆ.

ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ರಾಯಚೂರು ಜಿಲ್ಲೆಯ ತಾಲೂಕು ಕೇಂದ್ರವಾದ ಲಿಂಗಸೂಗೂರು, ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಕ್ರಿ.ಶ ೧೮೦೫ರಲ್ಲಿ ಜಿಲ್ಲಾ ಸ್ಥಳವಾಗಿತ್ತು. ಅಂದಿನ ಲಿಂಗಸೂಗೂರು ಜಿಲ್ಲೆಯಲ್ಲಿ ಇಂದಿನ ಸಿಂಧನೂರು, ಗಂಗಾವತಿ, ಕುಷ್ಟಗಿ, ಸುರಪುರ, ಶಾಹಪುರ ತಾಲೂಕುಗಳಾಗಿದ್ದವು. ಈ ತಾಲೂಕು ಇತಿಹಾಸ ಪೂರ್ವ ಕಾಲದಿಂದ ಆಧುನಿಕ ಕಾಲದವರೆಗೂ ಭೌಗೋಳಿಕವಾಗಿ ಎಷ್ಟು ಸಮೃದ್ಧವಾಗಿದೆಯೂ, ಚರಿತ್ರೆಯ ದೃಷ್ಟಿಯಿಂದಲೂ ತನ್ನ ಘನತೆ ಗೌರವವನ್ನು ಕಾಪಾಡಿಕೊಂಡು ಬಂದಿದೆ.

ಈ ಹಿಂದೆ ಆಡಳಿತಾತ್ಮಕವಾಗಿ ಮೌರ್ಯರು, ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ಕಲ್ಯಾಣ ಕಲಚೂರಿಗಳು, ಹೊಯ್ಸಳರು, ದೇವಗಿರಿ ಯಾದವರು, ವಿಜಯನಗರದ ಅರಸರು, ಬಹಮನಿ ಹಾಗೂ ಬಿಜಾಪುರದ ಆದಿಲ್‌ಶಾಹಿಗಳು, ಸ್ಥಳೀಯ ಸಂಸ್ಥಾನಿಕರು, ಬ್ರಿಟಿಷರು ಹಾಗೂ ಹೈದ್ರಾಬಾದ ನಿಜಾಮರ ಆಳ್ವೀಕೆಗೆ ಒಳಪಟ್ಟಿತ್ತು.ಲಿಂಗಸೂಗೂರು ತಾಲೂಕಿನ ಬಹುತೇಕ ಭಾಗಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ ಶಾಸನಗಳು, ದೇವಾಲಯಗಳು ಅಧಿಕ ಸಂಖ್ಯೆಯಲ್ಲಿ ದೊರಕಿವೆ. ಈ ನಿಟ್ಟಿನಲ್ಲಿ ಅಂದಿನ ಸಂಸ್ಕೃತಿಯನ್ನು ಸಾರುವ ದೇವಾಲಯಗಳು, ಬಸದಿಗಳು, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳು, ಶಾಸನಗಳನ್ನು ಪ್ರಮುಖ ಆಕರವಾಗಿಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗುವುದು.

## ೧.೧ ಅಧ್ಯಯನದ ಉದ್ದೇಶ

ಇತಿಹಾಸ ಅಧ್ಯಯನವು ಇಂದು ರಾಜಮನೆತನಗಳ ಅಧ್ಯಯನವಾಗದೆ ಜನಸಾಮಾನ್ಯರ ಬದುಕಿನ ಅಧ್ಯಯನವಾಗಿ ವಿಸ್ತೃತಗೊಳ್ಳತೊಡಗಿದೆ. ಇದರಿಂದಾಗಿ ರಾಜರ ಇತಿಹಾಸವು ಗೌಣವಾಗಿ ಶ್ರೀಸಾಮಾನ್ಯರ ಬದುಕಿಗೆ ಅವರ ಇತಿಹಾಸಕ್ಕೆ ಮಹತ್ವ ದೊರಕಿದೆ. ಪುರಾತತ್ವ ಅಧ್ಯಯನದ ಶಾಖೆಗಳಾದ ದೇವಾಲಯಗಳು ಮತ್ತು ಶಾಸನಗಳು ಇತಿಹಾಸ ರಚನೆಗೆ ಪ್ರಧಾನ ಆಕರಗಳಾಗಿವೆ. ಪ್ರಸ್ತುತ ಈ ಅಧ್ಯಯನವು ಲಿಂಗಸೂಗೂರು ಪರಿಸರಕ್ಕೆ ಸೀಮಿತವಾಗಿದ್ದು, ಈ ವಿಷಯಕ್ಕೆ ಸಂಬಂಧಪಟ್ಟ ಆಕರಗಳನ್ನು ಒಂದಡೆ ಸಂಗ್ರಹಿಸಿ ಅಧ್ಯಯನ ಮಾಡುವುದು ಈ ಪ್ರಬಂಧದ ಮುಖ್ಯ ಉದ್ದೇಶ.

ಲಿಂಗಸೂಗೂರು ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳ ಬಗ್ಗೆ ವ್ಯಾಪಕವಾದ ಅಧ್ಯಯನಗಳು ನಡೆದಿಲ್ಲ. ಆದ್ದರಿಂದ ಇಲ್ಲಿ ದೊರೆತಿರುವ ಶಾಸನಗಳನ್ನು ಒಂದೆಡೆ ಸಂಗ್ರಹಿಸಿ ಅವುಗಳನ್ನು ಒಟ್ಟುಗೂಡಿಸಿಕೊಂಡು ಅಧ್ಯಯನ ಮಾಡಬೇಕೆಂಬ ಉದ್ದೇಶದಿಂದ ಈ ಅಧ್ಯಯನ ಕೈಗೊಳ್ಳಲಾಗಿದೆ.

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನಲ್ಲಿ ನೂರಾ ಇಪ್ಪತ್ತಾರುಕ್ಕೂ ಹೆಚ್ಚು ಶಾಸನಗಳು ಕಂಡುಬರುತ್ತವೆ. ಈ ಶಾಸನಗಳಲ್ಲಿ ಬಹುಪಾಲು ಶಾಸನಗಳು ದಾನದತ್ತಿಯ ವಿಷಯವನ್ನೇ ಉಲ್ಲೇಖಿಸುತ್ತವೆ. ಈ ದಾನಶಾಸನಗಳ ಜೊತೆಗೆ ಅಲ್ಲಿಯ ದೇವಾಲಯಗಳು, ಕೋಟೆ–ಕೊತ್ತಲಗಳು, ಬುರ್ಜುಗಳು, ಬಾವಿಗಳು, ಕೆರೆಗಳು, ಸಮಾಧಿಗಳು ಮೊದಲಾದ ಸ್ಮಾರಕಗಳನ್ನು ಮುಖ್ಯವಾಗಿಟ್ಟುಕೊಂಡು ಅಧ್ಯಯನ ಮಾಡಲಾಗುತ್ತದೆ.

ಲಿಂಗಸೂಗೂರು ತಾಲೂಕಿನಲ್ಲಿ ಆಳ್ವಿಕೆ ಮಾಡಿದ ಮೌರ್ಯರಿಂದ ಬಿಜಾಪುರ ಆದಿಲ್ ಶಾಹಿ ಅರಸರ ಕಾಲದಲ್ಲಿ ರಚನೆಗೊಂಡ ಅನೇಕ ಶಾಸನಗಳು ಇಂದು ಜನರ ನಿರ್ಲಕ್ಷ್ಯದಿಂದ ಮನೆಯ ತಳಪಾಯದ ಕಲ್ಲುಗಳಾಗಿ ಹಾಗೂ ಬೀದಿಗೆ ಹಾಸುವ ಕಲ್ಲುಗಳಾಗಿವೆ, ಇನ್ನು ಮಿಕ್ಕವು ನೈಸರ್ಗಿಕ ವಿಕೋಪಕ್ಕೆ ಸಿಕ್ಕಿ ಕಾಲಗರ್ಭದಲ್ಲಿ ಅವಿತುಕೊಂಡು ಹೋಗಿವೆ. ಹೀಗಿದ್ದು ಕೊಡ ಗ್ರಾಮದಲ್ಲಿ ಕೆಲವು ಶಾಸನಗಳು, ದೇವಾಲಯಗಳು, ಕೆರೆಬಾವಿಗಳು, ಕೋಟೆಗಳು ಮುಂತಾದವುಗಳು ಇಂದಿಗೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ.

ಈ ಹಿನ್ನೆಲೆಯಲ್ಲಿ ಅಧ್ಯಯನದ ಕಾರ್ಯ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕಾಗಿದೆ. ಜೊತೆಗೆ ಲೇಖನ ಮತ್ತು ಗ್ರಂಥಗಳು ವಿಪುಲವಾಗಿ ಬರಬೇಕಾಗಿದೆ. ಇಲ್ಲಿನ ಸ್ಮಾರಕಗಳ ರಕ್ಷಣೆ

ಕಾರ್ಯ ನಡೆಸುವ ಅವಶ್ಯಕತೆ ಇದೆ. ಶಾಸನಗಳಲ್ಲಿಯ ವಿಷಯವನ್ನು ಅಧ್ಯಯನಕ್ಕೆ ಒಳಪಡಿಸಿ ಕೊಂಡು ಅವುಗಳಲ್ಲಿ ಕಂಡುಬರುವ ಅಂಶಗಳನ್ನು ವಿವರವಾಗಿ ಅಧ್ಯಯನ ಮಾಡಲಾಗುವುದು.

## ೧.೨. ಅಧ್ಯಯನದ ವ್ಯಾಪ್ತಿ

ಸಾಮಾನ್ಯವಾಗಿ ಅರ್ಥದಲ್ಲಿ ವ್ಯಾಪ್ತಿ ಎಂದರೆ ಎಲ್ಲೆ, ಮೇರೆ, ಗಡಿ, ವೈಶಾಲತೆ ಅಥವಾ ಸೀಮಾರೇಖೆ ಎಂದಾಗುತ್ತದೆ. ಯಾವುದೇ ಸಂಶೋಧನೆಗೆ ಒಂದು ಚೌಕಟ್ಟು ಅಂದರೆ ವ್ಯಾಪ್ತಿ ಬಹಳ ಮುಖ್ಯ ನಿರ್ದಿಷ್ಟ ಹಾಗೂ ಉದ್ದೇಶಪೂರಕವಾದ ಸಂಶೋಧನೆ ಯಶಸ್ಸು ಕಾಣಬೇಕೆಂದರೆ ಅದಕ್ಕೆ ಚೌಕಟ್ಟು ಅಗತ್ಯ ಈ ಚೌಕಟ್ಟಿನ ಕ್ರಮಬದ್ಧತೆಯಿಂದ ಸ್ಪಷ್ಟವಾದ ಇತಿಹಾಸವನ್ನು ರಚಿಸಲು ಸಾಧ್ಯವಾಗುತ್ತದೆ. ವ್ಯಾಪ್ತಿಗಳಿಲ್ಲದ ಅಧ್ಯಯನವು ಗೊಂದಲಮಯವಾಗಿ ಸಂಶೋಧಕನ ಮಿತಿಯನ್ನು ತೀವ್ರಗೊಳಿಸುವಲ್ಲದೇ ಸಂಶೋಧಕನನ್ನು ದಾರಿ ತಪ್ಪಿಸುತ್ತದೆ. ಈ ಅಧ್ಯಯನದ ವ್ಯಾಪ್ತಿಯನ್ನು ಲಿಂಗಸೂಗೂರು ತಾಲೂಕಿನಲ್ಲಿ ದೊರೆಯುವ ಶಾಸನಗಳು ಮತ್ತು ಸ್ಮಾರಕಗಳು ಒದಗಿಸುವ ಮಾಹಿತಿಗಳ ಮೂಲಕ ಸೀಮಿತಗೊಳಿಸಲಾಗಿದೆ. ಒಟ್ಟಾರೆಯಾಗಿ ಲಿಂಗಸೂಗೂರು ತಾಲೂಕಿನ ವ್ಯಾಪ್ತಿಯಲ್ಲಿ ಕ್ಷೇತ್ರಕಾರ್ಯ ಕೈಗೊಳ್ಳುವುದರ ಮೂಲಕ ಮತ್ತು ಆ ಊರುಗಳಲ್ಲಿರುವ ದೇವಾಲಯಗಳ ಮತ್ತು ಶಾಸನಗಳ ಛಾಯಚಿತ್ರಗಳನ್ನು ಸಂಗ್ರಹಿಸುವುದರೊಂದಿಗೆ ಮತ್ತು ಅಪ್ರಕಟಿತ ಶಾಸನಗಳನ್ನು ಸಂಶೋಧಿಸಿ ಮಾಹಿತಿ ಸಂಗ್ರಹಿಸುವುದು.

## ೧.೩ ಪೂರ್ವಾಧ್ಯಯನಗಳ ಸಮೀಕ್ಷೆ

ಡಾ.ದೇವರಕೊಂಡಾ ರೆಡ್ಡಿ ಅವರ 'ಮುಳುಗಡೆ ಗ್ರಾಮಗಳಲ್ಲಿನ ಶಾಸನಗಳ ಅಧ್ಯಯನ' ಎಂಬ ಗ್ರಂಥ ಇದನ್ನು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸಿದ್ದಾರೆ. ಲಿಂಗಸೂಗೂರು ತಾಲ್ಲೂಕಿನ ಅಂಕನಾಳ, ಚಿತಾಪುರ, ಗುಡಿಜಾವೂರು, ಹಲ್ಕಾವಟಗಿ, ಹಿರೆಜಾವೂರು, ಕಮಲದಿನ್ನಿ, ನವಲಿ, ಪಲಗಲದಿನ್ನಿ, ರಾಂಪುರ, ತೋಂಡಿಹಾಳ, ತುಂಬಲಗಡ್ಡಿ, ಉಪನಾಳ ಮೊದಲಾದ ಗ್ರಾಮಗಳಲ್ಲಿ ಶಾಸನಗಳು ದೊರೆತ ಬಗ್ಗೆ ಉಲ್ಲೇಖಗಳಿವೆ. ಡಾ.ಅಮರೇಶ ಯತಗಲ್ ಅವರ 'ಕಾಯಕ' ಎಂಬ ಸ್ಮರಣ ಸಂಪುಟದಲ್ಲಿ ಈ ತಾಲ್ಲೂಕಿನ ಕೋಟೆಗಳು, ದೇವಾಲಯಗಳು, ಬಾವಿಗಳು, ಹನುಮನ ವಿಗ್ರಹಗಳು, ಸಮಾಧಿಗಳು, ಸಂಸ್ಥಾನಿಕರ ಆಡಳಿತ ಮತ್ತು ಶಾಸನಗಳ ಬಗ್ಗೆ ಪರಿಚಯಿಸಿಕೊಟ್ಟಿದ್ದಾರೆ. ಡಾ.ದೇವರಕೊಂಡಾ ರೆಡ್ಡಿ ಮತ್ತು ಇತರರು 'ರಾಯಚೂರು ಜಿಲ್ಲೆಯ ಶಾಸನ ಸಂಪುಟ: ೭. ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸಿದ್ದಾರೆ. ಸಂಪುಟದಲ್ಲಿ ಲಿಂಗಸೂಗೂರು ತಾಲ್ಲೂಕಿನ ಕಸಬಾ ಲಿಂಗಸೂಗೂರು, ಯಲಗಲದಿನ್ನಿ, ಕರಡಕಲ್, ಜಲದುರ್ಗ, ಕೋಟಾ, ಮುದಗಲ್ ಮೊದಲಾದ ಗ್ರಾಮಗಳಲ್ಲಿ ಶಾಸನಗಳು ದೊರೆತ ಬಗ್ಗೆ ಉಲ್ಲೇಖಗಳಿವೆ. ಡಾ.ಚನ್ನಬಸವ ಹಿರೇಮಠ ಅವರು 'ರಾಯಚೂರು-ಕೊಪ್ಪಳ ಜಿಲ್ಲೆಯ ಶಾಸನಗಳು' ಎಂಬ

ಗ್ರಂಥದಲ್ಲಿ ಲಿಂಗಸೂಗೂರು ತಾಲ್ಲೂಕಿನಲ್ಲಿ ಶಾಸನಗಳ ದೊರೆತ ಬಗ್ಗೆ ಉಲ್ಲೇಖಗಳಿವೆ.ಡಾ. ಅಮರೇಶ ಯತಗಲ್ ಅವರ 'ಇತಿಹಾಸ ಮಂಥನ' ಎಂಬ ಗ್ರಂಥದಲ್ಲಿ ಲಿಂಗಸೂಗೂರು ತಾಲ್ಲೂಕಿನ ಐತಿಹಾಸಿಕ ಸ್ಮಾರಕಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಲಾಗಿದೆ. ಡಾ.ಚನ್ನಬಸಪ್ಪ ಎಸ್. ಪಾಟೀಲ್ ಅವರು 'ಕರ್ನಾಟಕದ ಕೋಟೆಗಳು' ಎಂಬ ಗ್ರಂಥವನ್ನು ಕನ್ನಡ ವಿಶ್ವವಿದ್ಯಾಲಯ ದಿಂದ ಪ್ರಕಟಿಸಿದ್ದಾರೆ.

ಮುದಗಲ್ ಕೋಟೆ ಮತ್ತು ಶಾಸನಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಲಾಗಿದೆ. ಡಾ.ಚನ್ನಬಸವ ಹಿರೇಮಠ ಅವರು 'ಎಡೆದೊರೆ ನಾಡು' ಎಂಬ ಕೃತಿಯಲ್ಲಿ ಎಡೆದೊರೆ ನಾಡಿನ ವ್ಯಾಪ್ತಿಯ ಬಗ್ಗೆ ಪರಿಚಯಿಸಿಕೊಟ್ಟಿದ್ದಾರೆ. ಡಾ.ಕೆ ಶಶಿಕಾಂತ ಅವರು

'ಲಿಂಗಸೂಗೂರು' ಕೃತಿಯಲ್ಲಿ ಈ ತಾಲ್ಲೂಕಿನಲ್ಲಿರುವ ಅನೇಕ ದೇವಾಲಯಗಳು, ಕೃಷಿ ಮತ್ತು ನೀರಾವರಿಯ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಿದ್ದಾರೆ. ಡಾ.ಸುಜಾತ ಮಲ್ಲನಗೌಡ ಅವರು 'ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು' ಎಂಬ ಗ್ರಂಥದಲ್ಲಿ ಈ ತಾಲ್ಲೂಕಿನ ಕೋಟೆಗಳ ಬಗ್ಗೆ ಪರಿಚಯಿಸಿಕೊಟ್ಟಿದ್ದಾರೆ.ಡಾ.ಚನ್ನಬಸಪ್ಪ ಅವರು 'ರಾಯಚೂರು ಜಿಲ್ಲೆಯ ಚರಿತ್ರೆ: ಶಾಸನಗಳ ಹಿನ್ನೆಲೆಯಲ್ಲಿ' ಎಂಬ ಗ್ರಂಥದಲ್ಲಿ ಈ ತಾಲ್ಲೂಕಿನಲ್ಲಿರುವ ಅನೇಕ ಶಾಸನಗಳು ಮತ್ತು ವೀರಗಲ್ಲುಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಿದ್ದಾರೆ. ಡಾ.ಚಂದ್ರಶೇಖರ ನಾರಣಾಪುರ ಅವರು 'ಕರ್ನಾಟಕ ವೀರಶೈವ ಮಠಗಳು' ಕುರಿತು ಪರಿಚಯಿಸಿಕೊಟ್ಟಿದ್ದಾರೆ ಡಾ. ಅಮರೇಶ ಯತಗಲ್ ಅವರು 'ಕಸಬಾ ಲಿಂಗಸೂಗೂರು ಶ್ರೀ ಕುಪ್ಪಿಭೀಮ' ಎಂಬ ಕೃತಿಯಲ್ಲಿ ಈ ತಾಲ್ಲೂಕಿನ ಮಠಗಳು ಮತ್ತು ಮಸೀದಿಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಿದ್ದಾರೆ.ಡಾ.ಸಿ.ಎಸ್ ವಾಸುದೇವನ್ ಅವರು 'ಕರ್ನಾಟಕ ದೇವಾಲಯ ಕೋಶ ರಾಯಚೂರು ಜಿಲ್ಲೆ' ಎಂಬ ಗ್ರಂಥವನ್ನು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಿಸಿದ್ದಾರೆ. ಲಿಂಗಸೂಗೂರು ತಾಲ್ಲೂಕಿನ ಪ್ರಾಚೀನ ದೇವಾಲಯಗಳ ಬಗ್ಗೆ ಪರಿಚಯಾತ್ಮಕ ಮಾಹಿತಿ ನೀಡಿದ್ದಾರೆ. ಹೀಗೆ ಲಿಂಗಸೂಗೂರು ತಾಲ್ಲೂಕಿಗೆ ಸಂಬಂಧಿಸಿದ ಲೇಖನಗಳು, ಮಾಹಿತಿಗಳಿದ್ದರೂ, ಪ್ರತ್ಯೇಕವಾಗಿ ಇಲ್ಲಿನ ಶಾಸನಗಳು ಮತ್ತು ಸ್ಮಾರಕಗಳಿಗೆ ಸಂಬಂಧಿಸಿದಂತೆ ಅಧ್ಯಯನ ಪೂರ್ಣಪ್ರಮಾಣದಲ್ಲಿ ನಡೆದಿಲ್ಲ. ಆದ್ದರಿಂದ ಲಿಂಗಸೂಗೂರು ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು ಅಧ್ಯಯನಲ್ಲಿ ಇಲ್ಲಿ ಕೈಗೊಳ್ಳಲಾಗಿದೆ.

## ೧.೪. ಅಧ್ಯಯನದ ಸ್ವರೂಪ

ಅಧ್ಯಯನದ ವ್ಯಾಪ್ತಿಗನುಗುಣವಾಗಿ ಪ್ರಸ್ತುತ ಸಂಶೋಧನೆಯನ್ನು ಆರು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನವನ್ನು ಕೈಗೊಂಡ ಉದ್ದೇಶ, ವ್ಯಾಪ್ತಿ, ಸ್ವರೂಪ, ಪೂರ್ವಾಧ್ಯಯನಗಳ ಸಮೀಕ್ಷೆ ಮತ್ತು ವಿಧಾನವನ್ನು ಕುರಿತಂತೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭೂ ಭೌಗೋಳಿಕ ಅಂಶಗಳಾದ ವಿಸ್ತೀರ್ಣ, ಜನಸಂಖ್ಯೆ, ಹವಾಮಾನ, ಅರಣ್ಯ, ಕೆರೆಗಳು, ಕಾಲುವೆ ನೀರಾವರಿ, ಮಸ್ಕಿ ನಾಲಾ, ಜಲಸಂಪನ್ಮೂಲ, ಕೃಷಿ, ಮಳೆ, ಬೆಟ್ಟಗಳು, ನದಿಗಳು, ವಾಯುಗುಣ ಯಾವ ರೀತಿ ಪ್ರಭಾವ ಬೀರಿದೆ ಎಂಬುದನ್ನು ವಿವರಿಸಲಾಗಿದೆ ಮತ್ತು ಪ್ರಾಗೈತಿಹಾಸಿಕ ನೆಲೆಗಳ ಕುರಿತು ಚರ್ಚಿಸಲಾಗಿದೆ. ಸ್ಥಳನಾಮ, ಐತಿಹಾಸಿಕ ಹಿನ್ನೆಲೆಯ ಅಡಿಯಲ್ಲಿ ಮೌರ್ಯರ ಆಳ್ವಿಕೆಯಿಂದ ಹಿಡಿದು ವಿಜಾಪುರದ ಆದಿಲ್‌ಷಾಯಿಗಳವರೆಗೆ ಲಿಂಗಸೂಗೂರು ತಾಲ್ಲೂಕನ್ನು ಆಳಿದ ರಾಜಮನೆತನಗಳ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಶಾಸನಗಳ ವೈವಿಧ್ಯತೆಯಲ್ಲಿ, ಲಿಂಗಸೂಗೂರು ತಾಲ್ಲೂಕಿನ ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ದಾನಶಾಸನಗಳು, ವೀರಗಲ್ಲುಗಳು ಮತ್ತು ಪ್ರಶಸ್ತಿ ಶಾಸನಗಳ ಕುರಿತಿದೆ. ಒಟ್ಟಾರೆ ತುಲನಾತ್ಮಕವಾಗಿ ನೋಡಿದರೆ ಇಲ್ಲಿ ದಾನ ಶಾಸನಗಳೇ ಹೇಚ್ಚಾಗಿರುವುದನ್ನು ಕಾಣಬಹುದು.

ನಾಲ್ಕನೆಯ ಅಧ್ಯಾಯದಲ್ಲಿ ಭಾರತದ ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ಮೂರ್ತಿಶಿಲ್ಪದ ಉಗಮ ಮತ್ತು ವಿಕಾಸದ ಬಗ್ಗೆ ಅದರಲ್ಲೂ ಹೆಚ್ಚಾಗಿ ಲಿಂಗಸೂಗೂರು ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳು ಎಂಬ ವಿಷಯ ಆಧಾರವಾಗಿಟ್ಟುಕೊಂಡು ಶೈವ,ವೈಷ್ಣವ,ಶಾಕ್ತ,ಮತ್ತು ಜೈನ ಮೂರ್ತಿ ಶಿಲ್ಪಗಳನ್ನು ಅಧ್ಯಯನ ಮಾಡಲಾಗಿದೆ.

ಐದನೇ ಅಧ್ಯಾಯದಲ್ಲಿ ಈ ತಾಲ್ಲೂಕಿನಲ್ಲಿ ಸಿಗುವ ಸ್ಮಾರಕಗಳು,ದೇವಾಲಯಗಳು ಮತ್ತು ಕೋಟೆ ಕೊತ್ತಲಗಳನ್ನು ಶಾಸ್ತ್ರೀಯವಾಗಿ ಅಂದರೆ ಪುರಾತತ್ವ ವಿಷಯಗಳ ಹಿನ್ನೆಲೆಯಲ್ಲಿ ಗಮನಿಸದೆ,ಸೌಂದರ್ಯ ಹಾಗೂ ರಚನೆಯ ದೃಷ್ಟಿಯಿಂದ ಗಮನಿಸಿದ್ದು ಕ್ಷೇತ್ರಕಾರ್ಯದಲ್ಲಿ ನಾನು ಗಮನಿಸಿದ ಅನೇಕ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಿ ಚರ್ಚಿಸಿದ್ದೇನೆ.

ಆರನೇಯ ಅಧ್ಯಾಯವು ಈ ಅಧ್ಯಯನದ ಕೊನೆಯ ಘಟ್ಟವಾಗಿದ್ದು ಒಟ್ಟಾರೆ ನನ್ನ ಅಧ್ಯಯನದ ಫಲಿತಗಳನ್ನು ತಿಳಿಸುವ ಫಲಶೃತಿಯಾಗಿದೆ. ಇದರಲ್ಲಿ ಸಂಶೋಧನಾ ಕಾರ್ಯ ಕೈಗೊಂಡ ಮತ್ತು ಗಮನಕ್ಕೆ ಬಂದ ಅನೇಕ ಅಂಶಗಳನ್ನು ಕುರಿತು ಆಲೋಚಿಸಿದ್ದೇನೆ.

### ೧.೫. ಅಧ್ಯಯನದ ವಿಧಾನ

ಯಾವುದೇ ಒಂದು ಕಾರ್ಯವು ಯಶಸ್ವಿಯಾಗಬೇಕಾದರೆ ಕ್ರಮಬದ್ಧತೆ ಅತಿಮುಖ್ಯ ಇದೇ ರೀತಿ ಸಂಶೋಧಕನ ಕಾರ್ಯಕ್ಕೂ ವ್ಯವಸ್ಥಿತ ಅಧ್ಯಯನ ಕ್ರಮ ಬಹಳ ಅವಶ್ಯಕವಾದುದು.

ಅಂತೆಯೇ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳುವ ಮುನ್ನ ಲಿಂಗಸೂಗೂರು ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳಿಗೆ ಸಂಬಂಧಿಸಿದಂತೆ ಮಾಹಿತಿ ಪಡೆದುಕೊಳ್ಳಲಾಗುವುದು. ಈಗಾಗಲೇ ಸಂಶೋಧನೆ ಆಗಿರುವ ವಿಷಯಗಳೊಂದಿಗೆ ಮಾರ್ಗದರ್ಶಕರೊಂದಿಗೆ ಸಲಹೆಯನ್ನು ಪಡೆದುಕೊಂಡು ಮತ್ತು ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಯಿತು. ವಿಷಯದ ಆಯ್ಕೆಯ ನಂತರ ಲಿಂಗಸೂಗೂರು ತಾಲೂಕಿನ ಶಾಸನಗಳು ಮತ್ತು ಸ್ಮಾರಕಗಳಿಗೆ ಸಂಬಂಧಿಸಿದಂತೆ ವಿಷಯ ಸಂಗ್ರಹಿಸುವುದರ ಜೊತೆಗೆ ಅಲ್ಲಲ್ಲಿ ಬಂದ ಬಿಡಿ ಲೇಖನಗಳನ್ನು, ನಿಬಂಧಗಳನ್ನು, ಪತ್ರಿಕಾ ವರದಿಗಳನ್ನು ಸಂಗ್ರಹಿಸಲಾಗುವುದು. ನಂತರ ಅಧ್ಯಯನ ಮಾಡಿ ಲಿಂಗಸೂಗೂರು ತಾಲೂಕಿನ ಶಾಸನಗಳನ್ನು ಮತ್ತು ಇತರ ಆಕರಗಳಿಂದ ದೊರೆತ ಅಂಶಗಳನ್ನು ಕಾಲಾನುಕ್ರಮದಲ್ಲಿ ದಾಖಲಿಸಿಕೊಳ್ಳಲಾಗುವದು. ತದನಂತರ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ವಿವಿಧ ಗ್ರಂಥಾಲಯ ಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಪಡೆಯಲಾಗುವುದು. ರಾಯಚೂರು ಜಿಲ್ಲಾ ಗ್ರಂಥಾಲಯ, ಲಿಂಗಸೂಗೂರು ಪಟ್ಟಣ ಪಂಚಾಯಿತಿ ಸಾರ್ವಜನಿಕ ಗ್ರಂಥಾಲಯ, ಗುಲಬರ್ಗಾ ವಿಶ್ವವಿದ್ಯಾಲಯದ ಗ್ರಂಥಾಲಯ ಹಾಗೂ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯಕ್ಕೆ ಭೇಟಿ ನೀಡಿ ಪ್ರಸ್ತುತ ಅಧ್ಯಾಯನಕ್ಕೆ ಸಂಬಂಧಿಸಿದಂತೆ ಶಾಸನ ದಾಖಲೆಗಳನ್ನು ಮಾಹಿತಿಯನ್ನು ಸಂಗ್ರಹಿಸಿಕೊಳ್ಳ ಲಾಗುವುದು. ವಿಷಯಕ್ಕೆ ಸಂಬಂಧಿಸಿದ ವಿದ್ವಾಂಸರ ಸಲಹೆಯನ್ನು ಪಡೆಯುವುದರ ಜೊತೆಗೆ ಮಾರ್ಗದರ್ಶಕರೊಂದಿಗೆ ವಿಷಯವನ್ನು ಕುರಿತು ಚರ್ಚಿಸಲಾಗುವುದು ಹಾಗೂ ವಿಷಯಕ್ಕೆ ಸಂಬಂಧಿಸಿದಂತೆ ಇತರೆಡೆ ದೊರೆತ ಗ್ರಂಥಗಳನ್ನು ಸಂಗ್ರಹಿಸಿಕೊಂಡು ಅಧ್ಯಯನ ಕ್ಷೇತ್ರ ಕಾರ್ಯದೊಂದಿಗೆ ಕೈಗೊಳ್ಳಲಾಗುವುದು.

## ಅಧ್ಯಾಯ: ಎರಡು

# ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

೨.೧. ಭೌಗೋಳಿಕತೆ

೨.೨. ಪ್ರಾಗೈತಿಹಾಸ

೨.೩. ಸ್ಥಳನಾಮ

೨.೪. ಇತಿಹಾಸ

## ಅಧ್ಯಾಯ : ಎರಡು

# ಭೌಗೋಳಿಕತೆ ಮತ್ತು ಐತಿಹಾಸಿಕ ಹಿನ್ನೆಲೆ

ಯಾವುದೇ ಒಂದು ಪ್ರದೇಶದ ಬಗ್ಗೆ ಅಧ್ಯಯನ ಕೈಗೊಳ್ಳಬೇಕಾದರೆ ಮುಖ್ಯವಾಗಿ ಅಲ್ಲಿರುವ ಭೌಗೋಳಿಕ ಪರಿಸರ ಮುಖ್ಯವಾಗಿರುತ್ತದೆ. ಇಂತಹ ಪರಿಸರವು ಮಾನವನ ಜೀವನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಅಲ್ಲದೇ ಮಾನವನ ಜೀವನವು ಪರಿಸರದೊಂದಿಗೆ ಸಂಬಂಧವನ್ನು ಹೊಂದಿದೆ. ಆದ್ದರಿಂದ ಮಾನವನ ಮೂಲ ತಿಳಿಯಲು ಭೌಗೋಳಿಕ ಪರಿಸರದ ಅರಿವು ಅವಶ್ಯಕ. ಹೀಗಾಗಿ ಪ್ರಸ್ತುತ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಭೌಗೋಳಿಕ ಪರಿಸರದ ಅಧ್ಯಯನದ ಅಗತ್ಯತೆ ಇದೆ. ಲಿಂಗಸೂಗೂರಲ್ಲಿ ಸಮುದ್ರಮಟ್ಟದಿಂದ ೫೦೫.೬ ಮೀಟರ್ ಎತ್ತರದಲ್ಲಿದೆ. ೧೬.೧೦° ಅಕ್ಷಾಂಶ ೭೬.೧೦° ರೇಖಾಂಶ ಮಧ್ಯದಲ್ಲಿದೆ.[೧] ಈ ತಾಲೂಕು ಪಶ್ಚಿಮ ಹಾಗೂ ಉತ್ತರಕ್ಕೆ ಕೃಷ್ಣಾ ನದಿಯು ಹರಿದು ಅದು ತಾಲೂಕಿನ ಎರಡು ದಿಕ್ಕುಗಳ ಮೇರೆಯಾಗಿದೆ. ಲಿಂಗಸೂಗೂರು ತಾಲೂಕು ಉತ್ತರಕ್ಕೆ ಕಲಬುರಗಿ ಜಿಲ್ಲೆ, ದಕ್ಷಿಣಕ್ಕೆ ಕೊಪ್ಪಳ ಜಿಲ್ಲೆಯ ಕುಷ್ಟಗಿ ಮತ್ತು ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕುಗಳಿವೆ. ಪೂರ್ವಕ್ಕೆ ರಾಯಚೂರು ಜಿಲ್ಲೆಯ ಮಾನ್ವಿ, ದೇವದುರ್ಗ ತಾಲೂಕುಗಳಿವೆ. ಪಶ್ಚಿಮಕ್ಕೆ ವಿಜಯಪುರ ಜಿಲ್ಲೆ ಇದೆ.

### ೨.೧. ಭೌಗೋಳಿಕತೆ

### ಭೌಗೋಳಿಕ ವಿಸ್ತೀರ್ಣ

ಲಿಂಗಸೂಗೂರು ತಾಲ್ಲೂಕು ರಾಯಚೂರು, ಕಲಬುರ್ಗಿ, ಬಳ್ಳಾರಿ, ಬಾಗಲಕೋಟೆ, ಗದಗ, ಕೊಪ್ಪಳ, ವಿಜಯಪುರ ಮೊದಲಾದ ಜಿಲ್ಲೆಗಳಿಗೆ ನೇರವಾಗಿ ಸಾರಿಗೆ ಸಂಪರ್ಕ ಹೊಂದಿದ ಪ್ರಮುಖ ಆಯಕಟ್ಟಿನ ಕೇಂದ್ರ ಸ್ಥಳವಾಗಿದೆ. ಈ ತಾಲ್ಲೂಕು ೧೯೨ ಗ್ರಾಮಗಳನ್ನು ಹಾಗೂ ಮಸ್ಕಿ, ಮುದಗಲ್, ಗುರುಗುಂಟಾ, ಲಿಂಗಸೂಗೂರು ಸೇರಿದಂತೆ ಒಟ್ಟು ೪

ಕಂದಾಯ ವಿಭಾಗಗಳನ್ನು ಒಳಗೊಂಡಿದೆ. ತಾಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣ ೧,೯೪,೦೧೦ ಹೆಕ್ಟರ್.[೨] ಇಲ್ಲಿನ ಭೂಮಿಯ ಮೇಲ್ಮೈ ಲಕ್ಷಣ ಕಪ್ಪು ಮತ್ತು ಕೆಂಪುಮಣ್ಣಿನಿಂದ ಕೂಡಿರುವುದಾಗಿದೆ. ಹಾಗೆಯೇ ಕೆಂಪು ಮತ್ತು ಕಪ್ಪು ಭೂಮಿಯ ವಿಸ್ತೀರ್ಣವು ಹೆಚ್ಚು ಕಡಿಮೆ ಸಮಸಮವಾಗಿರುವುದು.

## ಜನಸಂಖ್ಯೆ

ಸಾಮಾನ್ಯವಾಗಿ ಪ್ರತಿ ಹತ್ತು ವರ್ಷಕ್ಕೊಮ್ಮೆ ಜನಗಣತಿ ನಡೆಯುತ್ತದೆ. ಅದರ ಪ್ರಕಾರ ೨೦೧೧ರಲ್ಲಿ ತಾಲ್ಲೂಕಿನ ಒಟ್ಟು ಜನಸಂಖ್ಯೆ ೩,೮೫,೬೯. ಇದರಲ್ಲಿ ಗಂಡಸರ ಸಂಖ್ಯೆ ೧,೯೪,೩೬೩ ಮತ್ತು ಹೆಂಗಸರ ಸಂಖ್ಯೆ ೧,೯೧,೩೩೬ ಇದೆ.

## ಮೇಲ್ಮೈ ಲಕ್ಷಣ

ಈ ತಾಲೂಕಿನ ಮೇಲ್ಮೈ ಲಕ್ಷಣದಲ್ಲಿ ಭೂ ಪ್ರದೇಶವು ಹೆಚ್ಚಾಗಿ ಕಪ್ಪು, ಕೆಂಪು ಹಾಗೂ ಗಡಸು ಮಣ್ಣಿನಿಂದ ಕೂಡಿದೆ. 'ಕರೇ(ಕಪ್ಪು)', ಹೊಳಿ, ಹಿರೇಹೊಳಿ, ಪದ್ದೂರ[೩] ಎಂದು ಕರೆಯಲಾಗಿರುವ ಕೃಷ್ಣಾನದಿ ನಾಗಲಾಪುರ ಹಾಗೂ ಮಸ್ಕಿ ಹಳ್ಳಗಳು ಈ ತಾಲೂಕಿನ ಪ್ರಮುಖ ಜಲಸಂಪನ್ಮೂಲಗಳಾಗಿವೆ. ನಾರಾಯಣಪುರ ಎಂಬಲ್ಲಿ ಕೃಷ್ಣಾನದಿಗೂ, ಮಾರಲದಿನ್ನಿ ಬಳಿ ಮಸ್ಕಿ ಹಳ್ಳಕ್ಕೂ ಅಣೆಕಟ್ಟನ್ನು ಕಟ್ಟಲಾಗಿದೆ. ಕೃಷ್ಣಾ ಅಣೆಕಟ್ಟಿಗೆ 'ಬಸವಸಾಗರ'ವೆಂದೂ ಮಾರಲದಿನ್ನಿಯ ಅಣೆಕಟ್ಟಿಗೆ 'ಘನಮಠ ಸಾಗರ'[೪] ಎಂದು ಕರೆಯ ಲಾಗುತ್ತದೆ.

## ಹವಾಮಾನ

ಲಿಂಗಸೂಗೂರು ತಾಲೂಕು ಒಣಹವೆಯಿಂದ ಕೂಡಿದ್ದು, ನವೆಂಬರ್‌ನಿಂದ ಮೇ ತಿಂಗಳವರೆಗೆ ಶುಷ್ಕ ಹವೆ ಇರುತ್ತದೆ. ಉಷ್ಣತೆಯೂ ಹೆಚ್ಚು. ಬೇಸಿಗೆಯಲ್ಲಿ ಗರಿಷ್ಠ ಉಷ್ಣಾಂಶ ಸು.೪೦° ಇರುತ್ತದೆ. ಹವಾಮಾನದಲ್ಲಿ ಯಾವ ವೈಪರೀತ್ಯಗಳು ಕಂಡುಬರದಿದ್ದರೂ ಮಳೆಗಾಲ ಮತ್ತು ಚಳಿಗಾಲದಲ್ಲಿ ಹವಾಮಾನವು ತಂಪಾಗಿರುತ್ತದೆ. ಬೇಸಿಗೆಯಲ್ಲಿ ಉಷ್ಣಾಂಶವು ಅತಿ ಹೆಚ್ಚೆಂದರೆ ಸರಾಸರಿ ೩೮° ರಿಂದ ೪೦° ಸೆಲ್ಸಿಯಸ್ ನಷ್ಟು ಇರುತ್ತದೆ.

## ಅರಣ್ಯ

ಲಿಂಗಸೂಗೂರು ತಾಲೂಕಿನಲ್ಲಿ ಅರಣ್ಯ ಸಂಪತ್ತು ಸಾಮಾನ್ಯವಾಗಿ ಕಂಡುಬರುತ್ತದೆ. ಇಲ್ಲಿ ಶುಷ್ಕ ಹವಾಮಾನವನ್ನು ಹೊಂದಿರುವುದರಿಂದಾಗಿ ದಟ್ಟವಾದ ಅರಣ್ಯ ಪ್ರದೇಶವನ್ನು ಹೊಂದಿರುವುದಿಲ್ಲ. ಆದರೂ ಸಹ ಪ್ರಸ್ತುತ ಪ್ರದೇಶದಲ್ಲಿ ಬೆಟ್ಟಗಳು ದುರ್ಗಮವಾಗಿರುವುವು. ಪಿಕ್ಲಿಹಾಳ, ಮಸ್ಕಿ, ಅಮರೇಶ್ವರ, ಹಟ್ಟಿ, ಕಿಲಾರಹಟ್ಟಿ, ಮುದಗಲ್, ಗುರುಗುಂಟಿ ಮೊದಲಾದ

ಪ್ರದೇಶಗಳು ಬೆಟ್ಟ ಗುಡ್ಡಗಳಿಂದ ಆವೃತ್ತವಾಗಿವೆ.[೫] ಇಲ್ಲಿ ಹೆಚ್ಚಾಗಿ ಗ್ರಾನೈಟ್ ಮತ್ತು ಮರಳು ಮಿಶ್ರಿತ ಕೆಂಪು ಬಂಡೆಕಲ್ಲುಗಳು ಇರುವ ಅರಣ್ಯ ಹೆಚ್ಚು ಕಂಡುಬರುತ್ತದೆ. ಅರಣ್ಯ ಪ್ರದೇಶದಲ್ಲಿ ವಿವಿಧ ಮಾದರಿಯ ಮರಗಳಿವೆ. ನೀಲಗಿರಿ, ರೈನಟ್ರೀ, ಹುಣಸೆ, ಮಾವು, ಬೇವು, ಜಾಲ, ಹೊಂಗೆ, ಹೊನ್ನೆ ಹಲವಾರು ಜಾತಿ ಮರಗಳು ಕಂಡುಬರುತ್ತವೆ. ಕರಡಿ, ಜಿಂಕೆ, ಕೋತಿ, ಆನೆಗಳು ಇರುತ್ತಿದ್ದವು ಎಂದು ಅಲ್ಲಿಯ ಜನರ ಅಭಿಪ್ರಾಯವಾಗಿದೆ. ಈಗಲೂ ಕೂಡ ಜಿಂಕೆ, ಕೋತಿ, ಮೊಲ ಮತ್ತು ಕಾಡುಹಂದಿಗಳು ಇರುವುದು ಗಮನಿಸಬಹುದಾಗಿದೆ. ಅಲ್ಲದೆ ನವಿಲು, ಪಾರಿವಾಳ, ಬೆಳ್ಳಕ್ಕಿ, ಹದ್ದು, ಕಾಗೆ ಮುಂತಾದ ಪಕ್ಷಿಗಳು ಇವೆ. ಕೃಷಿ ಮತ್ತು ಉದ್ಯೋಗಕ್ಕೆ ಅನುಕೂಲವಾದ ಆಕಳು, ಎತ್ತು, ಎಮ್ಮೆ, ಮೇಕೆ, ಕುರಿ, ಕೋಣಗಳನ್ನು ಸಾಕು ತ್ತಾರೆ.

**ಕೆರೆಗಳು**

ಲಿಂಗಸೂಗೂರು ತಾಲೂಕಿನ ಒಟ್ಟು ೨೩ ಕೆರೆಗಳಿವೆ. ಅವುಗಳೆಂದರೆ: ಮಟ್ಟೂರು ಕೆರೆ, ಭೂಗಾಪುರ ಕೆರೆ, ಮೆದಿಕಿನಾಳ ಕೆರೆ, ಯರಗುಂಟಿ ಕೆರೆ, ಕರಡಿಕಲ್ ಕೆರೆ, ಉಪ್ಪಾರ ನಂದಿಹಾಳ ಕೆರೆ, ಜೂಲಗುಡ್ಡ ಕೆರೆ, ಹಿರಿನಗನೂರು ಕೆರೆ, ಭೋಣಪುರ ಕೆರೆ, ಮುದಗಲ್ ಕೆರೆ, ಕನ್ನಪುರಹಟ್ಟಿ ಕೆರೆ, ಬೊಮ್ಮನಹಾಳು ಕೆರೆ, ಮಾಚನೂರು ಕೆರೆ, ಬದ್ದಿನ್ನಿ ಕೆರೆ, ಗುಡಗುಂಟಿ ಕೆರೆ, ಹುಕುಂಟಿ ಕೆರೆ ಮೊದಲಾದವುಗಳು ಈ ತಾಲ್ಲೂಕಿನಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ೧೯ ಕೆರೆಗಳು ಸಣ್ಣ ನೀರಾವರಿ ಇಲಾಖೆಗೆ ಒಳಪಟ್ಟರೆ, ಉಳಿದ ೪ ಕೆರೆಗಳು ಜಿಲ್ಲಾ ಪಂಚಾಯಿತಿ ಇಲಾಖೆಗೆ ಒಳಪಡುತ್ತವೆ. ಇಲ್ಲಿಯ ಬಹುತೇಕ ಕೆರೆಗಳು ಮಳೆಯ ನೀರನ್ನೇ ನೆಚ್ಚಿಕೊಂಡಿದ್ದರಿಂದ ಕೆರೆಗಳಲ್ಲಿ ನೀರು ಸಂಗ್ರಹಣೆಗೆ ತೊಂದರೆಯಾಗುತ್ತದೆ.

**ಬಾವಿಗಳು**

ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಮನ್‌ನ ಬಾವಿಗಳು ದೊರೆಯುತ್ತವೆ. ಇವುಗಳಿಗೆ 'ಗಿರಕಿ ಬಾವಿ' ಅಥವಾ 'ಮನ್ನಾಸಾಬನ ಬಾವಿ'ಗಳೆಂದು ಕರೆಯುತ್ತಾರೆ. ೧೯೨೮ ರಿಂದ ೧೯೩೫ರ ಸುಮಾರಿನಲ್ಲಿ ಈ ಭಾಗದಲ್ಲಿ ಬರಗಾಲ ಕಾಣಿಸಿತು. ಇಲ್ಲಿನ ಬರಗಾಲವನ್ನು ಕಣ್ಣಾರೆ ಕಂಡ ಮನ್ ಜಿಲ್ಲೆಯಲ್ಲಿ ೧೨೦೦ಕ್ಕಿಂತ ಹೆಚ್ಚು ಬಾವಿಗಳನ್ನು ತೂಡಿಸಿ ಈ ಭಾಗದ ಜನರ ನೀರಿನ ಬವಣೆಯನ್ನು ತಿರಿಸಿದ್ದಾನೆ. ಇವುಗಳು ತ್ರಿಕೋನ ಚರ್ತುಕೋನ, ಪಂಚಕೋನ, ಷಟ್‌ಕೋನ, ಸಪ್ತಕೋನ, ಅಷ್ಟಕೋನ, ನವಕೋನ ಹಾಗೂ ದಶಕೋನಾಕರಗಳಲ್ಲಿ ನಿರ್ಮಿಸಿದ ಬಾವಿಗಳು ಹಳ್ಳಿ ಹಳ್ಳಿಗಳಲ್ಲಿ ಕಾಣಿಸುತ್ತವೆ.

ಬಾವಿಗಳು ಸಾಮಾನ್ಯವಾಗಿ ಪ್ರತಿಯೊಂದು ಊರಿನಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕೆಲವೊಂದು ಪ್ರಾಚೀನ ಬಾವಿಗಳು ಲಿಂಗಸೂಗೂರು ತಾಲೂಕಿನ ಹಲವು ಗ್ರಾಮದಲ್ಲಿ ಕಾಣಿಸಿವೆ. ಗುರುಗುಂಟಾ, ಆನೆಹೊಸೂರು, ಕೋಟಾ, ಮುದಗಲ್, ಕನಸಾವಿ, ಕಸಬಾ ಲಿಂಗಸೂಗುರು, ಹುನಕುಂಟೆ, ಗೆಜ್ಜಲಗಟ್ಟ, ಹಿರೇನಗನೂರು, ಚಿಕ್ಕನಗನೂರು ಮುಂತಾದ ಹಳ್ಳಿಗಳಲ್ಲಿ ಬಾವಿ ನೀರಾವರಿಗೆ ಪ್ರಸಿದ್ಧವಾಗಿವೆ.

**ಕಾಲುವೆ ನೀರಾವರಿ**

ಸದಾ ಬರಗಾಲದಲ್ಲಿ ಬದುಕುವ ರೈತರ ಮತ್ತು ಜನಸಾಮಾನ್ಯರ ಬದುಕನ್ನು ಕಟ್ಟಿಕೊಳ್ಳಲು ೧೯೯೫–೯೬ರಲ್ಲಿ ನಾರಾಯಣಪುರ ಬಲದಂಡೆ ಕಾಲುವೆ ಯೋಜನೆಯನ್ನು ಜಾರಿ ಮಾಡಿ ಕಾಲುವೆಯನ್ನು ತೋಡುವ ಕಾರ್ಯವನ್ನು ಆರಂಭಿಸಲಾಯಿತು. ಈ ಕಾಮಗಾರಿಯು ೨೦೦೦ನೇ ಇಸವಿಯಲ್ಲಿ ಮುಗಿಯಿತು. ನಾರಾಯಣಪುರ ಬಲದಂಡೆ ಕಾಲುವೆಯು ೧೫೭ ಕಿ.ಮೀ.ಉದ್ದವಿದೆ. ಕಾಲುವೆಗೆ ೨೦೦೩ರಲ್ಲಿ ನೀರನ್ನು ಹರಿಸಲಾಯಿತು.[೬] ಈ ಕಾಲುವೆಯ ನೀರಾವರಿ ಕ್ಷೇತ್ತ ೧,೫೬,೦೦ ಹೆಕ್ಟೇರ್ ಆಗಿದೆ. ೯೫ ಕಿ.ಮೀ.ವರೆಗೆ ಕಾಲುವೆ ಕಾಮಗಾರಿ ಮುಗಿದಿದೆ. ೧.೮ ವಿತರಣಾ ಕಾಲುವೆಗಳು ಲಿಂಗಸೂಗೂರಿಗೆ ಸೇರಿವೆ.

**ಅತ್ತಿ–ಸೊಸೆಗುಡ್ಡ**

ಈ ಗುಡ್ಡವು ಭಿಲ್ಲಮಹಾರಾಜ ಕಟ್ಟಿಸಿದ ದೊಡ್ಡ ಕೆರೆಯ ದಕ್ಷಿಣ ಭಾಗದಲ್ಲಿ ಏಕಶಿಲೆಯಲ್ಲಿ ಕಂಡುಬರುತ್ತದೆ. ಇದು ಕೆಂಪುಬಣ್ಣದಿಂದ ಕೂಡಿದ ಗುಡ್ಡವಾಗಿದೆ. ಇದನ್ನು ಡೊಂಬರ ಚನ್ನಮ್ಮ ಗುಡ್ಡ ಎಂತಲೂ ಕರೆಯುತ್ತಾರೆ.[೭] ಇದಕ್ಕೆ ಅತ್ತೆ–ಸೊಸೆ ಗುಡ್ಡ, ಪೆಲುಂಟಿ ಗುಡ್ಡ ಎಂಬ ಹಲವು ರೀತಿಯ ನಾಮಗಳು ಈ ಗುಡ್ಡಕ್ಕೆ ಇದ್ದಿದ್ದು ವಿಶೇಷವಾಗಿದೆ. ಈ ಗುಡ್ಡದಿಂದ ಸುಮಾರು ಮೂರು ಕಿ.ಮೀ.ದೂರದಲ್ಲಿರುವ ಭಿಲ್ಲಮ ರಾಜನ ಗುಡ್ಡಕ್ಕೆ ಡೊಂಬರ ಚೆನ್ನಮ್ಮ ತಂತಿ ಹಾಕಿ ನಡೆದು ಬರುತ್ತಿದ್ದಳು ಎಂದು ಹೇಳುತ್ತಾರೆ.

**ಮಸ್ಕಿನಾಲೆ**

ಕರ್ನಾಟಕ ರಾಜ್ಯ ಸರ್ಕಾರದ ಜಲಸಂಪನ್ಮೂಲ ಇಲಾಖೆಯು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಮಸ್ಕಿ ಪಟ್ಟಣದಲ್ಲಿ ಸುಮಾರು ೧೨ ವರ್ಷಗಳ ಹಿಂದೆ ೪೯ ಕೋಟಿ ರೂ.ವೆಚ್ಚದಲ್ಲಿ ಮಸ್ಕಿ ನಾಲೆ ಯೋಜನೆಯನ್ನು ಪೂರ್ಣಗೊಳಿಸಿದೆ. ಇದರಿಂದ ೭೫೦೦೦ ಸಾವಿರ ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಿದೆ. ಇಲ್ಲಿನ ರೈತರಿಗೆ ಈ ಯೋಜನೆಯಿಂದ ನೀರಾವರಿ ಸೌಲಭ್ಯವನ್ನು ಪಡೆದಿದ್ದಾರೆ.

## ಜಲಸಂಪನ್ಮೂಲ

ಈ ತಾಲೂಕಿನ ನದಿ, ಕೆರೆ ಹಾಗೂ ಸಣ್ಣಪುಟ್ಟ ಹಳ್ಳಗಳು ಜಲಸಂಪನ್ಮೂಲ ಗಳಾಗಿವೆ. ಈ ಭಾಗದಲ್ಲಿ ಕೃಷ್ಣಾ, ಮಸ್ಕಿ ನದಿಗಳಲ್ಲದೆ, ತಾಲೂಕಿನಲ್ಲಿ ಸಣ್ಣ ಸಣ್ಣ ಹಳ್ಳಗಳು ಸದಾ ಹರಿಯುತ್ತವೆ. ಇಂತಹವುಗಳು ಆ ಪ್ರದೇಶದಲ್ಲಿ ವಾಸ ಮಾಡುತ್ತಿರುವ ಜನರ ಬದುಕಿನ ಮೇಲೆ ಮಹತ್ತರ ಪ್ರಭಾವ ಬೀರಿವೆ. ಇತಿಹಾಸದ ಚರಿತ್ರೆಯ ಪುಟದಲ್ಲಿ ಪ್ರಮುಖ ನಾಗರಿಕತೆ ಗಳು ನದಿ ತೀರ ಪ್ರದೇಶದಲ್ಲಿ ಬೆಳೆದು ಬಂದಿದ್ದನ್ನು ಸ್ಮರಿಸಬಹುದಾಗಿದೆ.

## ಕೃಷಿ

ಇಲ್ಲಿಯ ಮುಖ್ಯ ಉದ್ಯೋಗ ವ್ಯವಸಾಯ. ಇಲ್ಲಿನ ರೈತರು ಕೃಷಿಗೆ ಮಳೆಯನ್ನು ನಂಬಿಕೊಂಡು ಜೀವನ ಸಾಗಿಸುವಂತಾಗಿದೆ. ಇತ್ತೀಚಿನ ದಿನಗಳಲ್ಲಿ ಈ ಭಾಗವು ಸತತವಾಗಿ ಬರಗಾಲಕ್ಕೆ ತುತ್ತಾಗಿದ್ದು, ಬದುಕಿನ ಬಂಡೆಯನ್ನು ಎಳೆಯಲು ಹರಸಾಹಸ ಪಡೆದಂತಾಗಿದೆ. ಈ ತಾಲೂಕಿನಲ್ಲಿ ಒಟ್ಟು ಭೌಗೋಳಿಕ ವಿಸ್ತೀರ್ಣ ೧,೯೪,೦೧೦ ಹೇಕ್ಟೆರ್ ಇರುತ್ತದೆ. ಇದರಲ್ಲಿ ಸಾಗುವಳಿಗೆ ಯೋಗ್ಯ ಕೃಷಿ ಭೂಮಿ ೧,೪೦,೩೭೭ ಹೇಕ್ಟೆರ್ ಇದ್ದು, ಇದು ಸಾಗುವಳಿಗೆ ನಿರುಪಯುಕ್ತ ಭೂಮಿ ೫೩,೬೨೧ ಹೆಕ್ಟೇರ್ ಆಗಿದೆ. ೧೩,೦೦೦ ಹೆಕ್ಟೇರ್ ನೀರಾವರಿಯ ಸೌಲಭ್ಯವನ್ನು ಪಡೆದಿದೆ. ಹೆಚ್ಚಾಗಿ ಮಳೆಯನ್ನಾಧರಿಸಿ ಮತ್ತು ಕೆರೆಕಟ್ಟೆ, ನದಿಗಳಿಂದ ನೀರಾವರಿ ಸೌಲಭ್ಯ ಪಡೆದು ಸೂರ್ಯಕಾಂತಿ, ತೊಗರಿ, ಎಳ್ಳು, ಹತ್ತಿ, ಜೋಳ, ಕಡಲೆ, ಸೆಂಗ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

## ಮಳೆ

ಲಿಂಗಸೂಗೂರು ತಾಲ್ಲೂಕು ಪೂರ್ವ ರೇಖಾಂಶ ೭೫°-೭೬° ಮತ್ತು ಉತ್ತರ ಉಷ್ಣಾಂಶ ೧೫°-೧೫° ಇದ್ದು ಸಮುದ್ರಮಟ್ಟದಿಂದ ೫೨೩-೦೪ ಮೀಟರ್ ಎತ್ತರದಲ್ಲಿದೆ.[೮] ಇಲ್ಲಿಯ ಮಳೆಯ ಪ್ರಮಾಣ ಕಡಿಮೆಯಾಗಿದೆ. ವಾರ್ಷಿಕವಾಗಿ ೫೭೨ ಮೀ.ಮೀ. ಸರಾಸರಿ ಬೆಳೆ ಬಂದರೆ ಹೆಚ್ಚಿನ ವಾರ್ಷಿಕ ಮಳೆಯು ೯೪೭.೬ ಮಿ.ಮೀ. ಬೀಳುತ್ತದೆ. ಹವಾಮಾನದಲ್ಲಿ ಯಾವ ವೈಪರಿತ್ಯಗಳು ಕಂಡುಬರದಿದ್ದರೂ ಮಳೆಗಾಲ ಮತ್ತು ಚಳಿಗಾಲದಲ್ಲಿ ಹವಾಮಾನವು ತಂಪಾಗಿರುತ್ತವೆ.

## ಬೆಟ್ಟಗಳು

ಲಿಂಗಸೂಗೂರು ತಾಲೂಕಿನ ಕೆಲವು ಭಾಗದಲ್ಲಿ ಬೆಟ್ಟ-ಗುಡ್ಡಗಳಿಂದ ಕೂಡಿದ್ದು ಕಂಡುಬರುತ್ತವೆ. ಅವುಗಳು ಸುಮಾರು ೧೫೦೦ ರಿಂದ ೧೭೭೪ ಅಡಿಗಳಷ್ಟು ಎತ್ತರವಿದ್ದು ಮಸ್ಕಿ, ಕರಡಕಲ್, ಮುದಗಲ್, ಗುಡಗುಂಟಿ, ಮಾಚನೂರು, ಗೌಡೂರು, ಕನಸಾವಿ,

ಪಿಕಳಿಹಾಳ, ವಂದಲಿ, ಅಮರೇಶ್ವರ, ಬೈಲಗುಡ್ಡ, ಗೋನವಾಂಟ್ಲು, ಜಲದುರ್ಗ, ಶೀಲಹಳ್ಳಿ, ಯಲಗಟ್ಟಿ ಹಾಗೂ ತವಗ ರೋಡಲಬಂಡಾ ಮೊದಲಾದೆಡೆಗಳಲ್ಲಿ ಹರಡಿಕೊಂಡಿವೆ.

ಲಿಂಗಸೂಗೂರು ತಾಲ್ಲೂಕಿನ ಪಿಕಳಿಹಾಳ, ಮಸ್ಕಿ, ಕರಡಿಕಲ್, ಬೆಣಕಲ್, ಗೌಡೂರು, ಮಾಚನೂರು, ಆನಾಹೂಸೂರು, ಹಲ್ಕಾವಟಗಿ ಮುಂತಾದ ಹಳ್ಳಿಗಳು ಪ್ರಾಗೈತಿಹಾಸಿಕ ಕಾಲದ ನೆಲೆಗಳಾಗಿವೆ.[೯]

## ಖನಿಜ ಸಂಪನ್ಮೂಲಗಳು

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನಲ್ಲಿ ವೈವಿಧ್ಯಮಯವಾದ ಖನಿಜ ನಿಕ್ಷೇಪಗಳಿಂದ ಶ್ರೀಮಂತವಾಗಿದೆ. ಚಿನ್ನ ಈ ಪ್ರದೇದಲ್ಲಿ ದೊರೆಯುತ್ತಿರುವ ಮುಖ್ಯ ಖನಿಜವಾಗಿದೆ. ಇದು ಆರ್ಥಿಕ ರಂಗದ ಮೇಲೆ ಮಹತ್ತರವಾದ ಪ್ರಭಾವ ಬೀರುವ ಮತ್ತು ಲಾಭ ತರಬಹುದಾದ ಖನಿಜಗಳು ಈ ಪ್ರದೇಶದಲ್ಲಿ ಹೇರಳವಾಗಿವೆ. ನವಶಿಲಾಯುಗದ ಅವಶೇಷಗಳನ್ನು ಪತ್ತೆ ಮಾಡಿರುವ ಪ್ರೊ.ಆರ್.ಆಲ್ಚಿನ್ ಅವರು ಈ ಭಾಗದಲ್ಲಿ ಚಿನ್ನದ ಗಣಿಗಾರಿಕೆ ನವಶಿಲಾಯುಗದಲ್ಲೇ ಪ್ರಾರಂಭವಾಗಿರಬಹುದೆಂದು ವಾದಿಸಿದ್ದಾರೆ. ಆ ಕಾಲದಲ್ಲಿ ಅತ್ಯಂತ ಆಳಕ್ಕೆ ಗಣಿ ಇಳಿದಿರುವ ಕುರುಹುಗಳು ಇಲ್ಲ. ಮೇಲ್ಮೈಯಲ್ಲಿ ಕಂಡ ಚಿನ್ನದ ಅದಿರನ್ನು ಬಗೆದು ತೆಗೆದಿರಬಹುದು. ಏಕೆಂದರೆ ಆಳದ ಗಣಿಗಾರಿಕೆ ನಡೆಸಲು ತಾಂತ್ರಿಕ ಸಲಕರಣೆಗಳು ಆ ಕಾಲದಲ್ಲಿ ಇರಲಿಲ್ಲ. ಮುಂದೆ ನಾಗರಿಕತೆ ಕಬ್ಬಿಣಯುಗಕ್ಕೆ ಕಾಲಿಟ್ಟಾಗ ಗಣಿ ಹೆಚ್ಚು ಒಳಪಡಿಸುವುದು ಸಾಧ್ಯವಾಗಿರಬಹುದು. ಪುರಾತನ ಗಣಿಗಳಲ್ಲಿ ದೊರೆತಿರುವ ಕಬ್ಬಿಣದ ಸಲಕರಣೆಗಳು ಈ ವಾದಕ್ಕೆ ಪುಷ್ಠಿ ನೀಡುತ್ತವೆ. ಮೌರ್ಯರ ಕಾಲದಲ್ಲಿ ಕರ್ನಾಟಕದಲ್ಲಿ ಚಿನ್ನದ ಗಣಿಗಳ ಅಭಿವೃದ್ಧಿಗಾಗಿ ಆ ನಂತರ ಶಾತವಾಹನ ಕಾಲದಲ್ಲಿ ಮುಂದುವರಿದಿರಬಹುದು ದೆಂದು ಆಲ್ಬಿನ್‌ರವರ ವಾದವಾಗಿದೆ.[೧೦]

## ನೀರಾವರಿ

ಬಾವಿಗಳು, ಕೆರೆಗಳು, ಹೊಳೆಗಳು ಪ್ರಮುಖ ನೀರಾವರಿಯ ಮೂಲಗಳಾಗಿವೆ. ಈ ತಾಲೂಕಿನಲ್ಲಿ ಹಲವು ಕೆರೆಗಳು ಇದ್ದರೂ ಮಳೆಗಾಲದ ನಂತರ ಅವುಗಳ ನೀರು ಬಹಳ ಬೇಗನೆ ಬರಿದಾಗಿ ಬತ್ತಿ ಹೋಗುತ್ತವೆ. ಇಲ್ಲಿನ ನೀರಾವರಿಯಾದ ನಿವ್ವಳ ಪ್ರದೇಶ ೧೩,೦೦೦ ಹೆಕ್ಟೇರ್ ಆಗಿದೆ. ಮೂರು ಹಂಗಾಮಿನಲ್ಲಿ ಕೃಷಿ ಚಟುವಟಿಕೆ ಆರಂಭವಾಗುತ್ತದೆ. ಕಳೆದ ವರ್ಷ ೨೦೧೮-೧೯ರ ಸಾಲಿನಲ್ಲಿ ಮುಂಗಾರಿನ ಹಂಗಾಮಿನಲ್ಲಿ ೮೩,೭೧೯ ಹೆಕ್ಟೇರ್ ನಲ್ಲಿ ಸಜ್ಜಿ, ಸೂರ್ಯಕಾಂತಿ, ಎಳ್ಳು, ಹೆಸರು, ತೊಗರಿ ಬಿತ್ತನೆ ಮಾಡಿದ್ದಾರೆ. ಹಿಂಗಾರಿನಲ್ಲಿ ೭೧,೪೬೪ ಹೆಕ್ಟೇರ್ ಪ್ರದೇಶದಲ್ಲಿ ಬಿಳಿಜೋಳ, ಕಡಲೆ, ಸೂರ್ಯಕಾಂತಿ, ಕಸುಬೆ ಬಿತ್ತನೆ

ಯಾಗಿದೆ. ಬೇಸಿಗೆ ಹಂಗಾಮಿನಲ್ಲಿ ೨೦,೧೨೫ ಹೆಕ್ಟೇರ್‌ನಲ್ಲಿ ಶೇಂಗಾ, ಅಲಸಂದಿ ಬಿತ್ತನೆ ಮಾಡಲಾಗಿದೆ. ಮುಖ್ಯವಾಗಿ ಬಿಳಿಜೋಳ, ಸಜ್ಜೆ, ಕಡಲೆ, ಹೆಸರು, ಅಲಸಂದಿ, ತೊಗರಿ, ಆಹಾರ ಬೆಳೆಯಾದರೆ ಸೂರ್ಯಕಾಂತಿ, ಶೇಂಗಾ ತಾಲ್ಲೂಕಿನ ವಾಣಿಜ್ಯ ಬೆಳಗಾಗಿವೆ.

**ಕೃಷ್ಣಾನದಿ**

ಕರ್ನಾಟಕದ ಜೀವನದಿಗಳಲ್ಲಿ ಒಂದಾಗಿರುವ ಕೃಷ್ಣಾ ನದಿಯು ಉತ್ತರ ಕರ್ನಾಟಕದ ಭಾಗಕ್ಕೆ ಅತಿ ಉಪಯುಕ್ತವಾದ ನದಿಯಾಗಿದೆ. ಇದು ಪವಿತ್ರ ನದಿ ಎಂದು ಹೆಸರು ಗಳಿಸಿದೆ. ಈ ತಾಲ್ಲೂಕಿನಲ್ಲಿ ಹರಿಯುವ ಮುಖ್ಯ ನದಿ ಕೃಷ್ಣಾ. ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಸಾಲಿನಲ್ಲಿ ಹುಟ್ಟುತ್ತದೆ. ಮಹಾರಾಷ್ಟ್ರ, ರಾಯಚೂರು, ಲಿಂಗಸೂಗೂರು, ಉಪ್ಪಿನಹಾಳು, ಹಳ್ಳಿ ಮೂಲಕ ಒಳ ಪ್ರವೇಶಿಸುತ್ತದೆ. ಇಲ್ಲಿಯ ಲಿಂಗಸೂಗೂರಿಗೆ ಸಮೀಪವಿರುವ ಜಾವೂರು ಬಳಿ ಕೃಷ್ಣನದಿಗೆ ಆಣೆಕಟ್ಟು ನಿರ್ಮಿಸಿದ್ದಾರೆ. ಸ್ಥಳೀಯರು ಇದಕ್ಕೆ ಹಿರೇಹೊಳೆ ಮತ್ತು ಕರಿಹೊಳೆ ಎಂಬ ಹೆಸರಿನಿಂದ ಕರೆಯುತ್ತಾರೆ. ಶಾಸನಗಳಲ್ಲಿ 'ಪೆರ್ದೊರೆ' ಸಂಸ್ಕೃತದಲ್ಲಿ 'ಕೃಷ್ಣವೇಣಿ' ಎಂಬ ಹೆಸರುಗಳು ಕಾಣಿಸುತ್ತಿದೆ. ಲಿಂಗಸೂಗೂರು ತಾಲ್ಲೂಕಿನ ಕಮಲದಿನ್ನಿ ಗ್ರಾಮದ ಶಾಸನದಲ್ಲಿ ಕೃಷ್ಣಾವೇಣಿ ಎಂದು ಕರೆದಿದೆ. ಕೃಷ್ಣಾ ನದಿಯನ್ನು ದಕ್ಷಿಣ ಗಂಗೆ ಎಂದು ಕರೆಯುತ್ತಾರೆ. ನವಲಿ, ರೌಡಲಬಂಡಿ, ಚಿತ್ತಾಪೂರ, ಜಾವೂರು ಮೊದಲಾದ ಗ್ರಾಮಗಳು ಆಣೆಕಟ್ಟಿನ ಒಡಲಲ್ಲಿ ಮುಳುಗಡೆಯಾಗಿವೆ.

**ಬೆಳೆಗಳು**

ಈ ತಾಲ್ಲೂಕಿನಲ್ಲಿ ಬೆಳೆಗಳನ್ನು ಎರಡು ಅವಧಿಯಲ್ಲಿ ಬೆಳೆಯುತ್ತಾರೆ. ಅವುಗಳು ಮುಂಗಾರು ಬೆಳೆಗಳು ಮತ್ತು ಹಿಂಗಾರು ಬೆಳೆಗಳು ಆಗಿವೆ.

೧. **ಮುಂಗಾರು ಬೆಳೆಗಳು:** ಶೇಂಗಾ, ತೊಗರಿ, ಸಜ್ಜೆ, ಅಲಸಂದಿ, ಕೆಂಪು ಜೋಳ, ನವಣಿ ಇವುಗಳನ್ನು ಜೂನ್ ತಿಂಗಳಲ್ಲಿ ಬಿತ್ತನೆ ಮಾಡುತ್ತಾರೆ.

೨. **ಹಿಂಗಾರು ಬೆಳೆಗಳು:** ಹತ್ತಿ, ಜೋಳ, ಕುಸುಬೆ, ಗೋಧಿ, ಕಡಲೆ, ಹುರುಳಿ ಇತ್ಯಾದಿ ಬೆಳೆಗಳನ್ನು ಅಕ್ಟೋಬರ್ ಅಥವಾ ನವೆಂಬರ್ ತಿಂಗಳಿನಲ್ಲಿ ಬಿತ್ತನೆ ಮಾಡಿ ಬೆಳೆಯುತ್ತಾರೆ.

**೨.೨. ಪ್ರಾಗೈತಿಹಾಸ**

ಸಾಮಾನ್ಯವಾಗಿ ಪ್ರಾಗೈತಿಹಾಸಿಕ ಕಾಲವೆಂದರೆ ನಮಗೆ ಲಿಖಿತ ದಾಖಲೆ ಸಿಕ್ಕುವವರೆಗೆ ಇರುವ ಕಾಲಾವಧಿಯನ್ನು ಪ್ರಾಗೈತಿಹಾಸಿಕ ಅವಧಿ ಎಂದು ಹೇಳುತ್ತೇವೆ. ಅಂದರೆ ಬರೆದಿಡಲ್ಪಟ್ಟ ಇತಿಹಾಸವು ಹುಟ್ಟುವ ಮೊದಲು ಇದ್ದ ಚರಿತ್ರೆಯೆಂದು ತಿಳಿಯಬಹುದು.

ಆ ಕಾಲದಲ್ಲಿ ವ್ಯಕ್ತಿ ಬಂಡೆಗಳ ಆಸರೆಯಲ್ಲಿ, ಗುಹೆಯಲ್ಲಿ, ನದಿಗಳ ದಡದಲ್ಲಿ ವಾಸಿಸುತ್ತಿದ್ದನು. ಕಾಡಿನಲ್ಲಿ ಪ್ರಾಣಿಗಳನ್ನು ಕೊಂದು ತನ್ನ ಆಹಾರವನ್ನು ಗಳಿಸುತ್ತಿದ್ದ. ಅಲ್ಲಿರುವ ಪ್ರಾಣಿಗಳ ಚರ್ಮ ಮತ್ತು ಗಿಡಗಳ ತೊಗಟೆಯನ್ನು ವಸ್ತ್ರವನ್ನಾಗಿ ಉಪಯೋಗಿಸುತ್ತಿದ್ದ. ಕಲ್ಲಿನ ಆಯುಧಗಳನ್ನು ತನ್ನ ಕೆಲಸ ಕಾರ್ಯಗಳಲ್ಲಿ ಅಧಿಕವಾಗಿ ಬಳಸುತ್ತಿದ್ದನು. ಆದ್ದರಿಂದ ಮನುಷ್ಯನ ಬದುಕಿನ ಪ್ರಾಕ್ತನ ಶೋಧದಲ್ಲಿ ನವಶಿಲಾಯುಗ, ಸೂಕ್ಷ್ಮಶಿಲಾಯುಗ ಹಾಗೂ ಕಬ್ಬಿಣ ಯುಗದ ಅವಶೇಷಗಳು ದೊರೆತಿವೆ. ಮಸ್ಕಿ ಮತ್ತು ಪಿಕ್ಕಿಹಾಳ ಗುಡ್ಡಗಳಲ್ಲಿ ನವಶಿಲಾಯುಗ, ಬೃಹತ್ ಶಿಲಾಯುಗದ ಅವಶೇಷಗಳು ಪತ್ತೆಯಾಗಿವೆ. ಹೊನ್ನಳ್ಳಿ, ಗೌಡುರು, ಮಟ್ಟೂರು, ಮಾಚನೂರುಗಳಲ್ಲಿ ನವಶಿಲಾಯುಗದ ಅವಶೇಷಗಳು ದೊರಕಿವೆ. ಭೂಗರ್ಭ ಶಾಸ್ತ್ರಜ್ಞ ಕ್ಯಾಪ್ಟನ್ ಲಿಯೋನಾರ್ಡ್‌ಮನ್ ಜಿಲ್ಲೆಯ ಪ್ರಾಚೀನ ವಸ್ತುಗಳನ್ನು ಕುರಿತು ಅಪಾರ ಪಾಂಡಿತ್ಯವನ್ನು ಹೊಂದಿದ್ದು, ಮಸ್ಕಿಯಲ್ಲಿ ದೊರೆತ ಕುರುಹುಗಳಿಗೆ ವಿಶೇಷ ಸ್ಥಾನವನ್ನು ನೀಡಿದ್ದಾನೆ. ಶಿಲಾಯುಗದಿಂದ ಲೋಹಯುಗಕ್ಕೆ ಕಾಲಿಟ್ಟಾಗ ಅವನು ಮೊದಲು ಬಳಸಿದ ಲೋಹ ತಾಮ್ರ, ಇಲ್ಲಿ ತಾಮ್ರ ಆಯುಧಗಳಿಗಿಂತ ಶಿಲೆಗಳ ಆಯುಧಗಳಿಗೆ ಹೆಚ್ಚು ಬಳಕೆಯಲ್ಲಿದ್ದವು. ತಾಮ್ರಾ ಮತ್ತು ಶಿಲೆ ಎರಡನ್ನು ಆಯುಧಗಳಾಗಿ ಉಪಯೋಗಿಸಿದ್ದರಿಂದ ಇದನ್ನು 'ತಾಮ್ರ ಶಿಲಾಯುಗ'ವೆಂದು ಕರೆಯುವರು. ದನ, ಕುರಿ ಮೊದಲಾದ ಪ್ರಾಣಿಗಳ ಮೂಳೆಗಳು ಚಾಕು, ಗಾಜಿನ ಮಣಿಗಳು, ಮಡಕೆ, ಮಣ್ಣಿನ ಮಣಿಗಳು, ಗಾಜು, ಕಂದು ಬಣ್ಣದ ಮೃತ್ಪಾತ್ರೆಗಳು, ಶಿಲಾಯುಗಕ್ಕೆ ಸೇರಿದ ಮೂರು ಸಮಾಧಿಗಳು ದೊರೆತಿವೆ.

ಕಬ್ಬಿಣ ಯುಗದಲ್ಲಿ ಮೊದಲು ಸಮಾಧಿಗಳಿಗೆ ಪ್ರಾಶಸ್ತ್ಯ ಕೊಡಲಾಯಿತು. ಸಮಾಧಿಗಳಿಗೆ ದೊಡ್ಡ ಕಲ್ಲುಗಳನ್ನು ಬಳಕೆ ಮಾಡಿದ್ದರಿಂದ ಈ ಸಂಸ್ಕೃತಿಯನ್ನು 'ಬೃಹತ್ ಶಿಲಾ ಸಂಸ್ಕೃತಿ' ಎಂದು ಕರೆಯುತ್ತಾರೆ. ಇಂತಹ ಸಮಾಧಿಗಳು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಮಸ್ಕಿ ಪಟ್ಟಣದಲ್ಲಿ ಕಂಡುಬರುತ್ತವೆ. ಈ ಸಮಾಧಿಗಳು ಉತ್ಖನನದಿಂದ ಆ ಕಾಲದಲ್ಲಿ ಬಳಸುತ್ತಿದ್ದ ಮಣ್ಣಿನ ವಿವಿಧ ಆಕಾರ ಮತ್ತು ಆಳತೆಯ ಮಡಿಕೆಗಳು, ಬಟ್ಟಲುಗಳು, ಮುಚ್ಚಳಗಳು, ಕಬ್ಬಿಣದ ಆಯುಧಗಳು ಮುಂತಾದವುಗಳ ವಿವರ ದೊರೆತಿವೆ.[೨]

ಲಿಂಗಸೂಗೂರು ತಾಲೂಕಿನ ಕರಡಿಕಲ್ ಗ್ರಾಮದ ಹತ್ತಿರದಲ್ಲಿ ಭಿಲ್ಲಮರಾಯನ ಗುಡ್ಡದಲ್ಲಿ ಬಯಲು ಬಂಡೆ ಚಿತ್ರಗಳು ಸಮ ಸಹಜವಾಗಿ ಭಿನ್ನವಾಗಿದೆ. ದೊಡ್ಡ ದೊಡ್ಡ ಬಂಡೆಗಳ ರಾಶಿಯಂತಿರುವ ಬೆಟ್ಟಗಳ ಗುಡ್ಡದಲ್ಲಿಯ ಇತಿಹಾಸ ಕಾಲದ ಹುಲಿಯ ಚಿತ್ರವು ಇದೆ. ಇದರಲ್ಲಿ ಕುಟ್ಟುವಿಕೆ ಮತ್ತು ಗೀರುವಿಕೆ ಇವೆರಡು ತಂತ್ರಗಳನ್ನು ಇಲ್ಲಿ ಬಳಸಲಾಗಿದೆ. ಅಲ್ಲದೆ ಮಸ್ಕಿ ಪಟ್ಟಣದ ಬಯಲು ಸೀಮೆ ಪ್ರದೇಶದಲ್ಲಿಯು ಬೆಟ್ಟಗಳ ಸಾಲುಗಳಲ್ಲಿ ಇಂಥ

ಗೀರು ಚಿತ್ರಗಳಿರುವುದನ್ನು ಈಗಾಗಲೇ ಗಮನಿಸಿದ್ದು, ಈ ನೆಲೆಗಳಲ್ಲಿ ಯಥಾಪ್ರಕಾರ ಗೂಳಿ, ಆಕಳು, ಜಿಂಕೆಗಳ ಚಿತ್ರಗಳೇ ಹೆಚ್ಚು ಮನುಷ್ಯಕೃತಿಗಳು ತೀರಾ ಕಡಿಮೆ. ರೇಖಾಮಂಡಲ ಚಿತ್ರಗಳು ಬಹಳ ಅಪರೂಪವಾಗಿವೆ.[೧೩]

**ಇತಿಹಾಸ ಕಾಲ**

ಭಾರತದಲ್ಲಿ ದೊರೆಯುವ ಪ್ರಥಮ ಲಿಖಿತ ದಾಖಲೆಗಳೆಂದರೆ ಕ್ರಿ.ಪೂ. ೩ನೇ ಶತಮಾನದ ಅಶೋಕನ ಶಾಸನಗಳು ಇದುವರೆಗೆ ಕರ್ನಾಟಕದಲ್ಲಿ ದೊರೆತ ಅವನ ೧೩ ಶಾಸನಗಳಲ್ಲಿ ೩ ರಾಯಚೂರು ಜಿಲ್ಲೆಗೆ ಸೇರಿವೆ. ಇವುಗಳಲ್ಲಿ ಮಸ್ಕಿಯ ಶಾಸನ ಬಹುಮುಖ್ಯ ವಾದುದು. ಈ ಶಾಸನವನ್ನು ಸಿ.ಬಿಡನ್ ಎಂಬುವನು ೧೯೧೫ರಲ್ಲಿ ಪತ್ತೆ ಹೆಚ್ಚಿದನು. ಅಶೋಕನ ಉಳಿದೆಲ್ಲ ಶಾಸನಗಳಲ್ಲಿ 'ದೇವನಾಂಪ್ರಿಯ', ಪ್ರಿಯದರ್ಶಿ' ಎಂಬ ಅವನ ಬಿರುದು ಅಥವಾ ಉಪನಾಮಗಳಿವೆಯೇ ಹೊರತು ನಿಜನಾಮಧೇಯ ಉಕ್ತವಾಗಿಲ್ಲ. ಆದರೆ ಮಸ್ಕಿಯ ಶಾಸನದಲ್ಲಿ ಮೊದಲ ಮೊದಲ ಬಾರಿಗೆ ಅಶೋಕನ ಹೆಸರು ಉಲ್ಲೇಖ ವಾಗಿದೆ. ಇದರಿಂದ ಈ ಎಲ್ಲ ಶಾಸನಗಳ ಕರ್ತೃ ಮೌರ್ಯ ವಂಶದ ಅಶೋಕನೆಂದು ಹೇಳುತ್ತೇವೆ. ಆದ್ದರಿಂದ ಭಾರತದ ಇತಿಹಾಸಕ್ಕೆ ಮಸ್ಕಿ ಶಾಸನದ ಕೊಡುಗೆ ಅತ್ಯಮೂಲ್ಯವಾಗಿದೆ.

**೨.೩. ಸ್ಥಳನಾಮ**

ಸ್ಥಳನಾಮ ಎನ್ನುವುದು ಸಾಮಾನ್ಯವಾಗಿ ಅಲ್ಲಿನ ಭೌಗೋಳಿಕ ಮತ್ತು ಸಂಸ್ಕೃತಿಯ ವೈಶಿಷ್ಟ್ಯತೆಯ ಮೂಲಗಳ ಮೇಲೆ ಬಂದಿರುತ್ತದೆ. ಹಾಗಾಗಿ ಒಂದು ಪ್ರದೇಶವನ್ನು ಅಧ್ಯಯನ ಮಾಡುವಾಗ ಸನ್ನಿವೇಶಗಳನ್ನು ಗುರುತಿಸಿರುವುದು ಅವಶ್ಯಕವಾಗಿರುತ್ತದೆ. ಯಾವ ಒಂದು ನಿರ್ದಿಷ್ಟ ಕಾಲದಲ್ಲಿ ಕೆರೆಯ ಹೆಸರಿನಲ್ಲಿ ಅಥವಾ ಭೂಮಿಯ ಹೆಸರಿನಲ್ಲಿ ಅಥವಾ ಊರಿನ ಭೌಗೋಳಿಕ ಪರಿಸರ ನೈಸರ್ಗಿಕ ಬೆಟ್ಟಗುಡ್ಡಗಳಿಂದ ರೂಪಿಸಿಕೊಂಡಿರುತ್ತೇವೆ. ಅಂತಹವುಗಳ ಹೆಸರಿನ ಮೆಲೆ ಸ್ಥಳನಾಮಗಳು ಹುಟ್ಟಿಕೊಂಡಿರುತ್ತವೆ. ಆ ಪ್ರದೇಶದಲ್ಲಿ ಒಬ್ಬ ವ್ಯಕ್ತಿಯು ಸಾಧನೆ ಮಾಡಿದ್ದರೆ ಅವರ ಹೆಸರಿನಲ್ಲಿ ಮತ್ತು ಅಧಿಕಾರಿಗಳ ಹೆಸರಿನಲ್ಲಿ ಸಾಧನೆ ಮಾಡಿದ್ದರೆ ಅವರ ಹೆಸರಿನಲ್ಲಿ ಮತ್ತು ಕುಲದೇವತೆಯ ಹೆಸರಿನ ಸ್ಥಳನಾಮಗಳು ಹುಟ್ಟಿಕೊಂಡಿರುತ್ತವೆ.

ಎಂ.ಎಂ.ಕಲಬುರ್ಗಿ ಅವರು ಗ್ರಾಮದ ಸ್ಥಳನಾಮಗಳ ಬಗ್ಗೆ ಮೂರು ರೀತಿಯಲ್ಲಿ ಪದಗಳನ್ನು ಗುರುತಿಸುತ್ತಾರೆ. ಮೊದಲನೆಯದು ಪಾಮರ ನಿಷ್ಪತ್ತಿ, ಎರಡನೆಯದು ಪಂಡಿತರ ನಿಷ್ಪತ್ತಿ ಮತ್ತು ಮೂರನೆಯದು ನಿಜ ನಿಷ್ಪತ್ತಿ. ಮೊದಲೆರಡು ಕಾಲ್ಪನಿಕ ಕಥೆಗಳನ್ನು ಹೊಂದಿರು ತ್ತವೆ. ಮೂರನೆಯದು ಸತ್ಯವಾಗಿರುತ್ತದೆ. ಮೊದಲೆರಡು ಪದಗಳು ಹಲವಾರು ಸಾರಿ

ಕೇಳುತ್ತೇವೆ ಎಂಬ ಪದವು ಒಂದು ಪದ ಅಥವಾ ನಾಮ ಇರುತ್ತದೆ. ಇಂತಹ ಕೆಲವು ಶಾಸನಗಳಲ್ಲಿ ಉಲ್ಲೇಖಿಸಿದರೆ ಇನ್ನೂ ಕೆಲವು ಉಲ್ಲೇಖಗೊಂಡಿರುವುದಿಲ್ಲ. ಸ್ಥಳನಾಮಗಳಿಂದ ನಮಗೆ ಸ್ಥಳ ಉಪಯೋಗವೇನೆಂದರೆ ಒಂದು ಪ್ರದೇಶದ ಸ್ಥಳನಾಮ ಯಾವ ಕಾಲಘಟ್ಟದಲ್ಲಿ ಮತ್ತು ಯಾವ ಹೆಸರಿನಿಂದ ಏಕೆ ಪಡೆದಿದೆ ಮತ್ತು ಪ್ರಸ್ತುತ ಆ ಪ್ರದೇಶದ ಹೆಸರು ಮುಂತಾದ ವಿಷಯಗಳನ್ನು ತಿಳಿಯಲು ಸಹಾಯಕವಾಗುತ್ತದೆ.

ಲಿಂಗಸೂಗೂರು ತಾಲೂಕಿನ ಇತಿಹಾಸದ ಭವ್ಯಪರಂಪರೆ, ಧಾರ್ಮಿಕ ಸಿದ್ಧಾಂತಗಳು, ಶರಣದಾಸರ ವಿಚಾರಗಳಿಂದ ಈ ನೆಲದ ಮಣ್ಣಿನ ಗುಣಗಳು ಜನರ ಜೀವನವನ್ನು ಮಹೋನ್ನತಗೊಳಿಸಿವೆ. ಸಾಹಿತ್ಯ-ಸಂಗೀತ ಕಾಲಾರಾಧಕರನ್ನಾಗಿ ಬೆಳೆಸಿವೆ. ಇವರ ಭವ್ಯ ಸಂಸ್ಕೃತಿಗಳು ಇಲ್ಲಿಯ ಸ್ಥಳನಾಮಗಳಲ್ಲಿ ಪ್ರತಿಬಿಂಬಿಸುತ್ತವೆ. ಸ್ಥಳನಾಮಗಳೂ ಜನರ ಜೀವನ ಮೌಲ್ಯಗಳ ಪ್ರತೀಕವಾಗಿವೆ. ಆದುದರಿಂದ ಈ ತಾಲ್ಲೂಕಿನ ಗ್ರಾಮಗಳ ಸ್ಥಳನಾಮಗಳನ್ನು ಸಾಂಸ್ಕೃತಿಕ ನೆಲೆಯಲ್ಲಿ ವಿವೇಚಿಸಿದರೆ ಲಿಂಗಸೂಗೂರು ತಾಲೂಕಿನ ಜನ ಜೀವನದ ಸಂಸ್ಕೃತಿಯ ಆಯಾಮಗಳು ಅನಾವರಣಗೊಳ್ಳುವುದರಲ್ಲಿ ಯಾವ ಸಂದೇಹವಿಲ್ಲ. ಇಲ್ಲಿಯ ಸ್ಥಳನಾಮಗಳು ಈ ಪ್ರದೇಶದ ಗುಣ ಸ್ವಭಾವವನ್ನು ಮತ್ತು ಜನಜೀವನದ ದರ್ಶನವನ್ನು ಮಾಡಿಕೊಡುತ್ತವೆ. ಸ್ಥಳನಾಮಗಳಲ್ಲಿ ದೇಶಿಯ ಕನ್ನಡ ಭಾಷೆಯ ಸೊಗಡಿದೆ. ಇವುಗಳ ಮೇಲೆ ಇತರ ಭಾಷೆಯ ಪ್ರಭಾವ ಬಹು ಕಡಿಮೆಯಿದೆ ಎಂದು ತಿಳಿಯಬಹುದಾಗಿದೆ.

ಇಂದು ತಾಲೂಕು ಕೇಂದ್ರವಾಗಿರುವ 'ಲಿಂಗಸೂಗೂರು' ಇದರ ಮೂಲ ಹೆಸರು 'ಛಾವಣಿ'. ನೂರಾರು ವರ್ಷಗಳ ಹಿಂದೆ ಜನವಸತಿಯ ನೆಲೆ ಆಗಿರಲಿಲ್ಲ. ೧೭ನೆಯ ಶತಮಾನದಲ್ಲಿ ಹೈದ್ರಾಬಾದ್ ನಿಜಾಮರ ಆಡಳಿತದಲ್ಲಿ ಅಂದಿನ ಬ್ರಿಟಿಷ್ ಸರಕಾರವು ವಿವಿಧ ಭಾಗದಲ್ಲಿ ರಾಜಕೀಯ ಪ್ರತಿನಿಧಿಗಳನ್ನು ನೇಮಿಸುತ್ತಿದ್ದರು. ಅವರ ಸಹಾಯಕ್ಕೆ ಬ್ರಿಟಿಷ್ ಸೈನ್ಯವನ್ನು ಇಡಲಾಗುತ್ತಿತು. ಸೈನ್ಯವಿರುವ ಸ್ಥಳವನ್ನು 'ಛಾವಣಿ ಅಥವಾ ದಂಡು' ಪ್ರದೇಶವೆಂದು ಕರೆಯಲಾಯಿತು. ಇಲ್ಲಿಯವರೆಗೆ ಈ ಊರಿನ ಹೆಸರನ್ನು ಲಿಂಗಸೂಗೂರು(ಛಾವಣಿ) ಎಂದು ಬರೆಯಲಾಗುತ್ತಿತ್ತು. ಆದರೆ ಇಂದು ಬರೀ 'ಲಿಂಗಸೂಗೂರ' ಎಂದು ಬರೆಯ ಲಾಗುತ್ತಿದೆ. ಈ 'ಛಾವಣಿ'ಗೆ ಲಿಂಗಸೂಗೂರು ಎಂದು ಕರೆಯಲು ಈ ಹೆಸರಿನ ಹಿನ್ನೆಲೆ ತಿಳಿಯಲು ವಿಶೇಷವಾಗಿದೆ.

ಈ 'ಛಾವಣಿ'ಗೆ ಸಮೀಪವಿರುವ ಇಲ್ಲಿನ ಪುರಸಭಾ ವ್ಯಾಪ್ತಿಯಲ್ಲಿ ಬರುವ ಇಂದಿನ 'ಕಸಬಾ ಲಿಂಗಸೂಗೂರು' ಇದರ ಮೂಲ ಲಿಂಗಸೂಗೂರು. ಬ್ರಿಟಿಷರ ದಂಡು ಪ್ರದೇಶ

ವಾಗಿರುವ 'ಭಾವಣಿ' ಮೂಲ ಲಿಂಗಸೂಗೂರು. ಅಂದರೆ ಇಂದಿನ ಕಸಬಾ ಲಿಂಗಸೂಗೂರಿನ ಸೀಮಾಂತರದಲ್ಲಿರುವುದರಿಂದ ಇದಕ್ಕೆ ಲಿಂಗಸೂಗೂರು(ಭಾವಣಿ) ಎಂದು ಕರೆಯಲಾಯಿತು. ಮೂಲ ಹಾಗೂ ಈ ಭಾವಣಿಗಳೆರಡಕ್ಕೂ ಒಂದೇ ಹೆಸರಿನಿಂದ ಕರೆದರೆ ಗೊಂದಲ ಉಂಟಾಗುತ್ತಿದ್ದರಿಂದ ಇದನ್ನು ನಿವಾರಣೆ ಮಾಡಲು ಆಡಳಿತಾತ್ಮಕವಾಗಿ ಕಂದಾಯ ಪರಿಭಾಷೆಯಲ್ಲಿ ಮೂಲ ಸ್ಥಳವನ್ನು ಗುರುತಿಸಲು ಬಳಸುವ 'ಕಸಬಾ' ಎಂಬ ಪದವನ್ನು ಸೇರಿಸುವುದರ ಮೂಲಕ ಸರಕಾರಿ ಶಾಳೆಯ ದಾಖಲೆಗಳಲ್ಲಿ ಇದನ್ನು 'ಕಸಬಾ ಲಿಂಗಸೂಗೂರು' ಎಂದು ಕರೆಯಲಾಯಿತು. 'ಕಸಬಾ' ಎಂಬುದು ಉರ್ದು ಪದ. ಇದರ ಅರ್ಥ ಗ್ರಾಮ.

ಈ ಹಿಂದೆ ೧೨ನೇ ಶತಮಾನದಲ್ಲಿ ಲಿಂಗಸೂಗೂರು ವ್ಯಾಪ್ತಿಯಲ್ಲಿ ಬರುವ ಕರಡಕಲ್ ರಾಜಧಾನಿಯಾಗಿಸಿಕೊಂಡು 'ಭಿಲ್ಲಮರಾಜ' ಕಲ್ಯಾಣ ಚಾಲುಕ್ಯರ ಸಾಮಂತರನ್ನಾಗಿಆಳುತ್ತಿದ್ದನು. ಶಿವಜಾತ ಒಡೆಯರು ಈತನ ಗುರುವಾಗಿದ್ದರನು. ಕರಡಕಲ್ಲು-೪೦೦ ಎಂದು ಕರೆಯಲಾಗುತ್ತಿದ್ದ ಈತನ ರಾಜ್ಯದಲ್ಲಿ ಬರುವ ಊರುಗಳಲ್ಲಿ ಇಂದಿನ ಕಸಬಾ ಲಿಂಗಸೂಗೂರು ಕೂಡ ಒಂದಾಗಿತ್ತು. ಆ ವೇಳೆಯಲ್ಲಿ ಈ ಊರನ್ನು 'ಲಿಂಗ'ಎಂದು ಕರೆಯುತ್ತಿದ್ದರು. ಈ ಕುರಿತಾಗಿ ಈ ಊರಿನ ಇತಿಹಾಸ ಪ್ರಸಿದ್ಧವಾದ ಕಲ್ಯಾಣ ಚಾಲುಕ್ಯ ದೊರೆ ಅಹವಮಲ್ಲನ ರಾಣಿ ಮಹಾದೇವಿಯ ಆರಾಧ್ಯ ದೈವವನಾದ ಕಲ್ಲಿನಾಥ(ಕಲ್ಲೇಶ್ವರ) ದೇವಾಲಯದಲ್ಲಿರುವ ಶಾಸನದಲ್ಲಿ ನಮಗೆ ಮಾಹಿತಿ ದೊರೆಯುತ್ತದೆ.

ಕುಡತಿನಿಯ ಸಿದ್ಧನಗೌಡ ಎಂಬುವರು ಈ 'ಲಿಂಗ' ಊರಿನ ಗೌಡರು. ಇವರ ಆಡಳಿತ ವ್ಯಾಪ್ತಿಯಲ್ಲಿ ಕುಪ್ಪಿ, ಯಕ್ಲಟ್ಟ, ಮೂಕಾರ್ತಿ, ಬೆಳಗುಂದಿ, ಆಂತರಗಂಗಿ ಹಾಗೂ ಬೂದಗುಂಪಿ ಮೊದಲಾದ ಊರುಗಳಿದ್ದವು. ಜೊತೆಗೆ ಲಿಂಗದೊಂದಿಗೆ ಎಲ್ಲಾ ಊರುಗಳನ್ನು ನೋಡಿಕೊಳ್ಳುತ್ತಿದ್ದನು ಹಾಗೂ ರಾತ್ರಿಯ ವೇಳೆಯಲ್ಲಿ ಈ ಎಲ್ಲಾ ಊರುಗಳಲ್ಲಿ ಗಸ್ತು ತಿರುಗುತ್ತಿದ್ದ ಆದರೆ ಇದು ಕಷ್ಟದಾಯಕವಾಗಿತ್ತು. ಹೀಗಿರುವಾಗ 'ಲಿಂಗ' ಗ್ರಾಮದ ಮಹಾದ್ವಾರದ ಮುಂಭಾಗದ ಹತ್ತಿರದ ಬಯಲಿನಲ್ಲಿ ಬೆಳೆದ ದೊಡ್ಡ ಹುತ್ತದಿಂದ ಒಂದು ಶಿವಲಿಂಗ ಕಾಣಿಸಿತು. ಆಗ ಅದಕ್ಕೆ 'ಅಮೃತ ಲಿಂಗ' ಎಂದು ಕರೆಯಲಾಯಿತು. ಸಿದ್ಧನಗೌಡರು ತಮ್ಮ ಆಡಳಿತದ ದೃಷ್ಟಿಯಿಂದ 'ಲಿಂಗ'ದೊಂದಿಗೆ ಸುತ್ತಲಿನ ಎಲ್ಲಾ ಊರುಗಳನ್ನು ಸೇರಿಸಿ ಒಂದಾಗಿಸುವ ಯೋಚನೆಯಲ್ಲಿದ್ದಾಗ ಈ ಲಿಂಗವು ದೊರೆತಿತ್ತು. ಅಲ್ಲದೇ, ಇದೇ ಸಂದರ್ಭ ದಲ್ಲಿ 'ಲಿಂಗ' ಗ್ರಾಮದ ಹೊರವಲಯದಲ್ಲಿ ಯಾರೋ ಒಬ್ಬ ಶಿವಯೋಗಿಗಳು ಆಲದ

ಮರದ ಕೆಳಗೆ ಧ್ಯಾನದಲ್ಲಿ ತಲ್ಲೀನರಾಗಿರುವುದನ್ನು ಕಂಡು ಅಲ್ಲಿನ ಗ್ರಾಮದ ಜನರು ಗೌಡರಿಗೆ ತಿಳಿಸಿದರು. ಆಗ ಶಿವಯೋಗಿಗಳನ್ನು ನೋಡಿದ ಗೌಡರು ತಮ್ಮ ಮನೆತನದ ಗುರುಗಳಾದ ಶ್ರೀ ಗುರುಶಾಂತಸ್ವಾಮಿಗಳಾಗಿದ್ದರು. ಏಕೀಕೃತಗೊಂಡ ಈ ಊರಿಗೆ ಏನೆಂದು ಹೆಸರಿಡಬೇಕೆಂದು ಗುರುಗಳನ್ನು ಕೇಳಿದರು. ಆಗ ಗುರುಗಳು ಈ ಏಕೀಕೃತ ಗ್ರಾಮಕ್ಕೆ 'ಲಿಂಗಶ್ರೀ ಗುರು' ಎಂದು ಹೆಸರಿಸುವಂತೆ ಸೂಚನೆ ನೀಡುತ್ತಾರೆ. ಹಾಗಾಗಿ ಈ ಊರಿಗೆ ಮೊದಲು 'ಲಿಂಗ ಶ್ರೀಗುರು'ಎಂದು ಹೆಸರಾಯಿತು. ನಂತರದ ದಿನಗಳಲ್ಲಿ ಈ ಊರಿನ ಸುತ್ತಲೂ ಶಂಕರಲಿಂಗ, ಕಲ್ಲಿನಾಥ ಲಿಂಗ, ಅಮೃತಲಿಂಗ, ಬಸವಲಿಂಗ, ಗವಿಸಂಗಮಲಿಂಗ, ರಾಮಲಿಂಗ ಎಂಬ ಲಿಂಗಗಳು ಕಂಡುಬರುವುದರಿಂದ ಜನ ಈ ಊರಿಗೆ 'ಲಿಂಗಸಾಗರ' ಎಂದು ಕರೆಯ ತೊಡಗಿದರು. ಮುಂದೊಂದು ದಿನ ಈ ಹೆಸರೇ ಜನರ ಬಾಯಲಿ ಲಿಂಗಸೂಗೂರು ಎಂದಾಗಿ ಬದಲಾಯಿತು.

## ೨.೪. ಇತಿಹಾಸ

ತನ್ನದೇ ಆದ ಇತಿಹಾಸ ಮತ್ತು ಪರಂಪರೆಯನ್ನು ಹೊಂದಿರುವ ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕು ಕರ್ನಾಟಕದ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದೆ. ಮೌರ್ಯರು, ಶಾತವಾಹನರು, ಕದಂಬರು, ಬದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ವಿಜಯನಗರದ ಅರಸರು, ಬಹುಮನಿ ಮತ್ತು ವಿಜಾಪುರದ ಆದಿಲ್‌ಶಾಹಿಗಳು, ಬ್ರಿಟಿಷರು, ಹೈದ್ರಾಬಾದ್ ನಿಜಾಮರು, ಸ್ಥಳೀಯ ಸಂಸ್ಥಾನಿಕರು ಆಳ್ವಿಕೆ ಮಾಡಿರುವ ಕುರಿತು ಅನೇಕ ಆಧಾರಗಳಿವೆ ಮತ್ತು ಬ್ರಿಟಿಷರು ಈ ಭಾಗವನ್ನು ಆಳಿದ್ದಾರೆ ಎನ್ನಲಾದ ಸಾಕಷ್ಟು ಕುರುಹುಗಳು ದೊರೆಯುತ್ತವೆ. ಅರ ಸಮಾಧಿಗಳು ಲಿಂಗಸೂಗೂರು ಬೈಪಾಸ್ ರಸ್ತೆಯಲ್ಲಿ ನೋಡುಗರಿಗೆ ಗಮನ ಸೆಳೆಯುತ್ತವೆ. ಅಷ್ಟೇ ಅಲ್ಲದೆ ಈ ಭೂ ಭಾಗವನ್ನು ಹೈದ್ರಾಬಾದ್ ನಿಜಾಮರ ಸಂಸ್ಥಾನ ಅಧೀನವಾಗಿ ಆಳಲ್ಪಟ್ಟಿತು. ಹೀಗೆ ಎಲ್ಲ ಮನೆತನಗಳ ಆಳ್ವಿಕೆಯ ಬಗ್ಗೆ ಅಷ್ಟೇ ಅಲ್ಲದೆ ಅಂದಿನ ಕಾಲದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಇತಿಹಾಸವನ್ನು ಈ ಪ್ರಬಂಧದಲ್ಲಿ ಸೆರೆ ಹಿಡಿಯಲಾಗಿದೆ.

### ಮೌರ್ಯರು

ಲಿಂಗಸೂಗೂರು ತಾಲೂಕಿನ ಇತಿಹಾಸವು ಮೌರ್ಯರ ಕಾಲದಿಂದ ಪ್ರಾರಂಭವಾಗುತ್ತದೆ. ಈ ಪ್ರದೇಶವು ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆಗೆ ಒಳಪಟ್ಟಿತ್ತು. ಐತಿಹಾಸಿಕ

ಘನತೆಯಿಂದ ಪ್ರಸಿದ್ಧವಾದ ಈ ಪ್ರದೇಶವು ಕರ್ನಾಟಕ ಚರಿತ್ರೆಯಲ್ಲಿ ವಹಿಸಿದ ಪಾತ್ರವು ಚಿರಸ್ಮರಣೀಯವಾದದು. ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ಈ ಪ್ರದೇಶಕ್ಕೆ ವಿಶಿಷ್ಟ ಸ್ಥಾನವಿದೆ. ಭಾರತದಲ್ಲಿ ಮೊದಲ ದೊರೆತ ಲಿಖಿತ ಶಾಸನಗಳೆಂದರೆ ಶಾಸನಗಳು. ಇವು ೩ನೇ ಶತಮಾನದ ಅಶೋಕನ ಕಾಲದ ಮೌರ್ಯರು ಪಾಟಲೀಪುತ್ರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ಮಾಡಿದರೂ ದಕ್ಷಿಣ ಭಾರತದವರೆಗೂ ಅವರ ಆಳ್ವಿಕೆ ಮಾಡಿದ್ದಾರೆ. ಲಿಂಗಸೂಗೂರು ತಾಲೂಕು ಕ್ರಿ.ಶ.ಪೂ.೩೦೦ರಲ್ಲಿ ಅಶೋಕನ ಆಳ್ವಿಕೆಗೆ ಒಳಪಟ್ಟಿತು ಎಂಬ ಉಲ್ಲೇಖ ಮಸ್ಕಿ ಶಾಸನದಲ್ಲಿ ಲಭ್ಯವಾಗುತ್ತದೆ.[೧೪] ಮೊಟ್ಟಮೊದಲ ಬಾರಿಗೆ ದೊರೆತ ಶಾಸನಗಳಲ್ಲಿ ಅಶೋಕನ ಹೆಸರು 'ದೇವನಾಂಪ್ರಿಯ ಪ್ರಿಯಾದರ್ಶಿ ಅಶೋಕ' ಎಂಬ ಉಲ್ಲೇಖವನ್ನು ನೀಡುತ್ತದೆ. ಈ ಶಾಸನ ಸಿಗುವುದಕ್ಕಿಂತ ಮೊದಲು 'ದೇವಾನಾಂಪ್ರಿಯ ಪ್ರಿಯದರ್ಶಿ ಅಶೋಕ ನಿರಬಹುದೆಂದು ಸಂಶೋಧಕರು ಊಹೆ ಮಾಡಿದ್ದರು.[೧೫] ಇಂತಹ ಇನ್ನೊಂದು ಶಾಸನ ಮಧ್ಯಪ್ರದೇಶದ ಗುಜರ್ರಾ ಎಂಬಲ್ಲಿ ದೊರೆತಿದೆ. ಕರ್ನಾಟಕದಲ್ಲಿ ಅಶೋಕನ ಶಾಸನಗಳು ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗ ರಾಮೇಶ್ವರ(ಚಿತ್ರದುರ್ಗ), ಕೊಪ್ಪಳ, ಉಯದಗೋಳು ನಿಟ್ಟೂರು(ಬಳ್ಳಾರಿ), ಸನ್ನತಿ(ಕಲಬುರ್ಗಿ)ದಲ್ಲಿ ದೊರೆತ ಶಾಸನಗಳಿಂದ ಈ ಪ್ರದೇಶಗಳು ಮೌರ್ಯರ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿದುಬರುತ್ತದೆ. ಅಶೋಕನ ಶಾಸನಗಳಿಂದ ಕರ್ನಾಟಕದಲ್ಲಿ ಲಿಂಗಸೂಗೂರು ತಾಲೂಕು ಐತಿಹಾಸಿಕ ಸ್ಪಷ್ಟತೆಗೆ ಮೊಟ್ಟಮೊದಲ ಸಾಕ್ಷಿಗಳೆನ್ನಬಹುದು.

ಕ್ರಿ.ಶ.೧೯೧೫ರಲ್ಲಿ ಈ ಭಾಗದ ನಿಕ್ಷೇಪದ ಇಂಜನಿಯರ್ ಸಿ.ಬಿಡನ್ ಚಿನ್ನದ ಶೋಧನೆಗಾಗಿ ಮಸ್ಕಿಯ ಗುಡ್ಡದಲ್ಲಿ ತಿರುಗಾಡುತ್ತಿದ್ದಾಗ, ಈ ಶಾಸನ ಈತನ ಕಣ್ಣಿಗೆ ಕಾಣಿಸಿತು. ಇದು ಬ್ರಾಹ್ಮಿಲಿಪಿಯಲ್ಲಿ ಇದೆ[೧೬] ಹಾಗೂ ಪಾಲಿ ಭಾಷೆಯಲ್ಲಿದೆ. ಈ ಶಾಸನ ಚರಿತ್ರೆಯ ದೃಷ್ಟಿಯಿಂದ ಬಹುಮುಖ್ಯವಾಗಿದೆ.

ಅಶೋಕನ ನಂತರ ಮೌರ್ಯರ ಯಾವ ಶಾಸನಗಳೂ ಈ ತಾಲೂಕಿನಲ್ಲಿ ದೊರೆಯುವುದಿಲ್ಲ. ಕ್ರಿ.ಶ.೯೧೧ರ ವರೆಗೆ ಯಾವ ರಾಜವಂಶದ ಶಾಸನಗಳೂ ಈ ಜಿಲ್ಲೆಯಲ್ಲಿ ಇದುವರೆಗೆ ದೊರೆತಿಲ್ಲ. ಹೀಗಾಗಿ ಮೌರ್ಯರ ನಂತರ ಕರ್ನಾಟಕವನ್ನಾಳಿದ ರಾಜಮನೆತನಗಳಾದ ಶಾತವಾಹನ, ಪಲ್ಲವ, ಬಾದಾಮಿ ಚಾಲುಕ್ಯರ ಆಡಳಿತಕ್ಕೆ ಈ ಪ್ರದೇಶ ಸೇರಿತ್ತಾದರೂ ಅವರ ಆಳ್ವಿಕೆಯ ಕಾಲದ ಶಾಸನಗಳೂ ದೊರೆತಿಲ್ಲ.[೧೭]

## ಮೌರ್ಯರ ವಂಶಾವಳಿ[೧೮]

| | | |
|---|---|---|
| ಚಂದ್ರಗುಪ್ತ ಮೌರ್ಯ (ಕ್ರಿ.ಪೂ.೩೨೦) | ದಶರಥ (ಕ್ರಿ.ಶ.೨೩೨-೨೨೬) | ದೇವವರ್ಮ (ಕ್ರಿ.ಶ.೨೦೨-೧೯೫) |
| \| | \| | \| |
| ಬಿಂದುಸಾರ (ಕ್ರಿ.ಪೂ.೩೦೦-೨೭೩) | ಸಂಪ್ರತಿ (ಕ್ರಿ.ಪೂ.೨೨೬-೨೧೫) | ಸಧಾನ್ವ (ಕ್ರಿ.ಪೂ.೧೯೫-೧೮೧) |
| \| | \| | \| |
| ಅಶೋಕ (ಕ್ರಿ.ಪೂ.೨೭೩-೨೩೨) | ಸಲಿಶೋಕ (ಕ್ರಿ.ಪೂ.೨೧೫-೨೦೨) | ಬೃಹವೃತ (ಕ್ರಿ.ಪೂ.೧೮೧-೧೮೦) |

### ಶಾತವಾಹನರು

ಮೌರ್ಯ ಸಾಮ್ರಾಜ್ಯವು ಪತನದ ಹಾದಿ ಹಿಡಿದ್ದ ಸಂದರ್ಭದಲ್ಲಿ ಕರ್ನಾಟಕದ ಉತ್ತರ ಭಾಗವನ್ನು ಶಾತವಾಹನರು ತಮ್ಮ ತೆಕ್ಕೆಗೆ ತೆಗೆದುಕೊಂಡರು. ಈ ಮನೆತನದ ಮೂಲಪುರುಷ ಸಿಮುಖ. ಪೈಥಾನ ಅಥವಾ ಪಠಾಣವನ್ನು ರಾಜ್ಯಧಾನಿಯನ್ನಾಗಿ ಮಾಡಿಕೊಂಡು ಇವರು ಆಳಿದ್ದಾರೆ. ಇವರ ಸಾಮ್ರಾಜ್ಯವು ರಾಯಚೂರು ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಆಳ್ವಿಕೆಗೆ ಒಳಪಟ್ಟಿತ್ತು. ಅವುಗಳಲ್ಲಿ ಲಿಂಗಸೂಗೂರು ತಾಲ್ಲೂಕು ಒಂದಾಗಿದೆ. ಈ ಭಾಗವನ್ನು ಆಳಿದ್ದಾರೆ ಎನ್ನಲಾದ ಸಾಕಷ್ಟು ಕುರುಹುಗಳು ದೊರೆತಿವೆ. ಅವುಗಳಲ್ಲಿ ಮಸ್ಕಿ ಮತ್ತು ಪಿಕಳಿಹಾಳ ಗ್ರಾಮದಲ್ಲಿ ಶಾತವಾಹನರ ಕಾಲದ ಕ್ರಿ.ಪೂ.೨೦೦೦ದ ಕ್ರಿ.ಶ.೫೦ರ ಕಾಲಾವಧಿಯ ಆಭರಣಗಳು ಮತ್ತು ವಸ್ತುಗಳು ದೊರೆತಿವೆ. ಅವುಗಳಲ್ಲಿ ಬಣ್ಣ ಬಳಿದ ಪಾತ್ರೆಗಳು, ಮೈ ಉಜ್ಜಿಕೊಳ್ಳುವ ಇಟ್ಟಿಗೆಯ ಕಲ್ಲುಗಳು, ಶಂಖದ ಬಳೆಗಳು, ಕಪ್ಪು ಆಕಾರದ ಮಣಿಗಳು ದೊರೆತಿವೆ.

### ಮಾನ್ಯಖೇಟದ ರಾಷ್ಟ್ರಕೂಟರು

ಕ್ರಿ.ಶ.೭೩೫ರಲ್ಲಿ ದಂತಿದುರ್ಗವನ್ನು ಬಾದಾಮಿ ಚಾಲುಕ್ಯರೊಂದಿಗೆ ಯುದ್ಧಮಾಡಿ ಅಧಿಕಾರಕ್ಕೆ ಬಂದನು. ಸ್ವತಂತ್ರ ರಾಷ್ಟ್ರಕೂಟ ಸಾಮ್ರಾಜ್ಯ ಸ್ಥಾಪನೆ ಮಾಡಿದನು. ಇವರು ಸುಮಾರು ೨೦೦ ವರ್ಷಗಳ ವರೆಗೆ ರಾಜ್ಯಭಾರ ಮಾಡಿದರು. ಗುಲಬರ್ಗಾ ಜಿಲ್ಲೆ ಸೇಡಂ ತಾಲೂಕಿನ ಮಳಖೇಡ ಅಥವಾ ಮಾನ್ಯಬೇಟವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಡಿದರು. ಹೀಗಾಗಿ ಇವರನ್ನು 'ಮಳಖೇಡದ ರಾಷ್ಟ್ರಕೂಟರು'ಎಂದು ಕರೆಯುತ್ತಾರೆ. ಆದರೆ ರಾಷ್ಟ್ರಕೂಟರ ರಾಜಧಾನಿ ಮಳಖೇಡ ಎಂಬುದಕ್ಕೆ ಯಾವುದೇ ಐತಿಹಾಸಿಕ ದಾಖಲೆಗಳಿಲ್ಲ. ಸಾಹಿತ್ಯಾಧಾರಗಳನ್ನು ಗಮನಿಸಿದರೆ ಆದಿಪುರಾಣ ಮತ್ತು ವಡ್ಡರಾಧನೆ ಕೃತಿಗಳಲ್ಲಿ ಜನಪದದ ಗಡಿ ವಿವರಣೆ ಪ್ರಕಾರ 'ಖೇಟಾ' ರಾಜಧಾನಿಯು ಕಾಗಿಣಿ ತಟಾಕ ದಲ್ಲಿರುವುದು ವ್ಯಕ್ತವಾಗುತ್ತದೆ. ಅಮೋಘವರ್ಷ ನೃಪತುಂಗ(ಕ್ರಿ.ಶ.೮೧೪-೯೭೮) ರಾಷ್ಟ್ರಕೂಟರ

ಅತ್ಯಂತ ಪ್ರಸಿದ್ಧ ಅರಸನಾಗಿದ್ದನು. ಅಮೋಘ ವರ್ಷನು ಸಂಸ್ಕೃತದಲ್ಲಿ ಪ್ರಶ್ನೋತ್ತರ ಮಾಲಾ ಕೃತಿಯನ್ನು ರಚಿಸಿದ್ದಾನೆ. ಇವನ ಆಸ್ಥಾನಕವಿ ಶ್ರೀ ವಿಜಯನು 'ಕವಿರಾಜಮಾರ್ಗ'ವೆಂಬ ಕೃತಿಯನ್ನು ರಚಿಸಿದ್ದಾನೆ. ರಾಷ್ಟ್ರಕೂಟ ಅರಸರಿಗೆ ನೇರವಾಗಿ ಸಂಬಂಧಿಸಿದ ೨ ಶಾಸನಗಳು ದೊರೆತಿವೆ. ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ತಲೆಖಾನ್‌ದಲ್ಲಿ ದೊರೆತ ಶಾಸನಗಳು ೩ನೇ ಇಂದ್ರ(ಕ್ರಿ.ಶ.೯೧೪-೯೨೬)ನ ಕುರಿತಾಗಿ ಮಾಹಿತಿಯನ್ನು ನೀಡುತ್ತವೆ. ಸಾಗ-೩೦೦, ಅಯಜ್ಯ-೩೦೦, ಕುದಿಯಪರವಿ-೭೦, ಕರವಿಡಿ-೩೦ ರಾಜ್ಯವನ್ನು ಈತ ಆಳಿದ್ದಾನೆ. ಮುಮ್ಮಡಿ ಕೃಷ್ಣ(ಕ್ರಿ.ಶ.೯೩೯-೯೬೭)ನು ಈ ಭಾಗವನ್ನು ಆಳುತ್ತಿದ್ದಾಗ ಈತನ ಸಾಮಂತರುಗಳಾದ ಬುಟ್ಟರಸ ಮತ್ತು ಪಿಟ್ಟಬ್ಬೆಯರು ಅದಿತ್ಯ ಭಟ್ಟಾರನಿಗೆ ಭೂದಾನವನ್ನು ಮಾಡುತ್ತಾರೆ.[೧೯]

ಇದೇ ತಾಲೂಕಿನಲ್ಲಿ ಬರುವ ಯರಡೋಣಿಯಲ್ಲಿ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ ಶಾಸನವು ದೊರೆತಿದೆ. ಯರಡೋಣಿಯ ಕ್ರಿ.ಶ.೯೨೮ರ ಶಾಸನದಲ್ಲಿ ರಾಷ್ಟ್ರಕೂಟರ ದೊರೆ ಹಿರೇಣ್ಯವರ್ಷನ ಆಳ್ವಿಕೆಯ ಕಾಲದಲ್ಲಿ ಕರಡಿಕಲ್ಲು ನಾಡಿನ ಮಾಗಲೂರಿನ ಕಿನಕಭಟ್ಟ ಎಂಬುವವನಿಗೆ ೪೦ ಮತ್ತರ ಭೂಮಿಯನ್ನು ದಾನಕೊಟ್ಟ ಉಲ್ಲೇಖವಿದೆ.[೨೦]

### ರಾಷ್ಟ್ರಕೂಟರ ವಂಶಾವಳಿ[೨೧]



**ಕಲ್ಯಾಣದ ಚಾಲುಕ್ಯರು**

ರಾಷ್ಟ್ರಕೂಟರ ನಂತರ ಈ ಭಾಗದಲ್ಲಿ ಕಲ್ಯಾಣ ಚಾಲುಕ್ಯರು ಆಳ್ವಿಕೆಯನ್ನು ನಡೆಸಿದರು. ಕಲ್ಯಾಣ ಚಾಲುಕ್ಯರ ಕಾಲಾವಧಿಯು ಈ ತಾಲೂಕಿನಲ್ಲಿ ಮಹತ್ವ ಸ್ಥಾನವನ್ನು ಪಡೆದಿದೆ. ಹೆಚ್ಚಿನ ಮಟ್ಟಿಗೆ ಇವರ ಕಾಲದಲ್ಲಿ ನಿರ್ಮಿಸಿದ ದೇವಾಲಯಗಳು ರಾಯಚೂರು ಜಿಲ್ಲೆಯ ಪ್ರತಿ ತಾಲೂಕು, ಗ್ರಾಮಗಳಲ್ಲಿ ದೊರೆತಿವೆ. ಕ್ರಿ.ಶ.೯೭೩ರಲ್ಲಿ ಇಮ್ಮಡಿ ತೈಲ ರಾಷ್ಟ್ರಕೂಟ ಅರಸ ಎರಡನೇ ಕರ್ಕನನ್ನು ಸೋಲಿಸಿ, ದಕ್ಷಿಣದಲ್ಲಿ ಚಾಲುಕ್ಯರ ಅಧಿಪತ್ಯವನ್ನು ಸ್ಥಾಪಿಸಿದನು. ತೈಲಪನು ತಾನು ಬಾದಾಮಿ ಚಾಲುಕ್ಯರ ವಂಶಜನೆಂದು ಹೇಳಿಕೊಂಡಿದ್ದಾನೆ. ಎರಡನೇ ತೈಲಪನು 'ಅಹವಮಲ್ಲ' ಮತ್ತು 'ಭುವನೇಮಕಲ್ಲ' ಎಂಬ ಬಿರುದುಗಳನ್ನು ಧರಿಸಿದ್ದನು. ಈತನ ಆಳ್ವಿಕೆಯು ಬಳ್ಳಾರಿ, ದಕ್ಷಿಣ ಮತ್ತು ಉತ್ತರದ ಕೊಂಕಣ ಗಡಿನಾಡು, ಗೋದಾವರಿಯ ಮೇಲ್ಭಾಗದವರೆಗೆ ವಿಸ್ತರಿಸಿತ್ತು. ಒಂದನೆ ತೈಲಪನು ರಾಷ್ಟ್ರಕೂಟ ರಾಜಕುಮಾರಿ ಚಾಕಬ್ಬೆಯನ್ನು ವಿವಾಹವಾಗಿದ್ದನು. ಇವರ ಮಗನೇ ಸತ್ಯಾಶ್ರಯ. ಸತ್ಯಾಶ್ರಯನು(ಕ್ರಿ.ಶ.೯೯೭-೧೦೦೮) ಪಾರಮಾರ, ಶಿಲಾಹಾರ, ಘೂರ್ಜರ ರಾಜ್ಯಗಳನ್ನು ವಶಪಡಿಸಿಕೊಂಡಿದ್ದನು. ಚೋಳ ಅರಸನನ್ನು ಸೋಲಿಸಿ ಕರ್ನೂಲು, ಗುಂಟುರು ಜಿಲ್ಲೆಯನ್ನು ವಶಪಡಿಸಿಕೊಂಡನು.

**೫ನೇ ವಿಕ್ರಮಾದಿತ್ಯ(ಕ್ರಿ.ಶ.೧೦೦೮-೧೦೧೫):** ಇವನು ಸತ್ಯಾಶ್ರಯನ ಸೋದರಳಿಯ ದಶವರ್ಮನ ಮಗನಾಗಿದ್ದಾನೆ. ನವಲಿ ಗ್ರಾಮದ ಕ್ರಿ.ಶ.೧೦೧೪ರ ಶಾಸನದಲ್ಲಿ ಜಯಸಿಂಹನು ತನ್ನ ಅಣ್ಣನಾದ ೫ನೇ ವಿಕ್ರಮಾದಿತ್ಯನ ಕೈಕೆಳಗೆ ಎಡದೊರೆ-೨೦೦೦ವನ್ನು ಆಳುತ್ತಿದ್ದನೆಂಬ ಪ್ರಸ್ತಾಪವಿದೆ.[೨೨]

**ಇಮ್ಮಡಿ ಜಯಸಿಂಹ(ಕ್ರಿ.ಶ.೧೦೧೪-೧೦೪೩):** ಈತನ ಶಾಸನಗಳು ರಾಯಚೂರಿನಲ್ಲಿ ಸುಮಾರು ೩೭ ದೊರಕಿವೆ. ಅವುಗಳಲ್ಲಿ ಮೊಟ್ಟ ಮೊದಲ ಶಾಸನ ಮಸ್ಕಿಯ ಗ್ರಾಮದಲ್ಲಿದೆ. ಇದು ಕ್ರಿ.ಶ.೧೦೧೦ರ ಶಾಸನದಲ್ಲಿ ತ್ರಿಭುವನಮಲ್ಲ ಎಂಬ ವಿಶೇಷಣವನ್ನು ಪಡೆದಿದ್ದ ಐದನೆಯ ವಿಕ್ರಮಾದಿತ್ಯನು ಆಳುತ್ತಿದ್ದಾಗ ಇವನ ತಮ್ಮ ಜಯಸಿಂಹನು ರಾಜಧಾನಿ ಮೊಸಂಗಿ(ಮಸ್ಕಿ)ಯಿಂದ ಆಳುತ್ತಿದ್ದಂತೆ ಉಲ್ಲೇಖವಿದ್ದು, ಆಹವಮಲ್ಲನ ಚಟ್ಟ(ಸೇವಕ) ಕರಿಯಚ್ಚಯ್ಯನಿಗೆ ೧೦೦ ಮತ್ತರು ದಾನ ನೀಡಿದ. ಈ ಗ್ರಾಮವನ್ನು ಶಾಸನದಲ್ಲಿ ಚಳುಕಿಯರ ಪೊಲಗೆರೆ ಎಂದು ಕರೆಯಲಾಗಿದೆ.[೨೩] ನವಿಲಿ ಗ್ರಾಮದ ಕ್ರಿ.ಶ.೧೦೧೪ರ ಶಾಸನದಲ್ಲಿ ಜಗದೇಕ ಮಲ್ಲದೇವನು ತನ್ನ ಅಣ್ಣನಾದ ವಿಕ್ರಮಾದಿತ್ಯನ ಕೈಕೆಳಗೆ ಎಡದೊರೆ-೨೦೦ವನ್ನು ಆಳುತ್ತಿದ್ದ. ಆ ಕಾಲಕ್ಕೆ ಕ್ರಿ.ಶ.೧೦೧೨ರಲ್ಲಿ ತೀರ್ಥಸ್ನಾನದ ನವಿಲೆಯಲ್ಲಿ ಪೂಜೆ ಮಾಡುತ್ತಿದ್ದಂತೆ ತಿಳಿಯುತ್ತದೆ.[೨೪]

ಜಗದೇಕಮಲ್ಲನು ಕ್ರಿ.ಶ.೧೦೨೭ರಲ್ಲಿ ಪುಲಿಪೊಂದರ ಪಲಮಯಪ್ಪಯಣಲ್ಲಿದ್ದನು. ಆಗ ಆತನ ಪಿರಿಯ ಮೊಸಂಗಿಯ ಏಕ ಜಡೆಯ ದೇವಾಲಯಕ್ಕೆ ಭೂದಾನವನ್ನು ನೀಡುತ್ತಾನೆ.

ಆಗ ೨ನೇ ಜಯಸಿಂಹನ ಪತ್ನಿ ಸೋಮಲದೇವಿಯು ಬಸದಿಯೊಂದಕ್ಕೆ ೧೦೦ ಮತ್ತರು ಬೂದಾನ ಬಿಟ್ಟದನ್ನು ಶಾಸನವು ತಿಳಿಸುತ್ತದೆ.[೨೫] ಕ್ರಿ.ಶ.೧೦೩೨ರ ಶಾಸನದಲ್ಲಿ ಜಗದೇಕಮಲ್ಲನು ಪಿರಿಯ ಮೊಸಂಗಿಯ ಜಗದೇಕಮಲ್ಲ ಜಿನಾಲಯದ ಭೋಗಕ್ಕಾಗಿ ದಾನ ಮಾಡಿದನು. ಅದನ್ನು 'ಜಗದೇಕಮಲ್ಲ ಜಯಸಿಂಹ ದತ್ತಿ' ಎಂದು ಕರೆದಿದ್ದಾನೆ. ಲಿಂಗಸೂಗೂರು ತಾಲೂಕಿನ ಕಿಲಾರೆಟ್ಟಿ ಗ್ರಾಮದ ಕ್ರಿ.ಶ.೧೦೪೬ರ ಶಾಸನದಲ್ಲಿ ತ್ರೈಲೋಕ್ಯಮಲ್ಲನ ಉಲ್ಲೇಖವಿದೆ. ಇವನ ಮಗ ಕುಮಾರ ಜಯಸಿಂಹ ದೇವನು ಕರಡಿಕಲ್ಲು-೩೦೦ರ ಅಗ್ರಹಾರ ಬಿನ್ನಗೊಳ ವನ್ನು ಆಳುತ್ತಿದ್ದನು. ಈ ಜಯಸಿಂಹನನ್ನು 'ಸಮರೈಕಮಲ್ಲದೇವ'ನೆಂದು ಶಾಸನದಲ್ಲಿ ಕರೆಯ ಲಾಗಿದೆ.[೨೬] ಕಲ್ಯಾಣ ಚಾಲುಕ್ಯ ಅರಸರಲ್ಲಿ ಪ್ರಮುಖನಾದ ಅರಸ ೬ನೆಯ ವಿಕ್ರಮಾದಿತ್ಯ. ಇವನನ್ನು ಶಾಸನದಲ್ಲಿ ತ್ರಿಭುವನಮಲ್ಲನೆಂದು ಕರೆಯಲಾಗಿದೆ. ಕ್ರಿ.ಶ.೧೦೭೭ರಲ್ಲಿ ಕಲ್ಯಾಣದಿಂದ ಕಂಡಿಕಲ್ಲನ್ನು ಆಳುತ್ತಿದ್ದನು.

**ಕಲ್ಯಾಣ ಚಾಲುಕ್ಯರ ವಂಶಾವಳಿ**[೨೭]




### ದೇವಗಿರಿಯ ಸೇವುಣರು

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕು ದೇವಗಿರಿಯ ಸೇವುಣರ ಆಳ್ವಿಕೆಗೂ ಒಳಪಟ್ಟಿತ್ತೆನ್ನಲು ನಮಗೆ ಕೆಲವು ಸಾಮಗ್ರಿಗಳು ಸಾಕ್ಷಿಯೊದಗಿಸಿವೆ. ಸೇವುಣ ಕನ್ನರನ ಬೇಹಟ್ಟಿ ತಾಮ್ರ ಶಾಸನವು ಶಿವಪಾರ್ವತಿಯರು ತಮ್ಮ ಕೈಲಾಸ ಬಿಟ್ಟು ಇಲ್ಲಿಯೇ ಬಂದು ನೆಲೆಸಿದರೆಂದು ಇಲ್ಲಿಯ ಪ್ರದೇಶ ಕೈಲಾಸಕ್ಕಿಂತಲೂ ಬಹು ಸುಂದರವಾಗಿತ್ತು ಎಂದು

ಶಾಸನದಲ್ಲಿ ಉಲ್ಲೇಖಿಸಿದೆ.[೨೮] ಚಾಳುಕ್ಯರ ಸಾಮಂತರಾಗಿದ್ದ ಇವರು ಸೋಮೇಶ್ವರ ಪತನವಾದ ನಂತರ ಸಂಪೂರ್ಣ ಪ್ರಾಬಲ್ಯಕ್ಕೆ ಬಂದರು. ಈ ಅರಸ ಪ್ರಭಾವ ಕಡಿಮೆ. ಇದರಿಂದ ಯಾದವ ಭಲ್ಲಮನು ಸಾಮಂತನಾದ ಕರಡಿಕಲ್ಲಿನ ಕದಂಬ ಬಿಜ್ಜರಸನು ಮುದಗಲ್ಲನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡಿದನು. ಈತನ ನಂತರ ಮುದಗಲ್ಲು ಸಿಂಘಣ ದೇವನ ಆಳ್ವಿಕೆಗೆ ಒಳಪಟ್ಟಿತ್ತು. ಆಗ ಮಾಂಡಳೇಶ್ವರನಾಗಿ ಚಾಮುಂರಸನು ಆಳ್ವಿಕೆ ನಡೆಸಿದನು. ಈತನನ್ನು 'ಸುವರ್ಣಪುರವರಾಧೀಶ್ವರ ಎಂದು ಕರೆಯುತ್ತಿದ್ದರೆಂದು ತಿಳಿದುಬಂದಿದೆ.[೨೯]

### ಕಲ್ಯಾಣದ ಕಳಚೂರರು

ಈ ವಂಶದವರನ್ನು ಕಲಚೂರಿ ಎಂದು ಕರೆದರೂ ಕೂಡ 'ಕೇಟಚೂರಿ', 'ಕಟಚೂರಿ', 'ಕರಿಚೂರಿ' ಎಂಬ ಪದಗಳು ಶಾಸನಗಳಲ್ಲಿವೆ. ಇವರು ಮೂಲತಃ ಮಧ್ಯಭಾರತದಿಂದ ಬಂದವರು. 'ಯದು' ಮತ್ತು 'ಸಹಸ್ರಬೆತ್'(ಕಾರ್ತೀವಿಯ) ಇವರ ವಂಶಜರೆಂದು ಕರೆದು ಕೊಳ್ಳುತ್ತಾರೆ. ಈ ಮನೆತನದ ಶ್ರೇಷ್ಠ ಅರಸ ಎರಡನೇ ಬಿಜ್ಜಳ. ಚಾಲುಕ್ಯರ ಸಾಮಂತರಾದ ಕಲ್ಯಾಣದ ಕಳಚೂರರು ಲಿಂಗಸೂಗೂರು ತಾಲೂಕಿನ ತಲೇಖಾನ ಗ್ರಾಮದಿಂದ ಕ್ರಿ.ಶ.೧೧೭೫ರಲ್ಲಿ ಚಂದ್ರನೆಂಬ ಆಡಳಿತಗಾರನು ಆಳ್ವಿಕೆ ಮಡಿದ ಉಲ್ಲೇಖವಿರುವ ಶಾಸನಗಳಿವೆ.[೩೦]

### ವಿಜಯನಗರ ಅರಸರು

ಇತಿಹಾಸದಲ್ಲಿ ವಿಜಯನಗರದರಸರ ಆಳ್ವಿಕೆಯು ಪ್ರಮುಖವಾದ ಘಟ್ಟ. ಒಂದೆಡೆ ವಿಜಯನಗರ ಇನ್ನೊಂದೆಡೆ ಬಹುಮನಿ ಸುಲ್ತಾನರ ಮನೆತನಗಳು ಇಲ್ಲಿಯ ಫಲವತ್ತಾದ ಪ್ರದೇಶಕ್ಕಾಗಿ ಹಲವಾರು ಯುದ್ಧಗಳನ್ನು ಮಾಡಿದವು. ಸುಮಾರು ೧೩ ಯುದ್ದಗಳಿಂದ ಕೂಡಿರುವ ಈ ನೆಲೆ ಒಂದು ರಣರಂಗವಾಗಿಯೋ ಮಾರ್ಪಟ್ಟಿತ್ತು.[೩೧] ವಿಜಯನಗರ ಸಾಮ್ರಾಜ್ಯವು ಕ್ರಿ.ಶ.೧೩೩೬ರಲ್ಲಿ ಸಂಗಮ ವಂಶದ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯ ಹಂಪಿಯಲ್ಲಿ ಸ್ಥಾಪಿಸಿದರು. ಈ ಸಾಮ್ರಾಜ್ಯ ಸ್ಥಾಪನೆಯ ಮುಖ್ಯ ಉದ್ದೇಶ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿ ಪೋಷಿಸುವುದಾಗಿತ್ತು. ಈ ಸಾಮ್ರಾಜ್ಯ ಸ್ಥಾಪನೆಗೆ ವಿದ್ವಾಂಸರು ಪ್ರೇರಕವಾಗಿದ್ದರು. ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸ್ಥಾಪಿತವಾದರೂ, ಈ ತಾಲೂಕಿನಲ್ಲಿ ಇವರ ಶಾಸನಗಳು ದೊರೆಯುವುದು ಕ್ರಿ.ಶ.೧೪೪೩ರ ನಂತರದಲ್ಲಿ. ಎರಡನೆಯ ದೇವರಾಯನ ಕ್ರಿ.ಶ.೧೪೩೬ರ ಶಾಸನವೇ ಪ್ರಥಮವಾದದ್ದು. ಈ ತಾಲೂಕಿನ ಮುದಗಲ್ಲು ಎರಡನೆಯ ದೇವರಾಯನ ಅಧೀನಕ್ಕೆ ಒಳಪಟ್ಟಿತ್ತು. ಆ ಸಂದರ್ಭದಲ್ಲಿ ವರದಣ್ಣನಾಯಕನು ಮುದಗಲ್ಲನ್ನು ಆಳುತ್ತಿದ್ದನು. ಆಗ ರಾಹುತ ವೀರಣ್ಣ ಎಂಬುವನು ಮುದಗಲ್ಲು ಬೆಟ್ಟದ ಕೋಟೆಯಲ್ಲಿದ್ದ

ಬಂಗಾರದ ಕಳಸವನ್ನು ತೆಗೆದುಕೊಂಡು ಬಂದಾಗ ಸಂತೋಷಗೊಂಡ ೨ನೇ ದೇವರಾಯ ಈರಣ್ಣನಿಗೆ ಭೂದಾನವನ್ನು ನೀಡುತ್ತಾನೆ.[೩೨] ನಂತರ ಕ್ರಿ.ಶ.೧೫೩೦ರಲ್ಲಿ ಪಟ್ಟಕ್ಕೆ ಬಂದ ಅಚ್ಯುತ ದೇವರಾಯನು ಆ ಕಾಲದಲ್ಲಿ ಮಸ್ಕಿ ಸೀಮೆಯನ್ನು ಇಮ್ಮಡಿ ಮೇದಿನಿರಾಯನಿಗೆ ನೀಡ ಲಾಗಿತ್ತು. ಇವನ ಆಳ್ವಿಕೆ ಮುಗಿದ ನಂತರ ಕ್ರಿ.ಶ.೧೫೪೨ರಲ್ಲಿ ಸದಾಶಿವರಾಯನು ಪಟ್ಟಕ್ಕೆ ಬರುತ್ತಾನೆ. ಇವನು ನಾಯಿಂದರಿಗೆ ದಾನ ನೀಡಿದ ಉಲ್ಲೇಖವಿದೆ.[೩೩] ಅಲ್ಲದೆ ಮಸ್ಕಿಯ ಮಲ್ಲಿಕಾರ್ಜುನ ದೇವಾಲಯಕ್ಕೆ ದಾನ ಮಾಡಿದ್ದಾನೆ. ಈತನ ಅವಧಿಯಲ್ಲಿ ಮುದಗಲ್ಲನ್ನು 'ಮುದಗಲ್ಲನಾಡು'ಎಂದು ಕರೆಯಲಾಗುತ್ತಿತ್ತು.

**ಶ್ರಿ ಕೃಷ್ಣದೇವರಾಯ(ಕ್ರಿ.ಶ.೧೫೦೯–೧೫೨೯):** ಲಿಂಗಸೂಗೂರು ತಾಲೂಕಿನ ಕಮಲದಿನ್ನಿ ಗ್ರಾಮದ ಕ್ರಿ.ಶ.೧೫೨೨ರ ಶಾಸನದಲ್ಲಿ ಶ್ರೀ ಕೃಷ್ಣದೇವರಾಯನ ಉಲ್ಲೇಖದೊಂದಿಗೆ ಓಬಯ್ಯ ನಾಯಕ ಎಂಬುವವನು ಲಕ್ಷ್ಮಿದೇವಾಲಯಕ್ಕೆ ಭೂಮಿ ದತ್ತಿಕೊಟ್ಟನು. ಇದರೊಂದಿಗೆ ಮುದಗಲ್ಲು ಸೀಮೆ ಪ್ರಸ್ತಾಪಗೊಂಡಿದೆ. ಈತನ ಕಾಲದಲ್ಲಿ ಹಾಕಿಸಲಾದ ಕ್ರಿ.ಶ.೧೬ನೇ ಶತಮಾನದ ಎರಡು ಶಾಸನಗಳು ಮುದಗಲ್ಲು ಗ್ರಾಮದ ಕೋಟೆಯ ಗೋಡೆಯೊಂದಿಗೆ ಅಲ್ಲಿರುವ ಕತ್ತಳಗಳಿಗೆ ತನ್ನ ನಿಷ್ಠಾವಂತ ಮಂತ್ರಿಯಾದ ಸಾಳುವ ತಿಮ್ಮನ ಹೆಸರಿನಲ್ಲಿ ಹಾಕಿಸಿದ ಈ ಎರಡು ಶಾಸನಗಳಲ್ಲಿ ಸಾಳುವ ತಿಮ್ಮಯ್ಯನ ಕೊತ್ತಳ[೩೪] ಎಂಬ ಉಲ್ಲೇಖಗಳು ಬಂದಿವೆ. ಇದನ್ನು ಶ್ರೀ ಕೃಷ್ಣದೇವರಾಯನು ಹಾಕಿಸಿದ್ದಾನೆ.

**ಅಚ್ಯುತದೇವರಾಯ(ಕ್ರಿ.ಶ.೧೫೩೦–೧೫೪೨):** ತುಳುವಂಶದ ನರಸನಾಯಕನ ಎರಡನೆಯ ರಾಣಿಯಾದ ಓಬಾಂಬಿಕಾ ಎಂಬುವವಳಿಗೆ ಜನಿಸಿದ. ಶ್ರೀ ಕೃಷ್ಣದೇವರಾಯನ ಮಲತಮ್ಮ ಲಿಂಗಸೂಗೂರು ಪಟ್ಟಣದ ಕ್ರಿ.ಶ.೧೫೩೦ರ ಶಾಸನದಲ್ಲಿ ಅಚ್ಯುತದೇವರಾಯನ ಆಳ್ವಿಕೆಯ ಕಾಲದಲ್ಲಿ ಈತನ ಸಾಮಂತ ಬೈಯಪ್ಪನಾಯಕ ಎಂಬ ವ್ಯಕ್ತಿಯು ಅರಸನಿಗೆ ಪುಣ್ಯವಾಗಲೆಂದು ದಾನ ನೀಡಿದ್ದಾನೆ. ಮಸ್ಕಿ ಗ್ರಾಮದ ಕ್ರಿ.ಶ.೧೫೩೦ರ ಶಾಸನದಲ್ಲಿ ವಿಜಯನಗರವನ್ನು ಅಚ್ಯುತರಾಯನು ರಾಜ್ಯಾವಾಳುತ್ತಿದ್ದಾಗ ಗುಜ್ಜಲ ಇಮ್ಮಡಿ ಮೇದಿನಿರಾಯನು ಮೊಸಗಿ ಸೀಮೆಯನ್ನು ಆಳುತ್ತಿದ್ದನು. ಈ ಮೊಸಗಿ ಸೀಮೆಯನ್ನು ಇಮ್ಮಡಿ ಮೇದಿನಿರಾಯನ ಅಮರನಾಯಕತನಕ್ಕೆ ನೀಡಲಾಗಿತ್ತು.[೩೫] ಲಿಂಗಸೂಗೂರು ತಾಲೂಕು ಸಾನ್ಬಾಳ(ಸಾನಬಾಳ) ಗ್ರಾಮದ ಕ್ರಿ.ಶ.೧೫೩೨ರ ಶಾಸನದಲ್ಲಿ ವಿಜಯನಗರ ಅರಸ ಅಚ್ಯುತರಾಯನು ಆಳುತ್ತಿದ್ದಾಗ ಅವನ ಸಾಮಂತ ಅರಸ ಇಮ್ಮಡಿ ಮೇದಿನಿರಾಯನು ದೊಂಬರಬಂಡಿ ಹನುಮಂತ ನಾಯಕನಿಗೆ ಮಸ್ಕಿ ಸೀಮೆಯಲ್ಲಿನ ಚಿಕ್ಕ ಸಾನಬಾಳ ಗ್ರಾಮವನ್ನು ಉಂಬಳಿಯಾಗಿ ಬಿಟ್ಟುಕೊಟ್ಟ ನೆಂಬ ವಿಷಯ ತಿಳಿಸುತ್ತದೆ.

ಮಸ್ಕಿ ಗ್ರಾಮದ ಕ್ರಿ.ಶ.೧೫೩೭ರ ಎರಡು ಶಾಸನಗಳು ಮತ್ತು ಇದೇ ಕಾಲಕ್ಕೆ ಸೇರಿದ ಸುಲ್ತಾನಪುರ ಗ್ರಾಮದ ಶಾಸನದಲ್ಲಿ ವಿಜಯನಗರ ಅರಸ ಅಚ್ಯುತರಾಯನು ಆಳ್ವಿಕೆ ಮಾಡುತ್ತಿದ್ದಾಗ ಅವನ ಸಾಮಂತ ಅರಸ ಇಮ್ಮಡಿ ಮೇದಿನರಾಯನು ಆಳ್ವಿಕೆ ಮಾಡುತ್ತಿದ್ದ ಎಂದು ಶಾಸನದಲ್ಲಿ ಪ್ರಸ್ತಾಪವಿದೆ.

**ಸದಾಶಿವರಾಯ(ಕ್ರಿ.ಶ.೧೫೪೨-೧೫೭೦):** ಅಚ್ಯುತನ ತಮ್ಮ ರಂಗರಾಯನ ಮಗ ಸದಾಶಿವರಾಯನು ಅಳಿಯ ರಾಮರಾಯನ ಬೆಂಬಲದಿಂದ ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದನು. ಲಿಂಗಸೂಗೂರು ತಾಲೂಕು ಕೋಟಾ ಗ್ರಾಮದ ಕ್ರಿ.ಶ.೧೫೫೩ರ ಶಾಸನದಲ್ಲಿ ವಿಜಯನಗರದ ಅರಸ ಸದಾಶಿವರಾಯನ ಉಲ್ಲೇಖದೊಂದಿಗೆ ಇವನು ಮೇದಿವೀರಾಯನಕೋಟ ಗ್ರಾಮದ ೩೫ ನಾಯಿಂದರಿಗೆ, ನಾಯಿಂದ ಸುಂಕವನ್ನು ವಿನಾಯಿತಿಗೊಳಿಸಿದ ವಿಷಯವಿದೆ.

**ಅಳಿಯ ರಾಮರಾಯ(ಕ್ರಿ.ಶ.೧೫೪೩-೧೫೬೮):** ಕೃಷ್ಣದೇವರಾಯನ ಅಳಿಯ ರಾಮರಾಯ ಸಮರ್ಥ ಆಡಳಿತಗಾರ, ಶೂರಸೇನಾನಿ, ಉದಾರಪ್ರವೃತ್ತಿಯುಳ್ಳವನಾಗದ್ದನು. ಮುದಗಲ್ ಗ್ರಾಮದ ಕ್ರಿ.ಶ.೧೫೬೦ರ ಶಾಸನದಲ್ಲಿ ರಾಮರಾಯನ ಮಗನಾದ ಕೃಷ್ಣರಾಜದೇವ ಎಂದು ಗೊತ್ತಾಗುತ್ತದೆ. ಇಲ್ಲಿಯ ಫಲವತ್ತಾದ ಪ್ರದೇಶ, ಉತ್ತಮವಾದ ಕೋಟೆಗಳನ್ನು ಹೊಂದಿದ್ದ ಮುದಗಲ್, ರಾಯಚೂರು ಕೋಟೆಗಳನ್ನು ವಶಪಡಿಸಿಕೊಳ್ಳುವ ಸಲುವಾಗಿ ಹಲವು ಸಲ ಯುದ್ಧ ಮಾಡಬೇಕಾಯಿತು.

**ಬಿಜಾಪುರದ ಆದಿಲ್‌ಶಾಯಿಗಳು**

ಇವರು ಕ್ರಿ.ಶ.೧೫ನೇ ಶತಮಾನದಿಂದ ಕ್ರಿ.ಶ.೧೭ನೇ ಶತಮಾನದವರೆಗೆ ಆಳಿದ್ದಾರೆ.

**ಯೂಸುಫ್ ಆದಿಲ್‌ಷಾ(ಕ್ರಿ.ಶ.೧೪೮೯-೧೫೧೧):** ಈತನು ಬಿಜಾಪುರ ಆದಿಲ್‌ಷಾಹಿ ವಂಶದ ಸ್ಥಾಪಕನಾಗಿದ್ದನು. ಲಿಂಗಸೂಗೂರು ತಾಲ್ಲೂಕು ಗುರುಗುಂಟಾ ಗ್ರಾಮದ ಕ್ರಿ.ಶ.೧೫೦೫ರ ಶಾಸನದಲ್ಲಿ ಯೂಸುಫ್ ಆದಿಲ್‌ಷಾ ಉಲ್ಲೇಕಗೊಂಡಿದ್ದಾನೆ. ಕ್ರಿ.ಶ.೧೫೦೩ರ ಮುದಗಲ್ ಶಾಸನದಲ್ಲಿ ರಾಯಚೂರು ಜಿಲ್ಲೆಯ ಲಿಂಗಸೂಗೂರು, ಮುದಗಲ್ ಸ್ಥಳಗಳು ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದುದರ ಬಗ್ಗೆ ಶಾಸನದಲ್ಲಿ ದಾಖಲಿಸುತ್ತದೆ.

**ಇಮ್ಮಡಿ ಇಬ್ರಾಹಿಂ ಆದಿಲ್‌ಷಾ(ಕ್ರಿ.ಶ.೧೫೮೦-೧೬೨೬):** ಈತನು ಒಂದನೇ ಇಬ್ರಾಹಿಂ ಆದಿಲ್‌ಷಾನ ಸೋದರ ಮಗನಾಗಿದ್ದಾನೆ. ಇತನಿಗೆ ಸಂಬಂಧಿಸಿದ ಶಾಸನಗಳು ರಾಯಚೂರು ಜಿಲ್ಲೆಯಲ್ಲಿ ದೊರೆತಿವೆ. ಹಾಗೆಯೇ ಇವನ ಅಧಿಕಾರಿಯಾದ ಮಲಿಕ ಮುರಾದನ ಶಾಸನಗಳು

ಲಿಂಗಸೂಗೂರು ತಾಲೂಕಿನ ಮುದಗಲ್ ಕೋಟೆಯಲ್ಲಿ ೩೮ ದೊರತಿವೆ. ಮುದಗಲ್ಲಿನ ಅನೇಕ ಶಾಸನಗಳು ಮುದಗಲ್ಲು ಕೋಟೆಯ ಅನೇಕ ಭಾಗಗಳನ್ನು ಮಲಿಕ್ ಮುರಾದನು ಕಟ್ಟಿಸಿದಂತೆ ತಿಳಿಸುತ್ತದೆ.

ಮಲಿಕ್ ಮುರಾದನ ಅನೇಕ ವಿಶೇಷಣಗಳನ್ನು ಶಾಸನಗಳು ಉಲ್ಲೇಖಿಸಿವೆ. ಸ್ವಾಮಿ ದ್ರೋಹರ ಗಂಡ,[೩೬] ಬತ್ತೀಸಾಯುಧ ಶೋರ,[೩೭] ಆದಿಲ್‌ಶಾಹನ ಭುಜಪ್ರತಾಪ,[೩೮] ಯೋಕಾಂಗವೀರ,[೩೯] ಸಾಹಸಭೀಮ,[೪೦] ರಣರಂಗಧೀರ,[೪೧] ರಣರಂಗ ಜಯಧೀರ,[೪೨] ಪರದಳ ಕಾಲಭೈರವ,[೪೩] ಗಡಿನಾಡ ಕೆಂಪು ಹೆಬ್ಬುಲಿ, ಯದಿಲ್‌ಶಾಹನ ಹಲಾಲಖೋರ,[೪೪] ಚಾಹಡವಕೇಳು ವಜೀರ ಗಂಡ[೪೫] ಈ ರೀತಿಯಾಗಿ ಬಿರುದುಗಳನ್ನು ಹೊಂದಿದ್ದನು.

**ಸಾಮಂತ ಅರಸುಮನೆತನಗಳು**

ವಿವಿಧ ಪ್ರಾಂತ್ಯಗಳಿಗೆ ಒಡೆಯರಾಗಿ ಆಳುತ್ತಿದ್ದವರು ಸಾಮಂತರು. ಆಳುವ ದೃಷ್ಟಿಯಿಂದ ಇವರು ಸ್ವತಂತ್ರರಾಗಿದ್ದರೂ ತಮ್ಮ ಮೇಲಿನ ಒಡೆಯರಿಗೆ ನಿಷ್ಠೆಯಿಂದ ಇರಬೇಕಾಗಿತ್ತು. ಕಾಲಕಾಲಕ್ಕೆ ಕಪ್ಪಕಾಣಿಕೆಗಳನ್ನು ಸಲ್ಲಿಸುವುದರ ಜೊತೆಗೆ ಚಕ್ರವರ್ತಿಯು ಯುದ್ಧಕ್ಕೆ ಹೊರಟಾಗ ಸೈನ್ಯದ ನೆರವನ್ನು ಒದಗಿಸಬೇಕಾಗಿತ್ತು. ತಮ್ಮ ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದ ಇವರು ಪದೋನ್ನತಿಯನ್ನು ಪಡೆಯುತ್ತಿದ್ದರು.

**೧. ಕರಡಿಕಲ್ಲು ಕದಂಬರು (ಕ್ರಿ.ಶ.೧೦ನೇ ಶತಮಾನದಿಂದ ಕ್ರಿ.ಶ.೧೨೧೫):** ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಕರಡಿಕಲ್ಲು ಗ್ರಾಮವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಇವರನ್ನು ಕರಡಿಕಲ್ಲು ಕದಂಬರೆಂದು ಕರೆಯಲಾಗಿದೆ. ಈ ಗ್ರಾಮ ಚಿಕ್ಕ ಹಳ್ಳಿಯಾಗಿದ್ದು ಲಿಂಗಸೂಗೂರು ಪಟ್ಟಣದ ಪಶ್ಚಿಮ ದಿಕ್ಕಿನಲ್ಲಿ ಬರುತ್ತದೆ. ಇಂದಿನ ಕರಡಿಕಲ್ಲು ಗ್ರಾಮ ಅಂದಿನ ದಿನಮಾನದಲ್ಲಿ ಕರಡಿಕಲ್ಲು-೩೦೦ ಹಳ್ಳಿಗಳ ವಿಭಾಗವಾಗಿತ್ತು. ಇದು ಎಡದೊರೆ-೨೦೦ ನಾಡಿನಲ್ಲಿತ್ತು. ಕ್ರಿ.ಶ.೧೦ನೇ ಶತಮಾನದಿಂದ ಕ್ರಿ.ಶ.೧೨೧೫ರವರೆಗೆ ಇವರಿಗೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ. ಜೊತೆಗೆ ನವಿಲೆಯ ಪಾರ್ಥ. ತೊರೆದಡಿಯ ಭೀಮ, ಮನ್ನೆಯ ಗೊಡುವೆ ಮೊದಲಾದ ಬಿರುದುಗಳಿಂದ ಅವರನ್ನು ಸಂಬೋಧಿಸಲಾಗಿದೆ.[೪೬]

ಈ ವಂಶದ ಮೊದಲ ಅರಸ ನಾಗವರ್ಮನ ಉಲ್ಲೇಖ ನವಿಲೆಯ ೧೦೬೬ ಅಪ್ರಕಟಿತ ಶಾಸನದಲ್ಲಿದೆ.[೪೭] ಇತನ ಮಗ ಭೂತರಸನು ವಿಕ್ರಮಾದಿತ್ಯನ ಸಾಮಂತನಾಗಿ ಆಳತೊಡಗಿದನು. ಈ ವಂಶದ ಮಾಧವತ್ತಿಯರಸನ ಉಲ್ಲೇಖ ಲಿಂಗಸೂಗೂರು ೧೧೨೪ರ ಶಾಸನದಲ್ಲಿದೆ. ಈತನ ನಂತರ ಯಾರು ಆಳ್ವಿಕೆ ನಡೆಸಿದರೆಂಬುದು ತಿಳಿಯುವುದಿಲ್ಲ. ಆದರೂ ಮೂರನೇ ಬಿಜ್ಜರಸನ ಕರಡಿಕಲ್ಲು ಶಾಸನ ೧೧೯೯ ಈ ವಂಶದ ಚರಿತ್ರೆಯನ್ನು ವಿವರವಾಗಿ ನೀಡಿದೆ.

ಅವನ ನಂತರ ಈ ವಂಶವು ಇತಿಹಾಸದಿಂದ ಕಣ್ಮರೆಯಾಯಿತು. ಕರಡಿಕಲ್ಲು ಮತ್ತು ಮುದಗಲ್ಲು ಶಾಸನಗಳ ಸಹಾಯದಿಂದ ಇವರ ವಂಶಾವಳೀಯನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ನಾಗವರ್ಮ ಕ್ರಿ.ಶ.೧೦೬೬

↓

ಭೂತರಸ ಕ್ರಿ.ಶ.೧೦೯೬

↓

ಮಾಧವತ್ತಿಯರಸ

↓

ಒಂದನೆಯ ಬಿಜ್ಜರಸ

↓

ಒಂದನೆಯ ಕಾಚರಸ

↓

ಎರಡನೆಯ ಬಿಜ್ಜರಸ

↓

ಎರಡನೆಯ ಕಾಚರಸ

↓

ಮೂರನೆಯ ಬಿಜ್ಜರಸ

**ಬಾಚರಸ(ಕ್ರಿ.ಶ.೧೦೩೩):** ಲಿಂಗಸೂಗೂರು ತಾಲ್ಲೂಕು ತಾಲೇಖಾನ ಗ್ರಾಮದ ಕ್ರಿ.ಶ.೧೦೩೩ ಶಾಸನದಲ್ಲಿ ಕೆಳವಾಡಿ-೩೦೦ರಲ್ಲಿಯ ತಂಕಬಾವಿ(ಇಂದಿನ ತಲೇಖಾನ ಗ್ರಾಮ) ಅಗ್ರಹಾರದ ಮಹಾಜನ ಅಪ್ಪನಯ್ಯ ಮತ್ತು ಜೋಯಿಸ ಕಂಡಪ್ಪಯ್ಯನಿಗೆ ವನೆವರ್ಗ್ಗಡೆ ಚಾವುಂಡಮಯ್ಯ ಹಾಗೂ ದಂಡನಾಯಕ ಕಾಳಮಯ್ಯರಿಂದ ಹಣದತ್ತಿ ಕೊಟ್ಟಿದ್ದಾರೆ.

**ಭೂತರಸ(ಕ್ರಿ.ಶ.೧೯೫೫):** ಲಿಂಗಸೂಗೂರು ತಾಲ್ಲೂಕು ಮಸ್ಕಿ ಗ್ರಾಮದ ಕ್ರಿ.ಶ.೧೧೧೩ರ ಶಾಸನದಲ್ಲಿ ಕದಂಬ ವಂಶದ ಮನ್ನೇಯ ಭೂತರಸ ಮತ್ತು ಇತರರಾದ ಮೈಲಾರ ರಾಹುತ ಇವನ ಮೇಲಾಳ್ಕೆಯ ಪಟ್ಟಸಾಹಣೆಯು ಕರಡಿಕಲ್ಲು-೩೦೦ರ ವಿಭಾಗದಲ್ಲಿ ಬರುವ ಪಿರಿಯಾ ಕಾಟಿಂಗಲ್‌ನ ಶನೇಶ್ವರ ದೇವಾಲಯಕ್ಕೆ ಭೂಮಿಯನ್ನು ದತ್ತಿಕೊಟ್ಟರು. ಶಾನ್ತರಸನೆಂಬುವವನು ಪಿರಿಯ ಕಾಟಿಂಗಲ್‌ನಲ್ಲಿರುವ ಬಾವಿಯನ್ನು ಸುಂದರವಾಗಿ ನಿರ್ಮಿಸಿದನೆಂದು ಹೇಳಿದೆ.

**ಗುಡಗುಂಟಿ ನಾಯಕ ಅರಸರು**

ದಕ್ಷಿಣ ಭಾರತವನ್ನು ಆಳ್ವಿಕೆ ಮಾಡಿದ ಪ್ರಮುಖ ಅರಸರುಗಳೆಂದರೆ ಮೌರ್ಯರು, ಕದಂಬರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಬಾದಾಮಿ ಚಾಲುಕ್ಯರು, ಕಳಚೂರಿಗಳು,

ಶಾತವಾಹನರು ಮೊದಲಾದವರು ಆಳಿದ್ದಾರೆ ಎನ್ನಲಾದ ಕುರುಹುಗಳು ಸಿಗುತ್ತವೆ. ಅದೇ ರೀತಿ ಕರಡಿಕಲ್ ಕದಂಬರು ನಾಯಕ ಮನೆತನದವರು ಸಹ ಆಳಿದ್ದಾರೆ. ಅದಕ್ಕೆ ಸಾಕ್ಷಿಯಾಗಿ ಸಾಕಷ್ಟು ಕುರುಹುಗಳು ನಮ್ಮ ಕಣ್ಮುಂದೆ ಇವೆ. ಇವರಲ್ಲಿ ಗುಡಗುಂಟಿ, ಗುಂತಗೊಳ ನಾಯಕ ಅರಸು ಮನೆತನಗಳು ಪ್ರಮುಖವಾಗಿವೆ. ಇಂದಿಗೂ ಇವರ ವಂಶಸ್ಥರು ಇದ್ದಾರೆ.

ಲಿಂಗಸೂಗೂರು ತಾಲೂಕಿನಿಂದ ಕೇವಲ ೧೯ ಕಿ.ಮೀ. ಅಂತರದಲ್ಲಿರುವ ಗುಡಗುಂಟಿಯು ನಾಯಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿರುವ ಗ್ರಾಮವಾಗಿತ್ತು. ಇಲ್ಲಿರುವ ಅರಸರು ಮತ್ತು ಸುರಪುರದಲ್ಲಿರುವ ಅರಸರು ಒಂದೇ ಗೋತ್ರಕ್ಕೆ ಸೇರಿದವರಾಗಿದ್ದಾರೆ. ಇವರು ಗೋಸಲ ವಂಶಕ್ಕೆ ಸೇರಿದ್ದವರು. ಮೂಲ ಪುರುಷ ನರಸಿಂಹನಾಯಕ ಕೈಫಿಯತ್ತುಗಳ ಪ್ರಕಾರ ಇವರ ಪೂರ್ವ ಮನೆತನದವರು ದಕ್ಷಿಣದಿಂದ ಬಂದವರೆಂದು ಚರಿತ್ರೆಯ ಮೂಲಕ ತಿಳಿಯುತ್ತೇವೆ.[೪೮] ಇವರ ವಂಶಾವಳಿ ಈ ರೀತಿ ಇದೆ.

ನರಸಿಂಹನಾಯಕ
|
ವೀರಬೊಮ್ಮನಾಯಕ
|
ಸಿಂಗಪ್ಪನಾಯಕ
|
ಒಡೇರನಾಯಕ
|
ಕಲ್ಲಪ್ಪನಾಯಕ
|
ಚೆನ್ನಹಣಮನಾಯಕ
|
ಹವಿನಾಯಕ
|
ಪೆದ್ದಸೋಮನಾಯಕ
|
ಉಗ್ರಸಿಂಗನಾಯಕ
|
ಮದಕರಿನಾಯಕ

|

ವೀರಝುಂಪನಾಯಕ

|

ಬಲಿಸೋಮನಾಯಕ

|

ಹಿರೇಪಾಮನಾಯಕ

|

ಚಿಕ್ಕಪ್ಪದೇಸಾಯಿ

ಈ ವಂಶಾವಳಿಯ ಅನುಗುಣವಾಗಿ ಚಿಕ್ಕಪ್ಪದೇಸಾಯಿ ಕೊನೆಯದವರು ಇವರಿಗೆ ಇಬ್ಬರು ಮಕ್ಕಳಿದ್ದರು. ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡ ನಾಯಕ. ಇವರುಗಳಲ್ಲಿ ಚಿಕ್ಕಪ್ಪ ದೇಸಾಯಿ ಕಛೇರಿಯಲ್ಲಿರುತ್ತಿದ್ದ ಎಂದು ತಿಳಿಸಬಹುದಾಗಿದೆ. ಈತನ ಮಕ್ಕಳಾದ ಗಡ್ಡಿಲಿಂಗನಾಯಕ ಮತ್ತು ಗಡ್ಡಿಪಿಡ್ಡ ನಾಯಕರುಗಳು ಕೃಷ್ಣಾನದಿಯನ್ನು ಹರಿಗೆಡುವುತ್ತಾರೆ. ಸಣ್ಣ ನಡುಗಡ್ಡೆಗಳನ್ನು ನಿರ್ಮಿಸಿ, ಅಲ್ಲಿಯೇ ವಾಸಿಸುತ್ತಾರೆ. ಸುಮಾರು ಆರು ನಡುಗಡ್ಡೆಗಳು ಹೊಂದಿದ್ದು ಅವುಗಳ ಭೂವಿಸ್ತಾರ ಮೂರು ಮೈಲುಗಳಷ್ಟಿದ್ದಿತ್ತು. ಅವುಗಳೆಂದರೆ ಬೆಣಚಿಗಡ್ಡಿ, ದೇವರಗಡ್ಡಿ, ಜಂಗಿನಗಡ್ಡಿ, ಮೇಲಿನಗಡ್ಡಿ, ನೀರದೇವರಗಡ್ಡಿ ಹೀಗೆ ಮೊದಲಾದವುಗಳಿದ್ದವು. ಈ ಗಡ್ಡಿಯಲ್ಲಿ ಯಾವಾಗಲೂ ವಾಸಿಸುತ್ತಿರಲು ಇವರಿಗೆ ಗಡ್ಡಿ ಎಂಬ ಅಡ್ಡ ಹೆಸರು ಬಹುಶಃ ಬಂದಿರಬೇಕು.[೪೯]

ಚಿಕ್ಕಪ್ಪ ದೇಸಾಯಿ ಇತನ ದೊಡ್ಡ ಮಗನಾದ ಗಡ್ಡಿಲಿಂಗ ನಾಯಕ ಗುಡಗುಂಟ ಸಂಸ್ಥಾನದ ಸ್ಥಾಪಕ.[೫೦] ಈ ಮೊದಲು ಕಕ್ಕೆರಿ ಭಾಗವು ವಿಜಾಪುರ ಆದಿಲ್‌ಶಾಹಿಗಳ ವ್ಯಾಪ್ತಿಗೆ ಒಳಪಟ್ಟಿದ್ದರಿಂದ ಲಿಂಗನಾಯಕ ಗುಡಗುಂಟಿ ಪರಗಣಿಯ ಸಾಮ್ರಾಜ್ಯದ ಸರದೇಸಾಯಿಯಾಗಿ ಬಡ್ತಿ ಹೊಂದಿದ್ದ. ಅಲ್ಲಿಯೇ ಆಳ್ವಿಕೆ ಮಾಡಲು ಪ್ರಾರಂಭಿಸಿದನು. ಇತನಿಗೆ ೪೪ ಹಳ್ಳಿಗಳು ಸೇರಿದ್ದವು. ರಾಜ್ಯವನ್ನು ವಿಸ್ತರಿಸಲು ಆದಿಲ್‌ಷಾಹಿಗಳೊಂದಿಗೆ ಚರ್ಚಿಸಲು ಹೋದಾಗ ಷೇಖಮಿನ ಹಾಜಿ ಸರದಾರನಿಂದ ಅಸುನಿಗುತ್ತಾನೆಂದು ತಿಳಿದುಬರುತ್ತದೆ. ಈತನಿಗೆ ಏಳು ಜನ ಮಕ್ಕಳಿದ್ದರು. ಆಗ ಸುರಪುರದ ಗಡ್ಡಿನಾಯಕನಿಗೆ ಮಕ್ಕಳಾಗಿರಲಿಲ್ಲಾ ಕಾರಣ ಗುಡಗುಂಟಿಯು ತನ್ನ ಅಣ್ಣನಾದ ಲಿಂಗನಾಯಕ ಮಗನಾದ ಪಾಮನಾಯಕನನ್ನು ದತ್ತು ತೆಗೆದುಕೊಂಡನೆಂದು ತಿಳಿಯುತ್ತವೆ. ಈತನೇ ಸುರಪುರದ ಹಸರಂಗಿ ಪಾಮನಾಯಕ.[೫೧] ಗಡ್ಡಿಲಿಂಗ ನಾಯಕನ ಮರಣದ ನಂತರ ಆತನ ಮಗ ಜಡಿ ಸೋಮಪ್ಪನಾಯಕ ಬಿಜಾಪುರದ ಸುಲ್ತಾನರಲ್ಲಿ 'ಸರ್ಜಾಬಹುದ್ದೂರ' ಎಂಬ ಬಿರುದನ್ನು ಪಡೆದಿದ್ದನು. ಕ್ರಿ.ಶ. ೧೬೬೯ರಲ್ಲಿ ಇಮ್ಮಡಿ ಅಲಿ ಆದಿಲ್‌ಶಾಹನಿಂದ ಒಂದು ಫಾರಸಿ ಸನದು ದೊರಕಿದ್ದು,

ಆ ಸನದಿನಲ್ಲಿ ಸಮತ ಬೈಚಬಾಳು ಮತ್ತು ಕಕ್ಕೇರಿಯ, ಗುಡಗುಂಟಿ ವ್ಯಾಪ್ತಿಯಲ್ಲಿ ಬರುವ ಕೆಲವು ಹಳ್ಳಿಗಳನ್ನು ಜಡಿಸೋಮನಾಯಕನಿಗೆ ಇನಾಮು ಕೊಟ್ಟದ್ದು, ಇದನ್ನು ಗುಡಗುಂಟಿ ಅಥವಾ ಮಾದರಾಯನ ಕೋಟೆಯ ದೇಸಾಯಿ ಮತ್ತು ನಾಡಗೌಡರಿಗೆ ಎಂದು ಸಂಬೋಧಿಸಲಾಗಿದೆ.[೫೨]

ಹೀಗಾಗಿ ಗುಡಗುಂಡಿ ಸಂಸ್ಥಾನವು ಕ್ರಿ.ಶ.೧೬೬೯ರಲ್ಲಿ ಸ್ಥಾಪನೆಯಾಗಿದೆ. ಇವರ ನಂತರ ಇಮ್ಮಡಿಲಿಂಗನಾಯಕ ಸೋಮಪ್ಪನಾಯಕರು ಅಧಿಕಾರಕ್ಕೆ ಬಂದರು. ವಾಗಿನಗೇರಿಯು ಔರಂಗಜೇಬನ ವಶಪಡಿಸಿಕೊಂಡಾಗ ಸುರಪುರದ ಪಿಡ್ಡನಾಯಕನು ಅಲ್ಲಿಂದ ತಪ್ಪಿಸಿಕೊಂಡು ಕೃಷ್ಣಾನದಿಯನ್ನು ದಾಟುವುದರ ಮೂಲಕ ಗುಡಗುಂಟಿಗೆ ತಲುಪುತ್ತಾನೆ. ಸೋಮಪ್ಪನಾಯಕನಿಂದ ಈತನನ್ನು ರಕ್ಷಿಸಿದನು. ಅಲ್ಲದೆ ಪಿಡ್ಡನಾಯಕ ನೊಂದಿಗೆ ಸೋಮಪ್ಪನಾಯಕ ಕನಕಗಿರಿಯ ಉಡಚನಾಯಕನ ರಕ್ಷಣೆಗೆ ತೆರಳುತ್ತಾನೆ. ಆ ಹೊತ್ತಿಗೆ, ಬಿಜಾಪುರ, ಮೊಘಲ್‌ರ ರಾಜ್ಯದ ಒಂದು ಸುಬೆಯನ್ನಾಗಿ ಮಾಡಲಾಗಿತ್ತು. ಅಲ್ಲಿ ಚಿನಕುಲಿಚಖಾನನು ಸುಬೇದಾರನಾಗಿದ್ದನು. ಈ ಸುಬೆಯು ಅಸಫಜಾಹನ ವಶದಲ್ಲಿತ್ತು. ಇತನು ಗುಡಗುಂಟಿಯಲ್ಲಿ ಹಿಮ್ಮತ್‌ಯಾರ್‌ಖಾನ್ ಎಂಬುವರನ್ನು ಅಧಿಕಾರಿಯನ್ನಾಗಿ ನೇಮಿಸಿದ್ದನು. ಆಗ ಪೀತಾಂಬರಿ ಪಿಡ್ಡನಾಯಕ, ಹಿಮ್ಮತ್ ಯಾರ್‌ಖಾನ್‌ನನ್ನು ಅಲ್ಲಿಂದ ಕಾಲ್ತೆಗಿಸಿ, ಪುನ ಸೋಮಸರ್ಜನಾಯಕನಿಗೆ ಗುಡಗುಂಟಿ ಸಂಸ್ಥಾನವನ್ನು ಕೊಟ್ಟನು.

ಗುಡಗುಂಟಿಯ ಮೇಲೆ ಗಜೇಂದ್ರಗಡದವರು ಆಕ್ರಮಣ ಮಾಡುವುದರ ಮೂಲಕ ಹಾನಿಮಾಡಿದ್ದರು. ಆಗ ಗುಡಗುಂಟಿಯ ಅರಸ, ಸುರಪುರದ ಇಮ್ಮಡಿ ವೆಂಕಟಪ್ಪ ನಾಯಕನಲ್ಲಿ ಆರ್ಥಿಕ ಸಹಾಯಕ್ಕೆ ಅಂಗಲಾಚಿ ಬೇಡಿದನು. ಅದಕ್ಕೆ ಒಪ್ಪಿದ ವೆಂಕಟಪ್ಪ ನಾಯಕನು ನೂರಕ್ಕೆ ಒಂದು ರೂಪಾಯಿ ಬಡ್ಡಿ ಒಪ್ಪಿ ನಿಗದಿ ಮಾಡುವುದರೊಂದಿಗೆ ೩೦ ಸಾವಿರ ರೂಪಾಯಿಗಳನ್ನು ಕೊಟ್ಟನು. ಗುಡಗುಂಟಿ ಅರಸನು ಹಣದ ಅವಶ್ಯಕತೆಯ ನೀಗಿಸಲು ಹುಣಸಗಿ ಮತ್ತು ೩೯ ಗ್ರಾಮಗಳನ್ನು ಅಡವು ಹಾಕಿದರು. ಈ ಹಳ್ಳಿಗಳನ್ನು ಬಿಟ್ಟುಕೊಡಲು ಗುಡಗುಂಟ ಅರಸರು ಸುರಪುರದ ಇಮ್ಮಡಿ ವೆಂಕಟಪ್ಪ ನಾಯಕನನ್ನು ಕೇಳಿಕೊಂಡನು. ಆಗ ವೆಂಕಟಪ್ಪನಾಯಕನು ತಾನು ನೀಡಿದ ಹಣವನ್ನು ಬಡ್ಡಿಸಮೇತ ಕೊಟ್ಟರೆ ಗ್ರಾಮಗಳನ್ನು ಬಿಡುತ್ತೇನೆಂದು ಹೇಳಿದನು. ಗುಡಗುಂಟಿಯ ಅರಸ, ವೆಂಕಟಪ್ಪ ನಾಯಕನ ಮಾತಿಗೆ ಸಿಟ್ಟಿಗೆದ್ದನು. ಅರಕೇರಿಯ ವ್ಯಾಪ್ತಿಯಲ್ಲಿ ಬರುವ ಐದು ಗ್ರಾಮಗಳಾದ ಕಕ್ಕೇರಿ, ಹುಣಸಗಿ, ಕಲ್ದೇವನಹಳ್ಳಿ, ರಾಜನಕೋಳೂರು ಮೊದಲಾದ ಹಳ್ಳಿಗಳನ್ನು ಲೂಟಿ ಮಾಡಿದನು. ಇದನ್ನು ತಿಳಿದ ವೆಂಕಟಪ್ಪನಾಯಕ ತನ್ನ ಸೈನ್ಯಸಮೇತನಾಗಿ ಗುಡಗುಂಟಿಯ ಮೇಲೆ ದಾಳಿ ಮಾಡಿದನು. ಇದನ್ನು ಅರಿತ ಗುಡಗುಂಟಿ ಅರಸ ಗೆಜ್ಜಲಗಟ್ಟಿ, ನೀರಲಕೇರಿ ರೌಡಲ ಬಂಡಿಯ

ನಾಡಗೌಡರ ಸಹಾಯವನ್ನು ಪಡೆದು ಸುರಪುರದ ಸೈನ್ಯವನ್ನು ಎದುರಿಸಬೇಕಾಯಿತು. ಅಲ್ಲಿ ಸುರಪುರದವರಿಗೆ ಜಯ ತಂದುಕೊಟ್ಟಿತು. ಗುಡುಗುಂಟಿ ಅರಸ ಕನಕಗಿರಿಗೆ ಓಡಿ ಹೋದನು. ನಂತರದಲ್ಲಿ ಕನಕಗಿರಿಯ ಅರಸರ ಸಹಾಯದಿಂದ ಗುಡಗುಂಟಿಯನ್ನು ಸುರಪುರದ ಅರಸರು ಗುಡಗುಂಟಿಯಲ್ಲಿರುವ ಅರಸರಿಗೆ ಬಿಡಬೇಕಾಯಿತು.[೫೩]

ರಾಜಾಸೋಮಲಿಂಗನಾಯಕರಿಗೆ ಮಕ್ಕಳಿರಲಿಲ್ಲ. ಅಷ್ಟೊತ್ತಿಗೆ ನಿಜಾಮ ಸರಕಾರವು ಗುಡಗುಂಟಿಯನ್ನು ವಶಕ್ಕೆ ತೆಗೆದುಕೊಂಡಿತ್ತು. ನಿಜಾಮನ ಆಜ್ಞೆಯಂತೆ ರಾಜಾವೆಂಕಟಪ್ಪ ನಾಯಕನ ಪತ್ನಿ ರಾಣಿ ಕಾಟಮ್ಮ ಅಧಿಕಾರಕ್ಕೆ ಬಂದಳು. ಮುಂದೆ ಅವಳು ನಿಜಾಮ ಸರಕಾರಕ್ಕೆ ದತ್ತು ತೆಗೆದುಕೊಳ್ಳುವ ಕುರಿತಾಗಿ ಮನವಿ ಮಾಡಿದಳು. ಅವರ ಮನವಿಯನ್ನು ಮನ್ನಿಸಿದರು. ಆಗ ರಾಣಿ ಕಾಟಮ್ಮ ಸರಕಾರದ ಅನುಮತಿಯೊಂದಿಗೆ ರಾಜಾ ಜಡಿಸೋಮಪ್ಪ ನಾಯಕನನ್ನು ದತ್ತು ತೆಗೆದುಕೊಂಡಳು. ಸಂಸ್ಥಾನದ ಆಡಳಿತ ನಿರ್ವಹಣೆಗಾಗಿ ನಾಜಿಮ್ ಎಂಬ ಅಧಿಕಾರಿಯನ್ನು ನಿಜಾಮ್ ಸರಕಾರ ನೇಮಿಸಿತು.[೫೪] ರಾಜಾ ಜಡಿಸೋಮಪ್ಪನಾಯಕ ತೀರಿದ ಬಳಿಕ ಈ ಸಂಸ್ಥಾನವು ಪುನಃ ತನ್ನ ವಶಕ್ಕೆ ಪಡೆದುಕೊಂಡಿತು. ಆ ಮನೆತನದ ರಾಣಿ ಗೌರಮ್ಮನಿಗೆ ಸಂಸ್ಥಾನದ ಆಡಳಿತವನ್ನು ವಹಿಸಿಕೊಟ್ಟರು. ರಾಣಿ ಗೌರಮ್ಮ ಸರಕಾರದ ಅನುಮತಿಯ ಮೇರೆಗೆ ರಾಜಾ ತಿಪ್ಪರಾಜ ಜಡಿಸೋಮನಾಯಕನನ್ನು ದತ್ತಕ ತೆಗೆದುಕೊಂಡಳು. ರಾಜಾತಿಪ್ಪರಾಜ ಈ ಮನೆತನದ ಕೊನೆಯ ಅರಸ. ಈ ಸಂಸ್ಥಾನದ ವ್ಯಾಪ್ತಿಯಲ್ಲಿ ೪೪ ಹಳ್ಳಿಗಳಿದ್ದವು. ಈ ಸಂಸ್ಥಾನಕ್ಕೆ ಕಂದಾಯ ೫೦,೦೦೦ ರೂ. ಬರುತ್ತಿತ್ತು. ಅದರಲ್ಲಿ ೭೦೦೦ ಗಳನ್ನು ನಿಜಾಂ ಸರ್ಕಾರಕ್ಕೆ ಕೊಡಬೇಕಾಯಿತು. ಈ ಸಂಸ್ಥಾನದಲ್ಲಿ ಆಡಳಿತ ನಿರ್ವಹಣೆಗಾಗಿ ೪ ವಿಭಾಗಗಳಿದ್ದವು. ಅವುಗಳೆಂದರೆ ಮೌಲ್, ಫೌಜ್‌ದಾರಿ, ದಿವಾನಿ ಮತ್ತು ಪೊಲೀಸ್ ಈ ವಿಭಾಗಗಳಿಗೆ ಪ್ರತ್ಯೇಕ ಕಾರ್ಯಗಳು ಮಾಡುತ್ತಿದ್ದವು. ದೇಶ ಸ್ವಾತಂತ್ರ್ಯಗಳಿಸಿದ ನಂತರದಲ್ಲಿ ಎಲ್ಲಾ ಅರಸೊತ್ತಿಗೆಗಳು ಭಾರತ ಒಕ್ಕೂಟದಲ್ಲಿ ಲೀನವಾದರೂ ಹೈದರಾಬಾದ್ ಸಂಸ್ಥಾನದ ಸಮಕಾಲೀನ ಗುಡಗುಂಟಿ ಸಂಸ್ಥಾನವು ೧೯೪೮, ಸೆಪ್ಟೆಂಬರ್ ೧೮ರವರೆಗೆ ಅಧಿಕಾರವನ್ನು ಬಿಟ್ಟುಕೊಟ್ಟಿರಲಿಲ್ಲ.

### ಗುಂತಗೋಳದ ನಾಯಕ ಅರಸರು

ಇದು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನಿಂದ ಸುಮಾರು ೩೦ ಕಿ.ಮೀ. ಅಂತರದಲ್ಲಿದೆ. ಇಲ್ಲಿ ನಾಯಕ ಅರಸರುಗಳು ಆಳಿದ್ದಾರೆ. ಈ ಮನೆತನಕ್ಕೆ ಸಂಬಂಧಪಟ್ಟ ಆಧಾರಗಳು ಸಿಗುವುದಿಲ್ಲ. ಆದರೆ ಸ್ಥಳೀಯ ಜನಪದ ಹಾಡುಗಳನ್ನು ಹಾಗೂ

ಸ್ಥಳೀಯ ಸ್ಮಾರಕಗಳಿಂದ, ಇವರುಗಳಿಗೆ ಸಂಬಂಧಿಸಿದ ಜನರುಗಳ ಅಭಿಪ್ರಾಯಗಳನ್ನು ಸಂಗ್ರಹಿಸಿಕೊಂಡು ಮನೆತನದ ವಂಶಸ್ಥರನ್ನು ಗುರುತಿಸಿದೆ.

ಸಾಮಾನ್ಯವಾಗಿ 'ಗುಂತ' ಎಂದರೆ ತಗ್ಗಾದ ಪ್ರದೇಶ, 'ಗುಳೆ' ಎಂದರೆ ವಿಪ್ಲವ ಕಾಲದಲ್ಲಿ ಹೋಗಿ ನೆಲೆಸಿರುವುದು. ತಗ್ಗಾದ ಪ್ರದೇಶವೊಂದರಲ್ಲಿ ಯಾವುದೇ ವಿಪ್ಲವ ಕಾಲದಲ್ಲಿ ಹೋಗಿ ಅಲ್ಲಿ ನೆಲೆಯೂರಿದ್ದರಿಂದ ಈ ಹೆಸರು ಬಂದಿರಬಹುದು. ಈ ಮೊದಲು ಊರಿನ ಹೆಸರು ಗುಂತಗುಳೆ ಎಂದಿತ್ತು. ಗುಂತಗೋಳ ನಾಯಕರು ಕ್ರಿ.ಶ.೧೯೪೧ ರಿಂದ ೧೯೪೮ರವರೆಗೆ ಆಳಿದರು. ಇವರು ಕಂಚಿಯಿಂದ ಬಂದವರು. ಹಾಗೆ ಬರುವಾಗ ತಮ್ಮೊಟ್ಟಿಗೆ ಹಲವು ಜನರನ್ನು ಕರೆತಂದಿದ್ದಾರೆ. ಇವರ ಸಂಗಡ ಬಂದ ಮನೆತನದ ವಂಶಸ್ಥರಿಗೆ ಕಂಚಿಯವರು ಎಂದು ಕರೆಯುವರು. ಇಂದಿಗೂ ಇವರ ವಂಶಸ್ಥರು ಗುಂತಗೋಳದಲ್ಲಿದ್ದಾರೆ.

ಬಿಜಾಪುರದ ಆದಿಲ್‌ಶಾಹಿಗಳ ಆಡಳಿತಾವಧಿಯಲ್ಲಿ ಗುಂತಗೋಳದ ನಾಯಕರು ಸಂಸ್ಥಾನವನ್ನು ಸ್ಥಾಪಿಸಿದರು. ಕ್ರಿ.ಶ.೧೭೫೪ ರಿಂದ ೧೯೪೮ರವರೆಗೆ ಆಳ್ವಿಕೆ ಮಾಡಿದ ಬ್ರಿಟಿಷ್ ಮತ್ತು ಹೈದ್ರಾಬಾದ್ ನಿಜಾಮರ ಕಾಲಘಟ್ಟದಲ್ಲಿ ಗುಂತಗೋಳದ ನಾಯಕರುಗಳು, ಅವರ ದರ್ಪ, ದಬ್ಬಾಳಿಕೆಯ ನಡುವೆ ಸಮರ್ಥವಾಗಿ ಆಳ್ವಿಕೆ ನಡೆಸಿದ್ದು ವಿಶೇಷವಾಗಿದೆ. ಆದಿಲ್ ಶಾಹಿಗಳು ತಮ್ಮ ಅಧೀನದವರಿಗೆ ಜಹಗೀರು ಕೂಡುತ್ತಿದ್ದರು. ಹೀಗಾಗಿ ಇವರು ಮೊದಲ ಜಹಗೀರುಗಾರುಗಳನ್ನು ಹಾಕಿದ್ದರು. ನಂತರದ ಕಾಲದಲ್ಲಿ ಔರಂಗಜೇಬನು ಬಿಜಾಪುರವನ್ನು ಮುತ್ತಿಗೆ ಹಾಕಿ ಸಿಕಂದರನನ್ನು ಸೆರೆಹಿಡಿಯುತ್ತಾನೆ. ಆಗ ಆದಿಲ್‌ಶಾಹಿಗಳ ಅಧಿಕಾರ ಅಂತ್ಯಗೊಳ್ಳುತ್ತದೆ. ನಂತರದಲ್ಲಿ ಇವುರುಗಳು ಸ್ವತಂತ್ರರಾಗಿ ಆಳ್ವಿಕೆ ಮಾಡಿದರು.

ಇವರು ಜಲದುರ್ಗದಲ್ಲಿ ಆಳ್ವಿಕೆ ಪ್ರಾರಂಭಿಸಿದರು. ಇವರ ಮೊದಲ ರಾಜಧಾನಿ ಜಲದುರ್ಗ ಆಗಿತ್ತು. ಆದಿಲ್‌ಶಾಹಿಗಳ ಕಾಲದಲ್ಲಿ ಗುಂತಗೋಳ ಖೈದಿಗಳಿಗೆ ಶಿಕ್ಷೆ ನೀಡುವ ಸ್ಥಳವಾಗಿತ್ತು. ನಂತರದಲ್ಲಿ ಇವರು ಗುಂತಗೋಳಕ್ಕೆ ಬಂದು ನೆಲೆಸಿದರು.

ಈ ಸಂಸ್ಥಾನದ ಮೂಲ ಪುರುಷ ಕಾಲಭೈರವ ನಾಯಕನಾಗಿದ್ದನು. ಈತನ ಸಮಾಧಿ ಗುಂತಗೋಳದಲ್ಲಿರುವುದು ಕಂಡುಬರುತ್ತದೆ. ಅಲ್ಲಿ ಆ ಸ್ಥಳಕ್ಕೆ ಕಾಲಭೈರನಾಯಕನ ಗಚ್ಚಿನ ಕಟ್ಟೆ ಎಂದೇ ಅಲ್ಲಿನ ಜನರು ಕರೆಯುತ್ತಾರೆ. ಈ ನಾಯಕ ಅರಸರಲ್ಲಿ ರಾಜಾ ಅಮರಪ್ಪ ನಾಯಕ, ರಾಜಾ ಬಸಪ್ಪನಾಯಕ, ರಾಜಾ ಇಮ್ಮಡಿ ಅಮರಪ್ಪನಾಯಕ, ರಾಜಾಶ್ರೀನಿವಾಸ ನಾಯಕ, ರಾಜಾ ಇಮ್ಮಡಿ ಬಸಪ್ಪನಾಯಕ, ರಾಜಾರಾಯಪ್ಪನಾಯಕ, ರಾಜಾ ಮುಮ್ಮಡಿ ಅಮರಪ್ಪನಾಯಕ, ರಾಜಾ ಇಮ್ಮಡಿ ರಾಯಪ್ಪನಾಯಕ, ರಾಜಾನರಸಿಂಹನಾಯಕ ಅರಸರುಗಳು ಪ್ರಮುಖರಾಗಿದ್ದಾರೆ.

ಈ ನಾಯಕ ಅರಸರಿಗೆ 'ನಾಯಕಾಚಾರ್ಯ' ಮಹಾನಾಯಕ ಎಂಬ ಬಿರುದುಗಳು ಹೊಂದಿದ್ದರು. ಅಂದು ಅಧಿಕಾರದಲ್ಲಿದ್ದ ಆದಿಲ್‌ಶಾಹಿಗಳು ಇವರಿಗೆ 'ಬಹರಿ ಬಹದ್ದೂರ್' ಎಂಬ ಬಿರುದನ್ನು ನೀಡಿದ್ದಾರೆ.[೫೫] ಇಲ್ಲಿನ ನಾಯಕ ಸಮುದಾಯಕ್ಕೆ ಇವರುಗಳು ಗುರುಗಳಾಗಿದ್ದಾರೆ. ಇಂದಿಗೂ ಈ ಮನೆತನದವರನ್ನು ಗುರು ಮತ್ತು ದೊರೆ ಮನೆತನ ಎಂದು ಕರೆಯುತ್ತಾರೆ.

'ಆನೆ' ಈ ಸಂಸ್ಥಾನಿಕರ ರಾಜಲಾಂಛನ ಆಗಿತ್ತು. ಹಸಿರು ಬಣ್ಣದ ಧ್ವಜಕ್ಕೆ ಬೆಳ್ಳಿಯ ಮೊಹರಿದೆ. ಶೈವಪಂಥಕ್ಕೆ ಸೇರಿದ ಭಾರದ್ವಾಜ ಗೋತ್ರದವರು. ಅಂದು ಇವರ ಆಡಳಿತಕ್ಕೆ ೧೩೦ ಹಳ್ಳಿಗಳು ಸೇರಿದ್ದು ಇವರ ಗಡಿಯನ್ನು ಸೂಚಿಸುವ ಜನಪದ ಹಾಡಿನಲ್ಲಿ ಇಂತಿದೆ.

ಮಾಮಲೆ ಮುದಗಲ್, ಕಿಲ್ಲೆ ಜಲದುರ್ಗ
ಸಮತ್‌ಗೋನವಾಟ್ಲ ಸಂಸ್ಥಾನ ಗುಂತಗೋಳ
ನಮ್ಮ ರಾಜರದು.[೫೬]

ಅಂದಿನ ಆಡಳಿತದಲ್ಲಿ ಪಾಟೀಲ, ಕುಲಕರ್ಣಿ, ನಾಡಗೌಡ, ಮಾಲೀಗೌಡ, ದೇಸಾಯಿ, ಪೊಲೀಸ್ ಪಾಟೀಲ್ ಎಂಬ ಅಧಿಕಾರಿಗಳಿದ್ದರು.

## ಹೈದ್ರಾಬಾದ್ ಕರ್ನಾಟಕ ಪ್ರದೇಶಗಳನ್ನಾಳಿದ ನಿಜಾಮರು

ಹೈದ್ರಾಬಾದ್ ಕರ್ನಾಟಕ ಪ್ರದೇಶದ ಇತಿಹಾಸವು ಎರಡು ಸಾವಿರ ವರ್ಷಕ್ಕಿಂತಲೂ ಹಳೆಯದಾದ ಮಹತ್ವದ ಇತಿಹಾಸ ಹೊಂದಿದೆ. ಕರ್ನಾಟಕ ಇತಿಹಾಸದ ಪೂರ್ವ ವಿಸ್ತಾರವಾದ ಅಧ್ಯಯನವನ್ನು ಮಾಡಿದ ರಾಬರ್ಟ್ ಬ್ರೂಸ್‌ಫೂಟ್‌ರವರೆಗೆ ಕೃತಜ್ಞತೆ ಸಲ್ಲಿಸಲೇಬೇಕು. ಪ್ರಾಚೀನ ಕಾಲದಿಂದಲೂ ಕರ್ನಾಟಕ ಇತಿಹಾಸ ಬಹಳ ಪ್ರಖ್ಯಾತಿ ಹೊಂದಿದೆ. ವಿಶೇಷವಾಗಿ ಹೇಳಬೇಕು ಎಂದರೆ, ಹೈದ್ರಾಬಾದ್ ಕರ್ನಾಟಕ ಪ್ರದೇಶದ ಇತಿಹಾಸ ಬಹಾಳ ಪ್ರಮುಖವಾಗಿದ್ದು ಇಲ್ಲಿ ಆಳಿದ ರಾಜ ಮನೆತನದವರು ತನ್ನದೇ ಆದ ರೀತಿಯಲ್ಲಿ ಆಳ್ವಿಕೆ ನಡೆಸಿದ್ದು ಇರುತ್ತದೆ. ಕರ್ನಾಟಕ ರಾಜ್ಯದ ಇತಿಹಾಸದ ಬಗ್ಗೆ ಬಹಳಷ್ಟು ಗ್ರಂಥಗಳು ಸಿಗುತ್ತದೆ. ಆದರೆ ಹೈದ್ರಾಬಾದ್ ಕರ್ನಾಟಕದ ಸಂಪೂರ್ಣ ಇತಿಹಾಸ ನಮಗೆ ಸಿಗುತ್ತಿಲ್ಲ. ಈ ದಿಸೆಯಲ್ಲಿ ಹೈದ್ರಾಬಾದ್ ಕರ್ನಾಟಕ ಸಮಗ್ರ ಇತಿಹಾಸ ಈ ಭಾಗದಲ್ಲಿ ಪರಿಚಯಿಸಬೇಕಾಗಿದೆ.

ಹೈದ್ರಾಬಾದ್ ಕರ್ನಾಟಕ ಪ್ರದೇಶವನ್ನು ಬಹಳಷ್ಟು ರಾಜಮನೆತನದವರು ಆಳ್ವಿಕೆ ನಡೆಸಿ ಹೈದ್ರಾಬಾದ್ ಕರ್ನಾಟಕವು ಜಗತ್ತಿನಲ್ಲಿಯೇ ಪ್ರಖ್ಯಾತಿ ಹೊಂದುವಂತೆ ಮಾಡಿದ್ದಾರೆ. ಈ ಪ್ರದೇಶದ ಆಳಿದ ರಾಜಮನೆತನದವರಲ್ಲಿ ಬಹಳಷ್ಟು ರಾಜರು ಪರಾಕ್ರಮಿಗಳು, ಬಲಶಾಲಿಗಳು, ವೀರರು ಹಾಗೂ ಕವಿಗಳಾಗಿದ್ದರು. ಈ ಭಾಗವು ಸಾಮಾಜಿಕ ಮತ್ತು ಧಾರ್ಮಿಕ

ತವರೂರಾಗಿದೆ. ಈ ಭಾಗದಿಂದಲೇ ಮಹಾತ್ಮ ಬಸವಣ್ಣನವರು ಮೊಟ್ಟ ಮೊದಲಿಗೆ ಅನುಭವ ಮಂಟಪ ಸಂಪತ್ತು ಸ್ಥಾಪಿಸಿ ವಚನಗಳ ಮೂಲಕ ಕ್ರಾಂತಿಯನ್ನು ಎಬ್ಬಿಸಿದ್ದು ಇರುತ್ತದೆ. ಈಗಾಗಿ ಇತಿಹಾಸವನ್ನು ನೆನಪಿಸುವ ಅನಿವಾರ್ಯವು ಆಗಿದೆ. ಕರ್ನಾಟಕ ಇತಿಹಾಸ ಅಭ್ಯಾಸಿಸಿದ್ದಾಗ, ಹೈದ್ರಾಬಾದ್ ಕರ್ನಾಟಕ ಪ್ರದೇಶದ ಸುಮಾರು ೩೦೦ ವರ್ಷಗಳ ಇತಿಹಾಸ ಸಿಗುವುದಿಲ್ಲ. ಯಾಕೆ ಗೊತ್ತಾ? ಈ ೩೦೦ ವರ್ಷಗಳು ಹೈದ್ರಾಬಾದಿನ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದವು. ಆದ್ದರಿಂದ ಹೈದ್ರಾಬಾದ್ ಕರ್ನಾಟಕದ ಸಮಗ್ರ ಇತಿಹಾಸ ತಿಳಿದುಕೊಳ್ಳಲು ನಮಗೆ ಹೈದ್ರಾಬಾದಿನ ನಿಜಾಮನ ಆಡಳಿತದ ಬಗ್ಗೆ ತಿಳಿದುಕೊಳ್ಳುವುದು ಅತೀ ಅವಶ್ಯಕ ವಾಗಿದೆ.

ಮೊಘಲ್ ಸಾಮ್ರಾಜ್ಯದ ದಕ್ಷಿಣ ಭಾರತದ ಸುಬೇದಾರನಾಗಿದ್ದ(ಗವರ್ನರ್) ನಿಜಾಮ್-ಉಲ್-ಮುಲ್ಕ್(ಮೀರ್ ಖಮುರುದ್ದಿನ್ ಖಾನ್) ತನ್ನದೇ ಆದ ಆಸಫಿಯಾ ರಾಜವಂಶದ ರಾಜ್ಯ ಕಟ್ಟಿದನು.[೫೭] ಕ್ರಿ.ಶ.೧೭೨೪ರಲ್ಲಿ ಸ್ಥಾಪನೆಯಾದ ನಿಜಾಮ ರಾಜ್ಯ ೧೯೪೮ರವರೆಗೆ ಸುಮಾರು ೨೨೪ ವರ್ಷಗಳ ಸುದೀರ್ಘಾವಧಿಯವರೆಗೆ ಆಡಳಿತ ನಡೆಸಿದ. ಈ ರಾಜವಂಶ ಸುಮಾರು ೭ ಜನರು. ಈ ವಂಶದ ರಾಜಭಾರ ನಡೆಸಿದರು. ಆರಂಭದಲ್ಲಿ ಔರಂಗಾಬಾದ್ ವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಇವರು ನಂತರ ಹೈದ್ರಾಬಾದ್ ನಗರವನ್ನು ಶಾಶ್ವತ ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ನಿಜಾಮರ ಆಳ್ವಿಕೆ ಪ್ರಾರಂಭವಾದ ಔರಂಗಜೇಬನ ಕಾಲದಲ್ಲಿ ವಶಪಡಿಸಿಕೊಂಡಿದ್ದ ಕರ್ನಾಟಕದ ಬೀದರ್ ಮತ್ತು ಗುಲಬರ್ಗಾ ಜಿಲ್ಲೆಗಳು ಸಹ ಒಳಗೊಂಡಿದ್ದವು. ನಂತರದ ದಿನಗಳಲ್ಲಿ ಒಟ್ಟು ೧೬ ಜಿಲ್ಲೆಗಳನ್ನು ಒಳಗೊಂಡ ಬೃಹತ್ ರಾಜ್ಯವನ್ನು ಸ್ಥಾಪಿಸಿದರು.

ಕರ್ನಾಟಕದ ಬೀದರ್, ಗುಲಬರ್ಗಾ, ರಾಯಚೂರು ಮತ್ತು ಕೊಪ್ಪಳ ಹಾಗೂ ಮಹಾರಾಷ್ಟ್ರ, ನಾಂದೇಡ್, ಉಸ್ಮಾನಾಬಾದ್, ಔರಂಗಾಬಾದ್, ನಿಜಾಮಾಬಾದ್, ಆದಿಲ್‌ಬಾದ್ ಹೀಗೇ ಮೊದಲಾದವುಗಳು. ಈತನ ರಾಜ್ಯದಲ್ಲಿ ಸೇರಿಕೊಂಡಿದ್ದ ಜಿಲ್ಲೆಗಳಾಗಿದ್ದವು. ಸುಮಾರು ೨೨೪ ವರ್ಷಗಳ ಆಳ್ವಿಕೆ ನಡೆಸಿದ ನಿಜಾಮರು ಅನೇಕ ಪ್ರಗತಿಪರ ಕಾರ್ಯಗಳನ್ನು ಮಾಡಿರುತ್ತಾರೆ. ನಿಜಾಮ ಸಂಸ್ಥಾನದಲ್ಲಿ ಪ್ರಸಿದ್ಧನಾಗಿದ್ದ ತುರಾಬ ಅಲಿಖಾನ್ (ಸಾಲಾರಜಂಗ) ಇತನು ಮಾಡಿದ ಪ್ರಗತಿಪರ ಕಾರ್ಯಗಳ ಮತ್ತು ಇವನು ನಡೆಸಿದ ಖಡಕ್ ಆಡಳಿತವನ್ನು ನೋಡಿದ ನಮ್ಮ ಹೈದ್ರಾಬಾದ್ ಕರ್ನಾಟಕದ ಜನರಲ್ಲಿ ಇಂದಿಗೂ ತುರಾಬ ಅಲಿಖಾನ್ ರವರನ್ನು ನೆನೆಯುತ್ತಾರೆ. ಹೈದ್ರಾಬಾದ್ ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿ ಬೇರೆ ಕಡೆಗೆ ಪಾಟೀಲ. ಪಟೇಲ್, ಕುಲಕರ್ಣಿ, ಜಮಾದಾರ, ಬಿರಾದಾರ್ ಇಂತಹ ಹೆಸರುಗಳು ಸಿಗುವುದಿಲ್ಲ.[೫೮] ಏಕೆಂದರೆ ಇವುಗಳನ್ನು ಜಾರಿಗೆ ತಂದವರೇ ನಿಜಾಮರಾಗಿದ್ದಾರೆ. ಹೀಗೆ

ಇನ್ನೂ ಅನೇಕ ವಿಷಯಗಳನ್ನು ಇವರ ಬಗ್ಗೆ ಅಭ್ಯಾಸಿಸಿದ್ದಾಗ ತಿಳಿಯಬಹುದಾಗಿದೆ. ಅವುರುಗಳಲ್ಲಿ ಪ್ರಮುಖರು ಈ ಕೆಳಗೆ ನೋಡಬಹುದಾಗಿದೆ.

೧. ನಿಜಾಮ್-ಉಲ್-ಮುಲ್ಕ ಕ್ರಿ.ಶ.೧೭೨೪ ರಿಂದ ೧೭೪೮

೨. ಮೀರ ನಿಜಾಮ್ ಅಲಿಖಾನ್ ಕ್ರಿ.ಶ.೧೭೬೨ ರಿಂದ ೧೮೦೩

೩. ಮೀರ್ ಅಕ್ಬರ್ ಅಲಿಖಾನ್ ಸಿಕ್ಕಂದರಜಾ ಕ್ರಿ.ಶ.೧೮೦೩ ರಿಂದ ೧೮೨೯

೪. ಮೀರ್‌ಫರಕುಂದ ಅಲಿಖಾನ್ ನಾಸೀರ್ ಉಲ್ ದೌಲಾ ಕ್ರಿ.ಶ.೧೮೨೯ ರಿಂದ ೧೮೫೭

೫. ಮೀರ ತನಾಯತ ಅಲಿಖಾನ್ ಆಫ್ಜಲ್ ಉಲ್ ದೌಲಾ ಕ್ರಿ.ಶ.೧೮೫೭ ರಿಂದ ೧೮೬೯

೬. ಮೀರ ಮಹಬೂಬ ಅಲಿಖಾನ್ ಕ್ರಿ.ಶ.೧೮೬೯ ರಿಂದ ೧೯೧೧

೭. ಮೀರ ಉಸ್ಮಾನ ಅಲಿಖಾನ್ ಕ್ರಿ.ಶ.೧೯೧೧ ರಿಂದ ೧೯೪೮ ಈಗೆ ಮೊದಲಾವರು.

ಈ ರೀತಿಯಾಗಿ ಹೈದ್ರಾಬಾದ್ ಕರ್ನಾಟಕವನ್ನು ಹಲವಾರು ನಿಜಾಮ ವಂಶಸ್ಥರು ಆಳಿದ್ದನ್ನು ಚರಿತ್ರೆಯ ಪುಟದಿಂದ ತಿಳಿದುಕೊಳ್ಳಬಹುದು. ಈ ಭಾಗದಲ್ಲಿ ಕೆಲವು ಸಂಸ್ಥಾನಗಳು ಅವರ ಅಧೀನದಲ್ಲಿದ್ದು. ಅವರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದವು. ನಿಜಾಮರು ಕೆಲವು ಆಡಳಿತಾಧಿಕಾರಿಗಳ ಮೂಲಕ ಜನೋಪಯೋಗಿ ಕೆಲಸಗಳನ್ನು ಮಾಡುವಲ್ಲಿ ಪ್ರಯತ್ನಿಸಿದ್ದರು. ಲಿಯೋನಾರ್ಡ್‌ಮನ ಎಂಬ ಭೂಗರ್ಭಶಾಸ್ತ್ರಜ್ಞ ೧೯೨೮ ರಿಂದ ೧೯೩೫ರವರೆಗೆ ಕೊಪ್ಪಳ ಮತ್ತು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನಲ್ಲಿ ಬರಗಾಲ ಇದ್ದ ಸಂದರ್ಭದಲ್ಲಿ ನೀರಿನ ಬವಣೆಯನ್ನು ಅರಿತು ಸುಮಾರು ೧೨೦೦ ಬಾವಿಗಳನ್ನು ತೋಡಿಸಿದನು.

ಕ್ರಿ.ಶ.೧೭೨೪ ರಿಂದ ೧೯೪೮ರವರೆಗೆ ಹೈದರಾಬಾದ್ ನಿಜಾಮರ ಆಳ್ವಿಕೆ ಒಳಪಟ್ಟಿತ್ತು. ಅಂದು, ಇಂದಿನ ಲಿಂಗಸೂಗೂರು ತಾಲೂಕು ಜಿಲ್ಲೆಯಾಗಿತ್ತು. ಲಿಂಗಸೂಗೂರು ವಿಭಾಗದಲ್ಲಿ ಲಿಂಗಸೂಗೂರು, ಸಿಂಧನೂರು, ಕುಷ್ಟಗಿ ತಾಲ್ಲೂಕುಗಳು ಸೇರಿದ್ದವು. ಹೈದ್ರಾಬಾದ್ ನಿಜಾಮರು ಬ್ರಿಟಿಷರೊಂದಿಗೆ ಸಂಧಾನ ಮಾಡಿಕೊಂಡು ಸಂಸ್ಥಾನಗಳ ಆಡಳಿತ ನಡೆಸುತ್ತಿದ್ದರು. ಇದು ಅಂದಿನ ಕಾಲದಲ್ಲಿ 'ಛಾವಣಿ' ಎಂದು ಕರೆಯುತ್ತಿದ್ದರು. ಛಾವಣಿಯೆಂದರೆ ಸಾಮಾನ್ಯವಾಗಿ ಮಿಲಿಟರಿ ಏರಿಯಾ ಎಂದರ್ಥ. ಸುಮಾರು ೨೦೦ ವರ್ಷಗಳವರೆಗೆ ಹೈದರಾಬ್ ಪ್ರದೇಶವನ್ನುಳಿದ ನಿಜಾಮರು ೫ ಭಾಗದಲ್ಲಿ ಹಲವು ಕಟ್ಟಡಗಳನ್ನು ಪರ್ಶಿಯನ್ ವಾಸ್ತುಶಿಲ್ಪದಂತೆ ಕಟ್ಟಿರುವುದನ್ನು ನೋಡಬಹುದಾಗಿದೆ. ಇಲ್ಲಿರುವ ಹಲವು ಬಂಗಲೆಗಳು ಇದೇ ವಾಸ್ತುವಿನ್ಯಾಸದಲ್ಲಿ ನಿರ್ಮಿಸಿದ್ದಾರೆ. ಅವರುಗಳು ಕಟ್ಟಿಸಿದೆ. ಕಟ್ಟಡಗಳೂ ಸಾಕಷ್ಟಿವೆ.

ನಿಜಾಮರು ಆಡಳಿತದಲ್ಲಿ ಬ್ರಿಟಿಷರಿಗೆ ಸೈನಿಕರಿಗೆ ನೀರಿನ ಅನುಕೂಲಕ್ಕಾಗಿ ಕುದುರೆಗಳಿಗೆ ನೀರು ಒದಗಿಸಲು ಈ ಇಲ್ಲಿನ ಕೆರೆ ಬಹುಉಪಯೋಗವಾಗಿತ್ತು. ಇದನ್ನು ಇನ್ನಷ್ಟು ದುರಸ್ತಿಗೊಳಿಸಿದರು. ಕೆರೆಯ ತಂಪಾದ ತಾಣದಲ್ಲಿ ಕಟ್ಟಡಗಳನ್ನು ಕಟ್ಟುವುದಷ್ಟೇ ಅಲ್ಲ, ವಿವಿಧ ಮರಗಳನ್ನು ನಡೆಸಿ ಬೆಳೆಸಿದ್ದಾರೆ. ಅಂದು ಬೆಳೆಸಿದ ಗಿಡಗಳು ಇಂದು ಹೆಮ್ಮರವಾಗಿ ಬೆಳೆದು ಮುಗುಲೆತ್ತರಕ್ಕೆ ಬೆಳೆದು ನಿಂತಿವೆ.

ಅಪಾರ ಸಂಶೋಧನೆಗೆ ಸಾಧ್ಯತೆಗಳಿರುವ ನೂರಾರು ಸ್ಮಾರಕಗಳು ಪಳೆಯುಳಿಕೆಗಳು ಲಿಂಗಸೂಗೂರು ತಾಲೂಕಿನಲ್ಲಿ ಅಡಿಗಡಿಗೂ ಲಭ್ಯವಾಗುತ್ತಿವೆ. ಅವರ ಬಂಗಲೆಗಳು, ಬಾವಿಗಳು, ಕ್ಲಬ್‌ಗಳು ಅರಮನೆಗಳು ಸಮಾಧಿಗಳು, ನಿರ್ಮಾಣ ಮಾಡಿದ್ದಾರೆ. ಒಂದು ಭಾಗದ ಸಂಸ್ಕೃತಿ ಒಂದು ಕಾಲದ ಇತಿಹಾಸ ಕಟ್ಟುವುದಕ್ಕೆ ಏನಲ್ಲ ಬೇಕೋ ಅವೆಲ್ಲ ಇಲ್ಲವೆ. ಇತಿಹಾಸ ಕಟ್ಟುವುದಕ್ಕೆ ಬೇಕಾಗಿರುವುದು ಕಾಳಜಿ ಮತ್ತು ಆಸಕ್ತಿ. ನಾಡಿನ ಬಗೆಗಿನ ಪ್ರೇಮ ಮತ್ತು ಎಲ್ಲಕ್ಕೂ ಮಿಗಿಲಾಗಿ ಇಚ್ಛಾಶಕ್ತಿ. ಮುಂದೊಂದು ದಿನ ಅಂಥ ಒಂದು ಯೋಜನೆ, ಐತಿಹಾಸಿಕ ಸ್ಮಾರಕಗಳನ್ನು ಕಾಪಾಡುವ ಇಚ್ಛಾಶಕ್ತಿ ನಮ್ಮ ಇತಿಹಾಸ ಪ್ರಜ್ಞರಲ್ಲಿ ಬರಲಿ ಎಂದು ಹಾರೈಸೋಣ.

**ಅಡಿಟಿಪ್ಪಣಿಗಳು**

೧. ಡಾ.ಶಶಿಕಾಂತ, **ಲಿಂಗಸೂಗೂರು**, ಬಸವ ಪ್ರಕಾಶನ, ಲಿಂಗಸೂಗೂರು, ೨೦೧೦, ಪು.೧೩

೨. ಡಾ.ಅಮರೇಶ ಯತಗಲ್, **ಸ್ವರ್ಣ ಪ್ರಭೆ**, ಸ್ಮರಣ ಸಂಚಿಕೆ, ವಜ್ರಮಹೋತ್ಸವ ಸಮಿತಿ, ಲಿಂಗಸೂಗೂರು, ೨೦೦೭, ಪು.೧೦೨

೩. ಡಾ.ಶಶಿಕಾಂತ, **ಪೂರ್ವೋಕ್ತ** ೨೦೧೦, ಪು.೧೫

೪. ಅದೇ, ಪು.೧೫

೫. ಗಿರಿರಾಜ ಹೊಸಮನಿ, **ಲಿಂಗಸೂಗೂರು ತಾಲೂಕು ದರ್ಶನ**, ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೬, ಪು.೮

೬. ಅಮರೇಶ ಹಾಲ್ಕೋಡ, **ದೇವದುರ್ಗ ಚಾರಿತ್ರಿಕ ಅಧ್ಯಯನ**, ಚಿಂತನ ಪುಸ್ತಕ ಪ್ರಕಾಶನ, ದೇವದುರ್ಗ, ೨೦೧೨, ಪು.೬೧

೭. ಶರಣಪ್ಪ ಸಿ.(ಪ್ರಸಂ.), **ಭಿಲ್ಲಮ**, ಸ್ಮರಣ ಸಂಚಿಕೆ, ೨ನೇ ಕನ್ನಡ ಸಾಹಿತ್ಯ ಸಮ್ಮೇಳನ ಸಮಿತಿ, ಲಿಂಗಸೂಗೂರು, ೨೦೦೪, ಪು.೩೩

೮. ಜಿಲ್ಲಾ ಸಂಖ್ಯಾ ಸಂಗ್ರಹಾಧಿಕಾರಿಗಳು, **ರಾಯಚೂರು ಮತ್ತು ಕೊಪ್ಪಳ ಜಿಲ್ಲೆ ಅಂಕಿ-ಅಂಶಗಳು,** ೧೯೯೬-೯೭

೯. ಡಾ.ಅಮರೇಶ ಯತಗಲ್, **ಇತಿಹಾಸ ಮಂಥನ,** ಅದಿತಿ ಪ್ರಕಾಶನ, ೨೦೦೭, ಪು.೯

೧೦. ವಿಜಯಲಕ್ಷ್ಮಿ, **ಹಟ್ಟಿ ಚಿನ್ನದ ಗಣಿ ಚಾರಿತ್ರಿಕ ಹಾಗೂ ಸಮಾಜೋ-ಆರ್ಥಿಕ ಅಧ್ಯಯನ,** ಎಂ.ಫಿಲ್.ನಿಬಂಧ, ೨೦೦೬, ಪು.೧೧

೧೧. ಮಹೇಶ, **ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು,** ಎಂ.ಫಿಲ್.ನಿಬಂಧ, ೨೦೦೬, ಪು.೯

೧೨. ಡಾ.ಚನ್ನಬಸಪ್ಪ ಎಸ್. ಪಾಟೀಲ, **ನಮ್ಮ ಜಿಲ್ಲೆಯ ಇತಿಹಾಸ ಸಂಶೋಧನೆಗಳು,** ಹೊನ್ನಸಿರಿ, ನೆನಪಿನ ಸಂಚಿಕೆ, ೧೯೯೪, ಪು.೬೬

೧೩. ಪ್ರೊ.ಬಿ.ಷೇಕ್ ಅಲಿ ಮತ್ತು ಪ್ರೊ.ಅ.ಸುಂದರ, **ಪ್ರಾಗಿತಿಹಾಸಕಾಲದ ನಿರ್ಮಿತಿ ಮತ್ತು ಚಿತ್ರಕಲೆ, ಕರ್ನಾಟಕ ಚರಿತ್ರೆ ಸಂಪುಟ ೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮, ಪು.೩೨೮

೧೪. ಡಾ.ಅಮರೇಶ ಯತಗಲ್, **ಇತಿಹಾಸ ಇಂಚರ,** ಅದಿತಿ ಪ್ರಕಾಶನ, ಲಿಂಗಸೂಗೂರು, ೨೦೦೭, ಪು.೭೩

೧೫. ಡಾ.ದೇವರಕೊಂಡಾರೆಡ್ಡಿ ಹಾಗೂ ಇತರರು (ಸಂ), **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೭,** ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು.XXX

೧೬. ಡಾ.ಅಮರೇಶ ಯತಗಲ್, **ಪೂರ್ವೋಕ್ತ,** ೨೦೦೭, ಪು.೭೩

೧೭. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೩, ಪು.

೧೮. ಶ್ರೀಮತಿ ಅರ್ಚನಾ ಸಿದ್ಧರಾಮಪ್ಪ, **ಗುಲ್ಬರ್ಗಾ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಶಾಸನಗಳು, ಪಿಎಚ್.ಡಿ ಮಹಾಪ್ರಬಂಧ,** ೨೦೧೫, ಪು.೨೧

೧೯. ಡಾ.ಅಮರೇಶ ಯತಗಲ್, **ಪೂರ್ವೋಕ್ತ,** ೨೦೦೭, ಪು.೭೪

೨೦. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೩, ಪು.೧೫೧

೨೧. ಶ್ರೀಮತಿ ಅರ್ಚನಾ, **ಪೂರ್ವೋಕ್ತ,** ೨೦೦೭, ಪು.೨೩

೨೨. ಡಾ.ಚನ್ನಬಸಪ್ಪ, **ರಾಯಚೂರು ಜಿಲ್ಲೆಯ ಚರಿತ್ರೆ; ಶಾಸನಗಳ ಹಿನ್ನೆಲೆಯಲ್ಲಿ,** ಅಕ್ಷರ ಮಂಟಪ ಪ್ರಕಾಶನ, ೨೦೧೦, ಪು.೬೮

೨೩. ಅದೇ, ಪು.೬೮

೨೪. ಅದೇ, ಪು.೬೯

೨೫. ಡಾ.ದೇವರಕೊಂಡಾರೆಡ್ಡಿ (ಸಂ), **ಪೂರ್ವೋಕ್ತ,** ೨೦೦೩, ಪು.೧೭೯

೨೬. ಅದೇ, (ಶಾ.ಸಂ.೧೨೬), ಪು.೨೨೬

೨೭. ಶ್ರೀಮತಿ ಅರ್ಚನಾ ಸಿದ್ಧರಾಮಪ್ಪ, **ಪೂರ್ವೋಕ್ತ,** ಪು.೨೭

೨೮. ಹೊನ್ನಸಿರಿ, **ನೆನಪಿನ ಸಂಚಿಕೆ,** ರಾಯಚೂರು ಜಿಲ್ಲಾ ೩ನೇಯ ಕನ್ನಡ ಸಾಹಿತ್ಯ ಸಮ್ಮೇಳನ ಸಿಂಧನೂರು, ೧೯೯೪, ಪು.೭೪

೨೯. ಯಲ್ಲಪ್ಪ ಭೀಮಣ್ಣ, **ರಾಯಚೂರು ಜಿಲ್ಲೆಯ ದೊಡ್ಡಿಗಳ ತೌಲನಿಕ ಅಧ್ಯಯನ,** ಪಿಎಚ್.ಡಿ, ಮಹಾಪ್ರಬಂಧ

೩೦. ಡಾ.ಅಮರೇಶ ಯತಗಲ್, **ಪೂರ್ವೋಕ್ತ,** ೨೦೦೭, ಪು.೭೬

೩೧. ಅಮರೇಶ ಹಾಲ್ಕೋಡ್, **ದೇವದುರ್ಗ ಚಾರಿತ್ರಿಕ ಅಧ್ಯಯನ,** ೨೦೧೦, ಎಂ.ಫಿಲ್. ಥಿಸಸ್, ಪ್ರಬಂಧ, ಪು.ಸಂ.೧೪

೩೨. ಡಾ.ದೇವರಕೊಂಡಾರೆಡ್ಡಿ (ಸಂ), **ಪೂರ್ವೋಕ್ತ,** ೨೦೦೪, ಪು.(ಶಾ.ಸಂ.೫೦)೧೮೬

೩೩. ಅದೇ, (ಶಾ.ಸಂ.೩೮), ಪು.೧೭೨

೩೪. ಅದೇ, (ಶಾ.ಸಂ.೫೪, ೫೫), ಪು.೧೮೯, ೧೯೦.

೩೫. ಅದೇ, (ಶಾ.ಸಂ.೩೭), ಪು.೧೭೧

೩೬. ಅದೇ, (ಶಾ.೫೯), ಪು.೧೯೨

೩೭. ಅದೇ, (ಶಾ.೫೯), ಪು.೧೯೨

೩೮. ಅದೇ, (ಶಾ.೬೬), ಪು.೧೯೫

೩೯. ಅದೇ, (ಶಾ.ಸಂ.೬೭), ಪು.೧೯೫

೪೦. ಅದೇ, (ಶಾ.ಸಂ.೬೯), ಪು.೧೯೬

೪೧. ಅದೇ, (ಶಾ.ಸಂ.೬೯), ಪು.೧೯೬

೪೨. ಅದೇ, (ಶಾ.ಸಂ.೭೩), ಪು.೧೯೮

೪೩. ಅದೇ, (ಶಾ.ಸಂ.೭೫), ಪು.೧೯೯

೪೪. ಅದೇ, (ಶಾ.ಸಂ.೯೦), ಪು.೨೦೫

೪೫. ಅದೇ, (ಶಾ.ಸಂ.೯೩), ಪು.೨೦೬

೪೬. ಡಾ.ಚನ್ನಬಸವ ಹಿರೇಮಠ, **ಎಡೆದೊರೆ ನಾಡು,** ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ವಿಭಾಗ, ೨೦೧೧, ಪು.೩೧

೪೭. **ದೇವನಾಂಪ್ರಿಯ, ಸಂಚಿಕೆ** ಲಿಂಗಸೂಗೂರು ತಾಲೂಕು, ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ೧೯೯೫, ಪು.೩೯

೪೮. ಡಾ.ದೇವರಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೦೩, ಪು.೧೬೯

೪೯. ಅಮರೇಶಯತಗಲ್, **ಕರ್ನಾಟಕ ನಾಯಕ ಅರಸು ಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು; ಚಾರಿತ್ರಿಕ ಅಧ್ಯಯನ** ಪಿಎಚ್.ಡಿ ಮಹಾಪ್ರಬಂಧ, ಪು.೧೦

೫೦. ಡಾ.ಎಂ.ಕೊಟ್ರೇಶ್, **ಕಲ್ಯಾಣ ಕರ್ನಾಟಕದ ಅರಸು ಮನೆತನಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ೨೦೧೦, ಪು.೧೪೪

೫೧. ಡಾ.ಅಮರೇಶಯತಗಲ್, **ಪೂರ್ವೋಕ್ತ,** ೨೦೦೭, ಪು.೧೦೦

೫೨. ಅದೇ, ಪು.೨೦

೫೩. ಅದೇ, ಪು.೨೧

೫೪. ಅದೇ, ಪು.೨೩

೫೫. ಎಂ.ಕೊಟ್ರೇಶ್, **ಪೂರ್ವೋಕ್ತ,** ೨೦೧೦, ಪು.೧೪೬

೫೬. ಅದೇ, ಪು.೧೦೩

೫೭. ಅದೇ, ಪು.೧೦೩

೫೮. ಶಕೀಲ್ ಪಿ.ಎಸ್., **ಹೈದ್ರಾಬಾದ್ ಕರ್ನಾಟಕ ಇತಿಹಾಸ,** ಉಸ್ಮಾನ ಶಿಕ್ಷಣ ಸಂಸ್ಥೆ, ಹುಮನಾಬಾದ್, ೨೦೧೩, ಪು.೦೩

# ಅಧ್ಯಾಯ: ಮೂರು

## ಶಾಸನಗಳ ವೈವಿಧ್ಯತೆ

೩.೧. ದಾನ ಶಾಸನಗಳು

೩.೨. ವೀರಗಲ್ಲುಗಳು

೩.೩. ಮಾಸ್ತಿಗಲ್ಲುಗಳು

೩.೪. ಪ್ರಶಸ್ತಿ ಶಾಸನಗಳು

೩.೫. ಇತರೆ ಶಾಸನಗಳು

## ಅಧ್ಯಾಯ: ಮೂರು

# ಶಾಸನಗಳ ವೈವಿಧ್ಯತೆ

ನಾಡಿನ ಐತಿಹಾಸಿಕ ಸಾಂಸ್ಕೃತಿಕ ಜೀವನ ಸಂಗತಿಗಳನ್ನು ದಾಖಲೆಯಾಗಿಸುವ ಸಾಮಾಗ್ರಿಗಳಲ್ಲಿ ಶಾಸನಗಳಿಗೆ ಮಹತ್ವದ ಸ್ಥಾನವಿದೆ. ಅಲ್ಲದೆ ಶಾಸನಗಳು ಅಂದಿನ ಲಿಪಿಯ ವಿಕಾಸ, ಭಾಷಾ ಸ್ವರೂಪವನ್ನು ತಿಳಿಯಲು ಸಹ ನೆರವಾಗುತ್ತವೆ. ಇತಿಹಾಸಕ್ಕೆ ಶಾಸನಗಳೇ ಪ್ರಮುಖ ಆಕರವಾಗಿದೆ. 'ಶಾಸನ'ಗಳು ಎಂದರೆ 'ಧರ್ಮಲೇಖ' ಅಥವಾ 'ಧರ್ಮದ ಕಲ್ಲು'[೧] ಎಂದು ಹೇಳಬಹುದು.

'ಶಾಸನ' ಎಂಬ ಪದ 'ಶಾಸ್' ಎಂಬ ಧಾತುವಿನಿಂದ ರೂಪುಗೊಂಡಿದೆ. ಇದರ ಅರ್ಥ ಅಜ್ಞಾಪಿಸು, ಶಿಕ್ಷಿಸು, ನಿಯಂತ್ರಿಸು ಎಂದರ್ಥ. ಶಾಸನಕ್ಕೆ ಸಮಾನಾರ್ಥವಾಗಿ ಬಳಕೆಯಾಗುತ್ತಿರುವ English ಪದ "Inscription" ಇದನ್ನು 'Epigraph' ಎಂದು ಕರೆಯಲಾಗುತ್ತದೆ. ಆದುದರಿಂದ "Epigraphy" ಎಂಬ ಪದ ಬಳಕೆಯಲ್ಲಿದೆ. Inscription ಎಂಬ ಪದವು 'Inscribere' ಎಂಬ Latien ಭಾಷೆಯ ಪದದಿಂದ ಬಂದಿದ್ದು 'ಮೇಲೆ ಬರೆ' ಎಂಬ ಅರ್ಥವನ್ನು ಹೊಂದಿದೆ. ಹಾಗೆಯೇ "Epigraphy" ಎಂಬ ಪದವು "Epi" (ಮೇಲೆ) ಮತ್ತು "Graphic" (ಬರೆ) ಸಂಕೇತ ಎಂಬೆರಡು Greek ಪದಗಳಿಂದ ಹುಟ್ಟಿಕೊಂಡಿದೆ. "Epigraphy" ಪದವನ್ನು ಬರಹಗಳ ಅಧ್ಯಯನಶಾಸ್ತ್ರ ಎಂಬ ಅರ್ಥದಲ್ಲಿ ಬಳಸಲಾಗುತ್ತದೆ. "Inscription" ಎಂದರೆ ಬಹುಕಾಲ ನಿಲ್ಲಬಲ್ಲ. ಶಾಶ್ವತವಾಗಿ ಉಳಿಯಬಲ್ಲ ವಸ್ತುಗಳ ಮೇಲೆ ಕೊರೆಯಲ್ಪಟ್ಟ ಬರಹ. ಕಲ್ಲು, ತಾಮ್ರ, ಬೆಳ್ಳಿ ಮೊದಲಾದವುಗಳ ಮೇಲೆ ಕೊರೆಯಲ್ಪಟ್ಟ ಪ್ರಾಚೀನ ಬರಹಗಳೇ ಶಾಸನಗಳು.[೨]

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನಲ್ಲಿಯೂ ಸಹ ವಿವಿಧ ರೀತಿಯ ಮೂರ್ತಿಶಿಲ್ಪ. ದೇವಾಲಯಗಳು ಜಿನಾಲಯಗಳು, ಶಾಸನಗಳು, ಮಾಸ್ತಿಕಲ್ಲುಗಳು, ವೀರಗಲ್ಲುಗಳು

ದೊರಕಿವೆ. ಇಂತಹ ಶಾಸನಗಳಲ್ಲಿ ವಿವಿಧ ರಾಜಮನೆತನಗಳ ವಂಶಾವಳಿಗಳ ಮಾಹಿತಿ, ಅರಸರ ದಿಗ್ವಿಜಯಗಳು, ಅವರು ಅನುಸರಿಸಿದ ಧರ್ಮ, ನಿರ್ಮಿಸಿದ ದೇವಲಯಗಳು ವಿದ್ಯಾಕೇಂದ್ರಗಳು, ಆರ್ಥಿಕ, ಸಾಹಿತ್ಯಕ, ಆಡಳಿತದ ದೃಷ್ಟಿಯಿಂದ ಮಹತ್ವದ್ದಾಗಿದೆ.

### ೩.೧. ದಾನ ಶಾಸನಗಳು

ಕನ್ನಡ ನಾಡಿನಲ್ಲಿ ನೂರಕ್ಕೆ ೯೫ರಷ್ಟು ದಾನ ಶಾಸನಗಳೇ ಇವೆಯೆನ್ನಬಹುದು.[೩] ಇವು ಹೆಚ್ಚಿನ ಮಟ್ಟಿಗೆ ಧಾರ್ಮಿಕ ಶಾಸನಗಳಾಗಿವೆ. ದೇವಾಲಯಗಳ ನಿರ್ಮಾಣ ಮಾಡುವುದು. ಒಂದು ಸಮಾಜ ಕಾರ್ಯವಾಗಿದೆ. ಅದರ ಜೀರ್ಣೋದ್ಧಾರ, ಸೇವಾ ಕಾರ್ಯಗಳಿಗೆ ನೀಡಿದ ಭೂಮಿ, ತೋಟ, ಗ್ರಾಮ, ಧಾನ್ಯ, ತೆರಿಗೆ, ಎಣ್ಣೆಗಾಣ, ಸುಂಕಗಳ ಮೇಲೆ ಬೆಳಕು ಚೆಲ್ಲುತ್ತಿವೆ. ಜೊತೆಗೆ ಅಗ್ರಹಾರ, ಕೆರೆ, ಬಾವಿ ಇತ್ಯಾದಿ ಸಾಮಾಜಿಕ ಕಾರ್ಯಗಳಿಗೆ ನೀಡಿದ ದತ್ತಿಯ ಕುರಿತು ಮಾಹಿತಿಯನ್ನು ನೀಡುತ್ತಿದೆ. ಈ ದಾನ ಶಾಸನದಲ್ಲಿ ಮೂರು ವಿಧಿಗಳಿವೆ.

೧. ದೇವಾಲಯ ಸೇವಾಕಾರ್ಯಗಳಿಗೆ ನೀಡಿದ ದಾನ ಶಾಸನಗಳು

೨. ವ್ಯಕ್ತಿಗಳಿಗೆ ನೀಡಿದ ದಾನ ಶಾಸನಗಳು

೩. ವಿದ್ಯಾ ಕೇಂದ್ರಗಳಿಗೆ ನೀಡಿದ ದಾನ ಶಾಸನಗಳು

ಲಿಂಗಸೂಗೂರು ತಾಲೂಕಿನಲ್ಲಿ ದೊರಕಿರುವ ದಾನಶಾಸನಗಳು ಹೆಚ್ಚಾಗಿ ಭೂದಾನವನ್ನು ಕೊಟ್ಟ ವಿಷಯವನ್ನು ತಿಳಿಸುತ್ತವೆ. ಈ ಭೂದಾನವು ಹಿಂದಿನಿಂದಲೂ ನಡೆದು ಬಂದಂತಹ ಪದ್ಧತಿ. ಇದರ ಉದ್ದೇಶ ಉಳ್ಳುವರು ದೇವರಿಗೆ. ಅಂದರೆ ದೇವಸ್ಥಾನ ನಿರ್ಮಾಣಕ್ಕೆ ಅಥವಾ ಅದರ ಜೀರ್ಣೋದ್ಧಾರಕ್ಕೆ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಹಿಂದಿನ ಕಾಲದಲ್ಲಿ ಭೂದಾನವು ಒಂದು ಧಾರ್ಮಿಕ ಕಾರ್ಯವಾಗಿತ್ತು. ಇದನ್ನು ಕೊಡುವುದರಿಂದ ಪುಣ್ಯ ಸಿಗುತ್ತದೆ ಎಂಬ ನಂಬಿಕೆ ಜನರಲ್ಲಿತ್ತು. ಹಾಗಾಗಿ ಅರಸರು, ಸಾಮಂತರು, ಮಂಡಳೇಶ್ವರರು, ತಮ್ಮ ತಂದೆ ತಾಯಿಯರ ಹೆಸರಿನಲ್ಲೋ ಅಥವಾ ತಮಗೆ ಇಷ್ಟವಾದ ವ್ಯಕ್ತಿಯ ಹೆಸರಿನಲ್ಲೋ (ಇಂತವರಿಗೆ) ಪುಣ್ಯವಾಗಬೇಕೆಂದು ದೇವಾಲಯಗಳಿಗೆ ಅಲ್ಲಿನ ಪಂಡಿತರ ಕಾಲನ್ನು ತೊಳೆದು ಭೂಮಿಯನ್ನು ದಾನವಾಗಿ ಕೊಡುತ್ತಿದ್ದರು. ಕೆಲವರು ವ್ಯಕ್ತಿಗಳಿಗೆ ಭೂಮಿ ದಾನವನ್ನು ಕೆಲವರಿಗೆ ತೆರಿಗೆಗಳನ್ನು ವಿನಾಯಿತಿ ಬಿಡುತ್ತಿದ್ದರು. ಹೀಗೆ ಇನ್ನೂ ಹಲವಾರು ರೀತಿಯಲ್ಲಿ ದಾನ ಕೊಡುತ್ತಿದ್ದರು. ಒಟ್ಟಾರೆ ದಾನವನ್ನು ಕೊಡುವುದು ಪುಣ್ಯಾರ್ಜನೆಗಾಗಿ ಎಂದು ನಂಬಲಾಗಿತ್ತು. ಭೂದಾನವನ್ನು ಧಾರ್ಮಿಕ ಕಾರಣಕ್ಕಾಗಿ ಮತ್ತು ದೇವರ ಸೇವೆಗೆ ಪ್ರತಿಫಲವಾಗಿ ವ್ಯಕ್ತಿಗಳಿಗೆ ನೀಡಲಾಗುತ್ತಿತ್ತು. ಧಾರ್ಮಿಕ ದಾನದಲ್ಲಿ ಬ್ರಹ್ಮದೇಯ ಮತ್ತು ದೇವದಾನಗಳು

ಪ್ರಮುಖವಾದವು. ಬ್ರಹ್ಮದೇಯವು ಬ್ರಾಹ್ಮಣನಿಗೆ ಅಥವಾ ಅವರ ಗುಂಪಿಗೆ ಅವರು ಅಧ್ಯಯನ, ಅಧ್ಯಾಪನ ಮತ್ತು ಧಾರ್ಮಿಕ ಕಾರ್ಯಗಳನ್ನು ನಿಶ್ಚಿಂತೆಯಿಂದ ನಡೆಸಿಕೊಂಡು ಹೋಗುವಂತೆ ನೀಡಿದ ಭೂದಾನವಾಗಿದೆ. ಶಾಸನಗಳಲ್ಲಿ ಹೆಚ್ಚಾಗಿ ದೇವಾಲಯ ನಿರ್ಮಾಣ ಜೀರ್ಣೋದ್ಧಾರ, ಅಗ್ರಹಾರ ನಿರ್ಮಾಣ ಮತ್ತು ವೃತ್ತಿಗಳನ್ನಾಗಿ ಅಲ್ಲಿನ ಭೂಮಿಯನ್ನು ಹಂಚಿ ಕೊಟ್ಟಿರುವುದನ್ನು ಕಾಣುತ್ತೇವೆ. ಜೊತೆಗೆ ಕೆರೆಗಳನ್ನು ಕಟ್ಟಿಸುವುದು ಅಥವಾ ಅವುಗಳ ದುರಸ್ಥಿ ಮಾಡಿಸುವುದು ಕಂಡುಬರುತ್ತದೆ.

ಶಾಸನಗಳಲ್ಲಿ ಹೆಚ್ಚಾಗಿ ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ಅಗ್ರಹಾರ ನಿರ್ಮಾಣ ಮತ್ತು ವೃತ್ತಿಗಳನ್ನಾಗಿ ಅಲ್ಲಿನ ಭೂಮಿಯನ್ನು ಹಂಚಿಕೊಟ್ಟಿರುವುದನ್ನು ಕಾಣುತ್ತೇವೆ. ಜೊತೆಗೆ ಕೆರೆಗಳನ್ನು ಕಟ್ಟಿಸುವುದು ಅಥವಾ ಅವುಗಳ ದುರಸ್ಥಿ ಮಾಡಿಸುವುದು ಕಂಡುಬರುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟ ಪ್ರದೇಶದಲ್ಲಿ ದೇವಾಲಯದ ಜೀರ್ಣೋದ್ಧಾರ, ಪೂಜಾಕಾರ್ಯ, ಉತ್ಸಾವಾದಿಗಳಿಗೆಂದು, ಅರಸರು, ಸಾಮಂತರು, ಮಂಡಳೇಶ್ವರರು, ಅಧಿಕಾರಿ ವರ್ಗದವರು, ಸಿರಿವಂತ ವರ್ತಕರುಗಳಿಗೆ ಭೂಮಿಗಳನ್ನು ದಾನವಾಗಿ ಕೊಡುತ್ತಿದ್ದರು. ಈ ಅಧ್ಯಯನ ವ್ಯಾಪ್ತಿಯಲ್ಲಿ ಸಿಕ್ಕಿರುವ ದಾನಶಾಸನಗಳನ್ನು ಈ ರೀತಿ ವಿಭಾಗಿಸಲಾಗಿದೆ.

೧. ದೇವಾಲಯ ದಾನ ಶಾಸನಗಳು

೨. ವ್ಯಕ್ತಿಗೆ ನೀಡಿದ ದಾನಶಾಸನಗಳು

೩. ತೆರಿಗೆ ದಾನಶಾಸನಗಳು

೪. ಬಸದಿ ದಾನಶಾಸನಗಳು ಎಂದು ಗುರುತಿಸಲಾಗಿದೆ.

ಕರಡಿಕಲ್ ಬಳಿಯ ಊರ ಹೊರಗಿನ ಕುಣಿ ಸೋಮೇಶ್ವರ ದೇವಾಲಯದಲ್ಲಿರುವ ಶಾಸನ ದಾನಶಾಸನವಾಗಿದೆ. ಶಾಸನದಲ್ಲಿ ಕಾಲವು ಭಿಲ್ಲಮದೇವನ ವರ್ಷ ೪, ವಿರೋಧಿಕೃತ, ಜ್ಯೇಷ್ಠ ಅಮಾವಾಸ್ಯೆ, ಆದಿತ್ಯವಾರ, ಸೂರ್ಯಗ್ರಹಣ, ವ್ಯತೀಪಾತ, ದಕ್ಷಿಣಾಯಣ ಸಂಕ್ರಮಣ ದಿನವೆಂದಿದೆ. ಆದರೆ ಈ ಕಾಲವು ನಿಜಜೇಷ್ಠ ತಿಂಗಳಾದಲ್ಲಿ ಆ ತಿಂಗಳಲ್ಲಿ ಸೂರ್ಯಗ್ರಹಣ ಬಂದಿದೆ. ಆದರೂ ಆ ದಿನ ಸಂಕ್ರಮಣದ ದಿನವಲ್ಲ. ಸಂಕ್ರಮಣವು ಜೂನ್ ೨೭ರ ಗುರುವಾರವಾಗುತ್ತದೆ. ಈ ಶಾಸನದ ಕಾಲವು ಕ್ರಿ.ಶ.೨೩-೦೬ ಸಮವಾಗುತ್ತದೆ.

ಈ ಶಾಸನವು ದೇವಗಿರಿಯ ಯಾದವ ವಂಶದ ಭಲ್ಲಮನನ್ನು ಹೆಸರಿಸಿದ್ದು, ಇವನ ಆಳ್ವಿಕೆಯಲ್ಲಿ ಮಹಾಮಂಡಳೇಶ್ವರನಾದ ಕದಂಬ ಕುಲದ ಬಿಜ್ಜರನು ಎಡದೊರೆ ನಾಡಿನ ಕರಡಿಕಲ್ಲು-೩೦೦ರ ಮುದಗಲ್ಲನ್ನು ರಾಜಧಾನಿಯನ್ನಾಗಿ ಆಳುತ್ತಿದ್ದನು. ಈ ಬಿಜ್ಜರಸನ ಮಹಾಪ್ರಧಾನಿ ಆನೆಯ ಮಾಳಯ್ಯನಾಯಕ.

ಈ ಶಾಸನದಲ್ಲಿ ಮಹಾಮಂಡಳೇಶ್ವರ ಬಿಜ್ಜದೇವರಸನನ್ನು ಹೊಗಳುತ್ತದೆ. ಬನವಾಸಿ ಪುರವರೇಶ್ವರ, ತೊರೆ ಜೊತೆ ದಡಿಭೀಮ, ಮನ್ನೆಯಗೊಡತಿ, ನವಿಲೆಯ ಪಾರ್ಥ ಮೊದಲಾದ ಬಿರುದು ಇವನಿಗಿತ್ತು. ಇವನು ಮಾಳಯ್ಯನಾಯಕನ ಜೊತೆಗೂಡಿ ಲಿಂಗದ(ಈಗಿನ ಕಸಬಾ ಲಿಂಗಸೂಗೂರಿನ) ಪಡುವಗೇರಿಯ ಪ್ರಭುದೇವರ, ಸಂಕಯ್ಯಮಲ್ಲಯ್ಯ, ಮೂಡಕೇರಿಯ ಪ್ರಭು, ಏಚರಸ ಧನಂಜಯ, ಹುಳಿಯಮರಸನ ಸಂಕಯ್ಯ ಮೊದಲಾದವರ ಸಮಸ್ತ ಪ್ರಭುಗಳಾದ ಹೊಲವನ್ನು ಕೊಂಡು ಕರಡಿಕಲ್ಲ ಸೋಮನಾಥದೇವರ ಅಂಗಭೋಗ-ರಂಗಭೋಗ ಮತ್ತು ಗುಡಿಯ ಜೀರ್ಣೋದ್ಧಾರಕ್ಕೆ ದಾನ ಬಿಡುತ್ತಾರೆ.[೪]

ನವಿಲೆ ಬಳಿಯ ಗ್ರಾಮದ ಜಡೆಶಂಕರ ದೇವಾಲಯದ ಮುಂಭಾಗದಲ್ಲಿರುವ ಕಲ್ಲಿನ ಮೇಲಿರುವ ಶಾಸನ ದಾನಶಾಸನವಾಗಿದೆ. ಶಾಸನೋಕ್ತ ಕಾಲವು ಭೂಲೋಕಮಲ್ಲನ ಮೂರನೆಯ ವರ್ಷದ ಕೀಲಕ, ಚೈತ್ರ ಸು.೮, ಸೋಮವಾರ, ಸಂಕ್ರಮಣವಂದಿದ್ದು ಇದು ಕ್ರಿ.ಶ.೭-೩-೧೧೨೮ರ ಬುಧವಾರ(ಸೋಮವಾರಲ್ಲ)ಕ್ಕೆ ಸರಿಹೊಂದುತ್ತದೆ.

ನವಿಲೆ ಗ್ರಾಮದ ಜಡೆಯ ಶಂಕರದೇವರ ಅಂಗಭೋಗ, ರಂಗಭೋಗ, ನೈವೇದ್ಯ ಮತ್ತು ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಚಕ್ರವರ್ತಿ ಭೂಲೋಕಮಲ್ಲದೇವರು ಕರಡಿಕಲ್ಲ ನಾಡಿನ ಬಳಿಯ ಒಂದು ಗ್ರಾಮವನ್ನು ದಾನಬಿಡುತ್ತಾರೆ ಎಂದು ಉಲ್ಲೇಖಿಸಿದೆ.[೫]

ನವಿಲೆ ಬಳಿಯ ಗ್ರಾಮದ ಜಡೆಶಂಕರ ದೇವಾಲಯದ ಇನ್ನೊಂದು ಶಾಸನ ದಾನ ಶಾಸನವಾಗಿದೆ. ಕಲ್ಯಾಣ ಚಾಲುಕ್ಯ ಅರಸ ತ್ರಿಭುವನ ಮಲ್ಲದೇವನ ಅವಧಿಯ ಈ ಶಾಸನದಲ್ಲಿ ಚಾಲುಕ್ಯ ವಿಕ್ರಮ ವರ್ಷ ೪೪, ವಿಕಾರಿ, ಕಾರ್ತಿಕ, ಶು.೧೩, ಬೃಹಸ್ಪತಿವಾರದ ಉಲ್ಲೇಖವಿದ್ದು, ಇದು ಕ್ರಿ.ಶ.೧೮-೧೦-೧೧೧೯ರ ಶನಿವಾರಕ್ಕೆ ಸಮನಾಗುತ್ತದೆ.

ಕದಂಬ ವಂಶದ ಭೂತರಸನು ಕೃಷ್ಣಾನದಿ ತೀರದ ಜಡೆಯ ಶಂಕರದೇವರ ಸೇವೆಗಾಗಿ ಕಣಿಕಲು ನೂರರ ಬಾಡಂ ಮುತ್ತಗೆಯ ಮನ್ನೆಯನ್ನು ದಾನ ಬಿಟ್ಟಂತೆ ತಿಳಿಯುತ್ತದೆ. ಭೂತರಸನನ್ನು ಅನೇಕ ವಿಶೇಷಣಗಳಿಂದ ಹೊಗಳಲಾಗಿದೆ ಎಂದು ಈ ಶಾಸನ ತಿಳಿಸುತ್ತದೆ.[೬]

ನವಿಲೆ ಬಳಿಯ ಗ್ರಾಮದ ಜಡೆ ಶಂಕರ ದೇವಾಲಯದ ಕಂಬವೊಂದರಲ್ಲಿನ ಶಾಸನವು ದಾನಶಾಸನವಾಗಿದೆ. ಶಾಸನದ ಕಾಲವು ಕ್ರಿ.ಶ.ಪು.೧೨ನೆಯ ಶತಮಾನ.

ಭೋಗದೇವಸೆಟ್ಟಿಯೇ ಪುಣ್ಯವಂತನೆಂದು ಭೂಲೋಕವು ಸದಾಕಾಲ ಹೊಗಳುತ್ತಿದೆಯಂತೆ ಅರಕೆಯ ಶಂಭುಶಂಕರ ನಿವಾಸದಲ್ಲಿ ಈಶ್ವರನು ಸೊಗಯಿಸುತ್ತಿದ್ದನಂತೆ. ಈ ದೇವಾಲಯಕ್ಕೆ ದಾನ ದತ್ತಿಗಳನ್ನು ನೀಡಿ, ಛತ್ರವನ್ನು ಕಟ್ಟಿಸಿದಂತೆ ತಿಳಿಯಬಹುದಾಗಿದೆ.[೭]

ಕೀಲಾರಕಟ್ಟೆ ಬಳಿಯ ಗ್ರಾಮದ ಊರ ಹೊರಗೆ ಇರುವ ಹನುಮಂತ ಗುಡಿಯ ಮುಚ್ಚಿಗೆಯಲ್ಲಿ ಸೇರಿಸಿರುವ ಕಲ್ಲಿನ ಶಾಸನ ದಾನ ಶಾಸನವಾಗಿದೆ. ಶಾಸನೋಕ್ತ ಕಾಲವು ಶಕ ೯೬೮, ವ್ಯಯ, ಪುಷ್ಯ ಬ.೮, ಬುಧವಾರ, ಉತ್ತರಾಯಣದ ಮಕರ ಸಂಕ್ರಾಂತಿಯೆಂದಿದ್ದು ಇದು ಕ್ರಿ.ಶ.೨೪-೧೨-೧೦೪೬ಕ್ಕೆ ಸರಿಯಾಗುತ್ತದೆ.

ಚಾಳುಕ್ಯ ತ್ರೈಲೋಕ್ಯಮಲ್ಲನ ಕಾಲದಲ್ಲಿ ಅವನ ಮಗ ಕುಮಾರ ಜಯಸಿಂಹದೇವನು ಕರಡಿಕಲ್ಲು-೩೦೦ರ ಅಗ್ರಹಾರ ಭಿನ್ನಗೊಳವನ್ನು ಆಳುತ್ತಿದ್ದನು. ಆಗ ಪನಾಳೆಯದ ಕೋಟೆಯ ನೆಲೆವೀಡಿನಲ್ಲಿದ್ದಾಗ(ಬನ್ನಿಗೊಳದ) ಭೋಗೇಶ್ವರ ದೇವರಿಗೆ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಡೊಂಕ ಹೊಲದಲ್ಲಿ ೧೦ ಮತ್ತರ ಭೂಮಿಯನ್ನು ದಾನ ಬಿಡುತ್ತಾನೆ ಎಂದು ಉಲ್ಲೇಖಿಸಿದೆ. ದಾನವನ್ನು ದೇವಸಿಂಘ ಬಳಾರನಿಗೆ ಧಾರೆಯೆರೆದು ಕೊಡುತ್ತಾನೆ.[೮]

ಸಜ್ಜಲಗುಡ್ಡ ಬಳಿಯ ಗ್ರಾಮದ ಹನುಮಂತನ ಗುಡಿ ಎದುರಿನ ಶಾಸನವು ದಾನ ಶಾಸನವಾಗಿದೆ. ಈ ಶಾಸನದ ಕಾಲ ಕ್ರಿ.ಶ.೧೭ಕ್ಕೆ ಸೇರುತ್ತದೆ. ಮೈಲಾರದೇವರ ಹೆಸರಿನಲ್ಲಿ ಹೊಲವನ್ನು ದಾನಬಿಟ್ಟ ಉಲ್ಲೇಖವಿದೆ. ಈ ಶಾಸನದಲ್ಲಿ ದಾನವನ್ನು ಯಾರು ಯಾರಿಗೆ ಕೊಟ್ಟರು ಎಂದು ಉಲ್ಲೇಖವಿಲ್ಲ.[೯]

ಸುಲ್ತಾನಪುರ ಬಳಿಯ ಗ್ರಾಮದ ಹನುಮಂತದೇವರ ಗುಡಿ ಎದುರಿನ ಶಾಸನ ದಾನ ಶಾಸನವಾಗಿದೆ. ಶಾಸನದ ಕಾಲವು ಶಾಲಿವಾಹನ ಶಕವರ್ಷ ೧೪೫೯, ಹೇಮಳಂಬಿ, ಆಷಾಢ, ಶು.೧೦, ಸೋಮವಾರವಂದಿದ್ದು, ಇದು ಕ್ರಿ.ಶ.೧೮-೬-೧೫೩೭ಕ್ಕೆ ಸಮನಾಗುತ್ತದೆ.

ವಿಜಯನಗರದ ಅರಸ ಅಚ್ಯುತದೇವರಾಯನ ಆಳ್ವಿಕೆಯ ಕಾಲದಲ್ಲಿ ಅವನ ಸಾಮಂತ ಅರಸನಾದ ಗುಜ್ಜಲ ಇಮ್ಮಡಿ ಮೇದಿನಿರಾಯ ಒಡೆಯನು ಮಸ್ಕಿಯ ಮಲ್ಲಯ್ಯ, ಚಿಕ್ಕವಲ್ಲಯ್ಯ ಮತ್ತು ಅನಂತಯ್ಯನಿಗೆ ಮಸ್ಕಿ ಸೀಮೆಯ ಉದ್ದಂಡ ಮೇದಿನಿಪುರವನ್ನು ಅಮರನಾಥ ದೇವರಿಗೆ ದಾನ ಬಿಡಲಾಗಿದೆ. ಉದ್ದಂಡ ಮೋದಿನಿಪುರದ ಪೂರ್ವಕ್ಕೆ ಸೀಮೆಹಳ್ಳ, ಉತ್ತರಕ್ಕೆ ಆವಿನಮಡವು ಇತ್ತೆಂದು ತಿಳಿದುಬರುತ್ತದೆ.[೧೦]

ಈ ಶಾಸನವು ಈಗ ಹೈದ್ರಾಬಾದಿನ ವಸ್ತುಸಂಗ್ರಹಾಲಯದಲ್ಲಿದೆ. ಈ ಶಾಸನದ ಕಾಲವು ಚಾಲುಕ್ಯ ವಿಕ್ರಮ ಸಂವತ್ಸರದ ಮೊದಲನೆಯ ವರ್ಷ, ಪಿಂಗಳ, ಶ್ರಾವಣ, ಪುಣಮಿ, ಆದಿತ್ಯವಾರ, ಸೋಮಗ್ರಹಣವಂದಿದ್ದು. ಇದು ಕ್ರಿ.ಶ.೬-೮-೧೦೭೭ರ ಭಾನುವಾರಕ್ಕೆ ಸಮವಾಗುತ್ತದೆ. ಆದಿನ ಚಂದ್ರಗ್ರಹಣದ ದಿನವೂ ಆಗಿತ್ತು.

ಚಾಳುಕ್ಯ ತ್ರಿಭುವನಮಲ್ಲನು ಕಲ್ಯಾಣಪುರದಿಂದ ರಾಜ್ಯಭಾರ ಮಾಡುತ್ತಿದ್ದನು. ತತ್ಪುರುಷರಾಶಿಯ ಶಿಷ್ಯನಾದ ನೇತ್ರಶಿವ ಪಂಡಿತನು ಕರಡಿಕಲ್ಲು-೩೦೦ರ ತೆಂಗೂಳದ ಕೀರ್ತಿಸೋಮೇಶ್ವರ ದೇವಾಲಯದ ಸ್ಥಾನಿಕನಾಗಿದ್ದ. ತ್ರಿಭುವನಮಲ್ಲನ ಸಾಮಂತ ಪೃಥ್ವಿ ವಲ್ಲಭ, ಪಲ್ಲವ ಕುಳತಿಳಕ, ಅಮೋಘವಾಕ್ಯ, ಕಾಂಚೀಪುರವರೇಶ್ವರ ಮುಂತಾದ ವಿಶೇಷಣ ಗಳನ್ನುಳ್ಳ ತ್ರಿಭುವನಮಲ್ಲ ವೀರನೊಳಂಬ ಪಲ್ಲವ ಪೆರ್ಮಾನಡಿಯು ಕರಡಿಕಲ್ಲು-೩೦೦ನ್ನು ಆಳುತ್ತಿದ್ದ.

ಇವನ ಸಾಮಂತನಾಗಿ ಪ್ರತಾಪಲಂಕೇಶ್ವರ, ಬನವಾಸಿ, ಪುರವರೇಶ್ವರ, ಕದಂಬರಾಭರಣ, ವೈರಿ ಸಂಹರಣ ತೊರದಡಿಯಭೀಮ, ಕಲಿಯುಗರಾಮ, ನವಿಲೆಯ ಪಾರ್ಥ, ಮನ್ನೆಯಗೊಡತಿ ಮುಂತಾದ ವಿಶೇಷಣಗಳನ್ನುಳ್ಳ ಕದಂಬ ವಂಶದ ನಾಗವರ್ಮನು ತೆಂಗೂಳದ ಮನ್ನೆಯ ಸಾಮ್ಯವನ್ನು ಕೀರ್ತಿಸೋಮೇಶ್ವರದೇವರ ಲಿಂಗಭೋಗ ರಂಗಭೋಗಕ್ಕೆ ಧಾರಾಪೂರ್ವಕವಾಗಿ ದಾನ ನೀಡಿದ ಉಲ್ಲೇಖವಿದೆ.[೧೧]

ನವಿಲೆ ಬಳಿಯ ಗ್ರಾಮದ ಜಡೆಶಂಕರ ದೇವಾಲಯದ ಮತ್ತೊಂದು ಶಾಸನ ದಾನ ಶಾಸನವಾಗಿದೆ. ಈ ಶಾಸನದಲ್ಲಿ ಕಾಲವು ಶಕವರ್ಷ ೯೮೯. ಪರಾಭವ, ಆಷಾಡ, ಅಮಾವಾಸ್ಯೆ ಭಾನುವಾರ, ದಕ್ಷಿಣಾಯನ ಸಂಕ್ರಾಂತಿಯಂದ್ದು ಇದು ಕ್ರಿ.ಶ.೨೫-೬-೧೦೬೬ರ ಭಾನುವಾರಕ್ಕೆ ಸರಿಹೊಂದುತ್ತದೆ. ಆ ತಿಂಗಳು ಅಧಿಕ ಆಷಾಢವಾಗಿತ್ತು.

ಕಲ್ಯಾಣ ಚಾಳುಕ್ಯ ಅರಸ ತ್ರೈಲೋಕ್ಯಮಲ್ಲದೇವರ ಸಾಮಂತ ಕದಂಬವಂಶದ ನಾಗವರ್ಮರಸನು ಕರಡಿಕಲ್ ೩೦೦ ಬಳಿಯ ಕೃಷ್ಣಾನದಿ ತೀರದ ಪ್ರಸಿದ್ಧ ತೀರ್ಥವಾದ ಜಡೆಯ ಶಂಕರ ದೇವರಿಗೆ ನವಿಲೆಯ ಶಂಕರದೇವ ತಪೋಧನರ ಕಾಲನ್ನು ತೊಳೆದು ನವಿಲೆಯ ಮನ್ನೆಯವನ್ನು ಸರ್ವನಮಸ್ಯವಾಗಿ ದಾನ ಬಿಟ್ಟ ಉಲ್ಲೇಖವಿದೆ. ಈ ದಾನವನ್ನು ದಕ್ಷಿಣಾಯನ ಸಂಕ್ರಾಂತಿ ದಿವಸದಂದು ಬಿಡಲಾಗಿದೆ.[೧೨]

ಈ ಶಾಸನವು ಈಗ ಹೈದ್ರಾಬಾದಿನ ವಸ್ತು ಸಂಗ್ರಾಹಾಲಯದಲ್ಲಿದೆ. ಈ ಶಾಸನದಲ್ಲಿನ ಕಾಲವು ಶಕವರ್ಷ ೯೯೩, ವಿರೋಧಿಕೃತ್, ವೈಶಾಖ, ಪುಣ್ಣಮೆ, ಆದಿತ್ಯವಾರವೆಂದಿದ್ದು, ಇದು ಕ್ರಿ.ಶ.೧೭-೪-೧೦೭೧ರ ಆದಿತ್ಯವಾರಕ್ಕೆ ಸಮನಾಗುತ್ತದೆ.

ಭುವನೈಕ ಮಲ್ಲದೇವನು ರಾಜ್ಯಭಾರ ಮಾಡುತ್ತಿದ್ದು ಕಿರುದೊರೆಯ(ತುಂಗಭದ್ರೆ) ದಡದಲ್ಲಿನ ಕಕ್ಕರಗೊಳದಲ್ಲಿ ಬೀಡು ಬಿಟ್ಟಿದ್ದಾಗ ಮೂವಡಿಯರ ದಂಡನಾಯಕ ಮಲ್ಲಯ್ಯ ಭಟಾರನ ಬಿನ್ನಪದಂತೆ ಹೇರಿತಾಳ ಸಂಧಿವಿಗ್ರಹಿ ದಂಡನಾಯಕ ರವಿಯಣಭಟ್ಟನು ರಾಜಧಾನಿ ಪಿರಿಯ ಮೊಸಂಗಿಯ ಬಳಿಯ ನಾಗರಕೆರೆಯ ಬಳಿ ಭೂದಾನ ನೀಡಿದಂತೆ ತಿಳಿಯುತ್ತದೆ. ಭೂದಾನ ನೀಡಿದ ವಿವರ ನಷ್ಟವಾಗಿದೆ. ತಳವಾರ ಬಳಿಯ ಬೋವ ಮತ್ತು ಕಾಟಬೋವನ ಉಲ್ಲೇಖವಿದೆ.[೧೩]

### ೩.೧.೧. ಪಂಡಿತರ/ಗಣ್ಯ ವ್ಯಕ್ತಿಗಳಿಗೆ ನೀಡಿದ ದಾನಶಾಸನ

ಸಾಮಾನ್ಯವಾಗಿ ಅಂದಿನ ಕಾಲದಲ್ಲಿ ಪಂಡಿತರಿಗೆ ಅಥವಾ ಗಣ್ಯವ್ಯಕ್ತಿಗಳಿಗೆ ಗೌರವ ಪೂರ್ವಕವಾಗಿ ದಾನದತ್ತಿಗಳನ್ನು ನೀಡಿರುವ ಉದಾಹರಣೆಗಳು ಶಾಸನಗಳಲ್ಲಿ ದೊರೆಯುತ್ತವೆ. ಉದಾಹರಣೆಗೆ ಜಿನವಲ್ಲಭನ ಗಂಗಾಧರಂ ಶಾಸನ. ಇದರ ಕಾಲ ಕ್ರಿ.ಶ.ಸುಮಾರು ೯೫೦. "ಓಂ ನಮಃ ಸಿದ್ಧೇಭ್ಯಃ" ಎಂದು ಪ್ರಾರಂಭವಾಗುವ ಈ ಶಾಸನವು ೧೧ ಸಾಲುಗಳಿಂದ ಕೂಡಿದೆ. ಜಿನವಲ್ಲಭ ಜೈನಧರ್ಮದ ಅಭ್ಯುದಯಕ್ಕಾಗಿ ಮಾಡಿದ ಕಾರ್ಯಗಳನ್ನು ಆತನ ವಂಶಾವಳಿಯನ್ನು ವಿವರಿಸುತ್ತದೆ. ಪಂಪನು ರಚಿಸಿದ 'ವಿಕ್ರಮಾರ್ಜುನ ವಿಜಯ' ಗ್ರಂಥವನ್ನು ಮೆಚ್ಚಿ ಆತನ ಪೋಷಕನಾಗಿದ್ದ ಚಾಲುಕ್ಯರ ಎರಡನೆಯ ಅರಿಕೇಸರಿಯು ಧರ್ಮಪುರ ವೆಂಬ ಅಗ್ರಹಾರವನ್ನು ಕವಿಗೆ ದತ್ತಿಯಾಗಿ ಬಿಡುತ್ತಾನೆ. ಈ ರೀತಿಯಾಗಿ ದಾನಬಿಟ್ಟ ವಿಷಯ ವನ್ನು ಜನಸಾಮಾನ್ಯರಿಗೆ ಗೊತ್ತಾಗಲಿ ಎನ್ನುವ ಕಾರಣಕ್ಕೆ ಶಾಸನ ರೂಪದಲ್ಲಿ ಬರಿಸಿದ್ದನ್ನು ಕಾಣುತ್ತೇವೆ.



ಹೀಗೆ ವ್ಯಕ್ತಿಯು ಮಾಡಿದಂತ ಸೇವೆಗಳು ಧಾರ್ಮಿಕ ಕಾರ್ಯಗಳನ್ನು ಮತ್ತು ಯುದ್ಧದಲ್ಲಿ ಮಾನ, ಪ್ರಾಣಗಳನ್ನು ರಕ್ಷಿಸಿದಂತಹ ವ್ಯಕ್ತಿಗಳಿಗೆ ರಾಜರು, ಅಧಿಕಾರಿಗಳು ಅಥವಾ ಗ್ರಾಮಸ್ಥರು ದಾನವನ್ನು ನೀಡುತ್ತಿದ್ದರು.

ನವಿಲೆ ಬಳಿಯ ಗ್ರಾಮದ ಅದೇ ದೇವಾಲಯದಲ್ಲಿನ ಇನ್ನೊಂದು ಶಾಸನದ ಮುಂದುವರಿದ ಭಾಗದಲ್ಲಿ ಭೂಲೋಕಮಲ್ಲ ವರ್ಷ ೧ ಕಾಕ್ಷಸ, ಚೈತ್ರ ಸು.೫, ಬೃಹಸ್ಪತಿವಾರದ ಉಲ್ಲೇಖವಿದ್ದು, ಇದು ಕ್ರಿ.ಶ.೨೧-೩-೧೧೩೫ರ ಗುರುವಾರಕ್ಕೆ ಸಮನಾಗುತ್ತದೆ. ಮೊದಲ ದಾನವನ್ನು ಜಕ್ಕಯ ಶಣಂಗಿ ಮತ್ತು ಬಲದೇವ ಶಣಂಗಿಯರಿಗೆ ನೀಡಿದಂತೆ ತಿಳಿದುಬರುತ್ತದೆ. ಎರಡನೆಯ ದಾನದಲ್ಲಿ ಸತ್ರ ನಿರ್ಮಾಣಕ್ಕೆಂದು ಮೂವತ್ತಾರು ಗೇಣು ಗಳೆಯಲ್ಲಿ ಭೂಮಿಯನ್ನು, ಅಳೆದು ೧೩ ಮತ್ತರವನ್ನೂ ನಾಚ್ಯಣಭಟ್ಟೋಪಾಧ್ಯಾಯನಿಗೆ ಹತ್ತು ಮತ್ತು ದೇವಣನಾಯಕನಿಗೆ, ರೇವಣಭಟ ಭೂಮಿಯನ್ನು ದಾನ ಬಿಟ್ಟ ವಿವರಿವಿದೆ.[೧೪]

ಈ ಶಾಸನದಲ್ಲಿ ಕಾಲವು ಶಾಲಿವಾಹನ ಶಕವರುಷ ೧೫೦(೭), ಪಾರ್ಥಿವ ಸಂವತ್ಸರದ ಆಷಾಢ ಮಾಸದ ಸು.೧೦ ಎಂದಿದ್ದು, ಇದು ಕ್ರಿ.ಶ.೨೬-೬-೧೫೮೫ರ ಶನಿವಾರಕ್ಕೆ ಸರಿಹೊಂದುತ್ತದೆ. ಬಾದುಶಹ ಸಾಹೇಬರಿಗೆ ಪುಣ್ಯವಾಗಬೇಕೆಂದು ಮುದಗಲ್ಲು ಸೀಮೆಯ ದೇವದುರ್ಗದ ಬಳಿಯ ಕಂಬಿತೆರದೂಡಿ ಗ್ರಾಮವನ್ನು ಅಜರಜಿಖಾನೆ ಬೋದಾಯ ಚಂನಖಾನ ಅಜಂ ಮನಾಸುಕೆಖಾನನು ಬಾದಶಹ ಸಾಹೇಬನಿಗೆ ಪುಣ್ಯವಾಗಬೇಕೆಂದು ದೊಂಬರಬಂಡಿ ಹನುಮಂತ ಮತ್ತು ಮಲ್ಲೋಜರಿಗೆ ಮಜಗೂರು ಗ್ರಾಮವನ್ನು ಇನಮು ಕೊಟ್ಟ ವಿಷಯವನ್ನು ಒಳಗೊಂಡಿದೆ.[೧೬]

ರಾಷ್ಟ್ರಕೂಟರ ಕಾಲದ ಈ ಶಾಸನದಲ್ಲಿ ಕಾಲವು ಕಾಲಾತೀತ ಸಂವತ್ಸರ ಸತಂಗಳೆಂಟು ನೂರು ನಾಲ್ವತ್ತೊಂಬತ್ತನೆಯ ಸರ್ವಜೀತರ ಸಂವತ್ಸರ ಎಂದು ಹೇಳಿದೆ. ಇದು ಕ್ರಿ.ಶ.೯೨೮ಕ್ಕೆ ಸರಿ ಹೊಂದುತ್ತದೆ.

ಶಾಸನದ ಮುಖಭಾಗ ಅಲ್ಲಲ್ಲಿ ಸವೆದುಹೋಗಿದೆ. ರಾಷ್ಟ್ರಕೂಟ ದೊರೆ ಹಿರಣ್ಯವರ್ಷನ ಆಳ್ವಿಕೆಯ ಕಾಲದ ಈ ಶಾಸನದಲ್ಲಿ ಕರಡಿಕಲ್ಲನಾಡಿನ ಮಾಗಊರಿನ ಕನಕಭಟ್ಟ ಎಂಬುವವನಿಗೆ ೪೦ ಮತ್ತರು ಭೂಮಿಯನ್ನು ದಾನಕೊಟ್ಟ ಉಲ್ಲೇಖವಿದೆ.[೧೭]

ಈ ಶಾಸನದಲ್ಲಿ ಕಾಲವು ಶಕವರ್ಷ ೯೩೨, ಸಾಧಾರಣ ಸಂವತ್ಸರ, ಮಾರ್ಗಶಿರ, ಶುದ್ಧ ಬದಿಗೆ, ಬೃಹಸ್ಪತಿವಾರವೆಂದಿದ್ದು, ಇದು ಕ್ರಿ.ಶ.೧೦-೧೧-೧೦೧೦ಕ್ಕೆ(ಶುಕ್ರವಾರ) ಸರಿ ಹೊಂದುತ್ತದೆ. ಚಾಳುಕ್ಯ ಅರಸ ಇಮ್ಮಡಿ ಜಯಸಿಂಹನ ಕಾಲದಲ್ಲಿ ರಾಜಧಾನಿ ಹಿರಿಯ ಮೊಸಂಗಿಯಲ್ಲಿದ್ದ ಅಹವಮಲ್ಲನ ಚಟ್ಟನಾದ ಕರಿಯಾಯ್ಚಯ್ಯ ಎಂಬುವನಿಗೆ ನೂರು ಮತ್ತರ ಭೂಮಿಯನ್ನು ಜಯಸಿಂಹನು ದಾನ ನೀಡುತ್ತಾನೆ. ಜಯಸಿಂಹನಿಗೆ ಕುಮಾರ ಗಜಕೇಸರಿ, ಕೀರ್ತಿವಿದ್ಯಾಧರ, ಸತ್ಯರತ್ನಾಕರ ಮುಂತಾದ ವಿಶೇಷಣಗಳಿದ್ದವು. ಪಿರಿಯ ಮೊಸಂಗೆಯ ಮಾಣಿ ಕೇಶವ ಎಂಬುವನು ತನ್ನ ದಶವಂದರದಲ್ಲಿ ೧೦ ಮತ್ತರು ಹೊಲವನ್ನು ದಾನ ನೀಡಿದ ಎಂಬುದರ ಬಗ್ಗೆ ಈ ಶಾಸನದಲ್ಲಿ ಉಲ್ಲೇಖವಿದೆ.

ಶಾಸನೋಕ್ತ ಕಾಲವು ಶಾಲಿವಾಹನ ಶಕವರ್ಷ ೧೩೫೮, ನಳ ಸಂವತ್ಸರ, ಮಾರ್ಗಸಿರ ಸು.೧೫, ಶುಕ್ರವಾರವೆಂದಿದ್ದು, ಇದು ಕ್ರಿ.ಶ.೨೨-೧೧-೧೪೩೬ಕ್ಕೆ ಸರಿಹೊಂದುತ್ತದೆ. ವೀರ ಪ್ರತಾಪದೇವರಾಯನು ರಾಜ್ಯಭಾರ ಮಾಡುತ್ತಿದ್ದಾಗ ಮುದುಗಲ್ಲನಾಡನ್ನು ವರದಣ್ಣನಾಯಕನಿಗೆ ನೀಡಿದ. ಮುದುಗಲ್ಲ ಸಿಂಪಿಗ ಭೂತನಾಥನ ಮಗ ರಾಹುತ್ತ ವೀರಣನು ಸುರಿತಾಣನಬೆಟ್ಟದ ಕೋಟೆಯಲ್ಲಿದ್ದ ಚಿನ್ನದ ಕಲಶವನ್ನು ತೆಗೆದುಕೊಂಡು ಬರುತ್ತಾನೆ. ಈ ವಿಷಯ ರಾಯನಿಗೆ ತಿಳಿಸಿದಾಗ ಆತ ಸಂತೋಷಿಸಿದ. ವರದಣ್ಣನಾಯಕ, ಮುದುಗಲ್ಲ ಗ್ರಾಮದ ಗವುಡು ಪ್ರಜೆಗಳು

ಸಮಸ್ತ ಜನರು ಒಂದಾಗಿ ಸೇರಿ ರಾಹುತ್ತ ವೀರಣ್ಣನಿಗೆ ಮೇಟಿಗೊಳಗವನ್ನು ದಾನವಾಗಿ ಬಿಡುತ್ತಾರೆ.[೧೮]

ಈ ಶಾಸನದ ಕಾಲವು ಶಕ ೯೪೩, ಕ್ರೋಧನ ಅಶ್ವಯುಜ, ಸುದ್ಧ, ಸಪ್ತಮಿ, ಶುಕ್ರವಾರವೆಂದಿದ್ದು, ಇದು ಕ್ರಿ.ಶ.೧-೧೦-೧೦೨೫ಕ್ಕೆ ಸರಿಹೊಂದುತ್ತದೆ.

ತ್ರೈಳೋಕ್ಯಮಲ್ಲ ಎಂಬ ಹೆಸರನ್ನು ಹೊಂದಿದ್ದು ವಿಜಯಾದಿತ್ಯದೇವ ಕುನ್ದರಣೆ-೭೦ರ ಕಟ್ಟಗೆಯ ದಕ್ಷಿಣ ದಿಕ್ಕಿನ ಮೊರಗನೂರ ನಲೆವೀಡಿನಿಂದ ರಾಜ್ಯಭಾರ ಮಾಡುತ್ತಿದ್ದಾಗ ಬನ್ನಿಗೊಳದ ಊರೊಡೆಯನು, ಮಾರಮಯ್ಯ, ಸೋವಯ್ಯ, ಚಾವಯ್ಯ ಮತ್ತು ನಾಮಯ್ಯ ಎಂಬುವರೆಗೆ ಭೂಮಿಯ ರೀತಿಗೆ ತಕ್ಕಂತೆ ಮತ್ತರಿಗೆ ಇಷ್ಟು ನೀಡಬೇಕೆಂದು ನಿರ್ದೇಶಿಸಿದಂತೆ ತಿಳಿಯುತ್ತದೆ.[೧೯]

ಶಾಸನೋಕ್ತ ಕಾಲವು ವಿಕ್ರಮವರ್ಷ ೪೯ ಜಯ... ಬ.೧೪, ಮಂಗಳವಾರವೆಂದಿದ್ದು, ಇದು ಕ್ರಿ.ಶ.ಸು.೧೧೧೪ಕ್ಕೆ ಸರಿಹೊಂದುತ್ತದೆ.

ತ್ರಿಭುವನಮಲ್ಲದೇವನು ಕಲ್ಯಾಣದಿಂದ ರಾಜ್ಯಭಾರ ಮಾಡುತ್ತಿದ್ದಾಗ ಆನೆವರಿಯೂರ ಮೇಲಾಳಿಕೆಯ ಸಾಮ್ಯವನ್ನು ಬಿಟ್ಟಂತೆ ಹೇಳಿದೆ. ನಿಲ್ಲಿಜಿಗೆಯ ಚಂದ್ರಶೇಖರ ಶಕ್ತಿಯ ಶಿಷ್ಯನಾದ ಅಘೋರಶಕ್ತಿ ಪಂಡಿತನು ಶ್ರೀ ಹುಳಿಯಮೇಶ್ವರ ದೇವರಮಠಕ್ಕೆ ಹೊಲ ಮತ್ತು ಇತರರ ದಾನವನ್ನು ಬಿಟ್ಟ ವಿಷಯವನ್ನು ಈ ಶಾಸನದಲ್ಲಿ ಉಲ್ಲೇಖವಿದೆ.[೨೦]

ಮಸ್ಕಿಯ ಪ್ರವಾಸ ಮಂದಿರದಲ್ಲಿರುವ ೫ನೇ ಶಾಸನವಿದೆ. ಶಾಸನದಲ್ಲಿ ಕಾಲವು ಶಕವರ್ಷ ೯, ಕಾಳಾಯುಕ್ತ, ಭಾದ್ರಪದ, ಸು.೫, ಸೋಮವಾರವೆಂದಿದ್ದು, ಇದು ಕ್ರಿ.ಶ.೧೮-೮-೧೦೧೮ರ ಸೋಮವಾರಕ್ಕೆ ಸರಿಹೊಂದುತ್ತದೆ. ಪಿರಿಯ ಮೊಸಂಗಿಯ ಪರದಾಸಿ ಉಪಸೆಟ್ಟಿಯ ಮಗ ಪೋತಿಸೆಟ್ಟಿಯು ಮೂಲಸ್ಥಾನ ದೇವಾಲಯದ ತಪೋಧನರಿಗೆ, ಬ್ರಾಹ್ಮಣರ ಛತ್ರಕ್ಕೆಂದು ೩೫ ಮತ್ತರು ಭೂಮಿಯನ್ನು ಕೊಂಡು ಪಂಪಯ್ಯ, ಮೊಸಂಗಿಯ ಊರಿನ ಒಡೆಯ ಬೆಣ್ಣಯ್ಯ ಮತ್ತು ಪಂಪಯ್ಯ ತಮ್ಮ ಕಿರಿಯ ಚೆಟ್ಟಯ್ಯ ಈ ಮೂವರಿಗೆ ದಾನ ಬಿಟ್ಟ ವಿವರ ಈ ಶಾಸನದಲ್ಲಿದೆ.[೨೧]

ಮಸ್ಕಿಯ ಪ್ರವಾಸ ಮಂದಿರದಲ್ಲಿ ೬ನೆಯ ಶಾಸನ ಇದ್ದು, ಈ ಶಾಸನದಲ್ಲಿ ಆರಂಭದಲ್ಲೇ ಶಾಪಾಶಯ ಭಾಗವಿದೆ. ಸಾನ್ತರಸ ಎಂಬುವವನು ಕಟ್ಟಿಸಿದ ಬಾವಿಯನ್ನು ವರ್ಣಿಸುವ ಈ ಶಾಸನ ಒಂದು ರೀತಿಯಲ್ಲಿ ಶಾನ್ತರಸನ ಪ್ರಶಸ್ತಿ ಶಾಸನದಂತಿದೆ. ಸುರನದಿಗೆ ಸಮಾನವಾದ, ಭೂಮಿಯಲ್ಲೇ ಹೆಸರು ಪಡೆದ ಕೊಳದಂತೆ, ಶಾನ್ತರಸ ಕಟ್ಟಿಸಿದ ಬಾವಿ

ಕೀರ್ತಿಯನ್ನು ಪಡೆದಿತ್ತು. ಭೂಲೋಕದಲ್ಲಿ ಈ ಧರ್ಮವನ್ನು ರಕ್ಷಿಸುವವರು ಯಾರು ಎಂದು ನೋಡುವವರು ಆಶ್ಚರ್ಯಪಡುವಂತೆ ಈ ಬಾವಿಯನ್ನು ಅಪರೂಪ ವಿನ್ಯಾಸದಿಂದ ಕಟ್ಟಿಸಿದನು. ಈ ಶಾನ್ತವರ್ಮನು ಅನ್ನದಾನದಲ್ಲಿ ಶ್ರೇಷ್ಠನಾದನೆಂದು, ಧರ್ಮದ ಏತವನ್ನು ಎತ್ತಿಸಿದಂತೆಯೂ ಶಾಸನ ತಿಳಿಸುತ್ತದೆ.[೨೨]

ಮರಳಿ ಗ್ರಾಮದ ಹನುಮಂತ ದೇವಾಲಯದಲ್ಲಿರುವ ಶಾಸನ. ಇದರ ಶಾಸನೋಕ್ತ ಕಾಲವು ಸರ್ವಧಾರಿ, ವೈಶಾಖ, ಶು.೩ ಎಂದಿದ್ದು, ಇದು ಕ್ರಿ.ಶ.೧೭ನೇಯ ಶತಮಾನಕ್ಕೆ ಸೇರಿದುದಾಗಿದೆ.

ಶಾಸನದ ಆರಂಭದಲ್ಲಿ ಕಲ್ಲೇಶ್ವರ ದೇವರನ್ನು ಕೀರ್ತಿಸಲಾಗಿದೆ. ಹಂಡೆ ಪಾಳೆಯಗಾರರ ಅರಸ ಹನುಮಿನಾಯಕ ಅಂಕುಷರಾಯನು ವಿನಯದಿಂದ ತನ್ನ ಗುರು ಕರಡಿಲಿಂಗ ಬಸಪಯ ರಾಜದೇವರಿಗೆ ದಾನಬಿಟ್ಟ ವಿವರವಿದೆ. ತಾವರಗೆರೆ ಸೀಮೆಗೆ ಸಲ್ಲುವ ಮರಳಿ ಎಂಬ ಗ್ರಾಮವನ್ನು ಗುರುಗಳಿಗೆ ಅರ್ಪಿಸಲಾಗಿದೆ. ನಾಲ್ಕು ಸೀಮೆಯ(ಗಡಿಗಳ) ವಿವರವನ್ನು ಹೇಳುವ ಭಾಗದಿಂದ ಶಾಸನ ಸಂಪೂರ್ಣ ಹಾಳಾಗಿದೆ.[೨೩]

ಲಿಂಗಸೂಗೂರು ತಾಲೂಕಿನ ಮಸ್ಕಿಯ ಪ್ರವಾಸ ಮಂದಿರದಲ್ಲಿರುವ ೧೦ನೇ ಶಾಸನ ಇದ್ದು ಇದು ಕ್ರಿ.ಶ.೫-೧೦-೧೫೩೭ಕ್ಕೆ ಸರಿ ಹೊಂದುತ್ತದೆ. ವಿಜಯನಗರದ ಸಾಮ್ರಾಜ್ಯವನ್ನು ಅಚ್ಯುತರಾಯನು ಆಳುತ್ತಿದ್ದಾಗ ಗುಜ್ಜಲ, ಇಮ್ಮಡಿ ಮೇದಿನಿರಾಯನು ತಮ್ಮ ಆಳ್ವಿಕೆಯ ಮೊಸಗೆಗೆ ಸೇರಿದ ಹಲವು ಗ್ರಾಮಗಳನ್ನು ಹಂಪಿಯಲ್ಲಿದ್ದ ರುದ್ರಪಾದ ಮಠಪತಿ ಒಡೆಯರಿಗೆ ದಾನವಾಗಿ ಕೊಟ್ಟ ವಿವರಿವಿದೆ. ಮೊಸಗೆಯ ಸೀಮೆಗೆ ಸೇರಿದ ಅಂಬಟಿಗುಡ್ಡದಲ್ಲಿ ೪೨, ಗೋನಾನಹಾಳದಲ್ಲಿ ೮೧, ಸಿದುಬಾವುರದಲ್ಲಿ ೮೧, ಪರುವಾಪುರದಲ್ಲಿ ೮೧, ಇಷ್ಟನ್ನೂ ದಾನವಾಗಿ ಕೊಡುತ್ತಾನೆ. ಅದು ಮತ್ತರದಲ್ಲಿ ಕೊಟ್ಟನೋ, ಇಕ್ಕುಳದಲ್ಲಿ ಕೊಟ್ಟನೋ ತಿಳಿದುಬರುವುದಿಲ್ಲ.[೨೪]

### ೩.೧.೨ ತೆರಿಗೆ ದಾನ ಶಾಸನಗಳು

ಹಿಂದಿನ ಕಾಲದಲ್ಲಿ ರಾಜನಾದವನು ಆದಾಯವನ್ನು ಎರಡು ಮೂಲಗಳಿಂದ ಸಂಗ್ರಹಿಸುತ್ತಿದ್ದನು. ಒಂದು ತೆರಿಗೆಗಳನ್ನು ಹಾಕುವುದು, ಇನ್ನೊಂದು ಬೇರೆ ಮೂಲಗಳಿಂದ. ಬೇರೆ ಮೂಲಗಳಿಂದ ಬರುವ ಆದಾಯವು ಹಲವು ಪ್ರಕಾರಗಳಲ್ಲಿ ಇದ್ದಿತು. ಉತ್ತರಾಧಿಕಾರಿಗಳಿಲ್ಲದೆ ಮಡಿಯುತ್ತಿದ್ದವರ ಆಸ್ತಿಯೆಲ್ಲವು ಎಷ್ಟೋ ಸಲ ಅರಸನ ಬೊಕ್ಕಸಕ್ಕೆ ಸೇರುತ್ತಿತ್ತು. ರಾಜನು ತನಗೆ ಅವಶ್ಯಕವೆಂದು ಕಂಡರೆ ಗ್ರಾಮಾಂತರ ಐಶ್ವರ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದನು.

ಒಂದು ಶಾಸನವು ಇಂತಹ ಸೂಚನೆ ನೀಡುತ್ತಿದೆ. “ಪಡೆದರ್ಥಂ ಕಳ್ಳರಿಂ ದಾರಿಗರಿನಳಿಪರಿಯಂ ಭೂಫರಿಂ ಕಿಚ್ಚಿನಿಂದಂ ಕಿಡುಗಂ”(ECXI. ಕ್ರಿ.ಶ.೧೧೨೮ರ ಶಾಸನ)[೨೫] ರಾಜನಿಗೆ ಬಹುಭಾಗ ಆದಾಯ ತೆರಿಗೆಗಳಿಂದ ಬರುತ್ತಿತ್ತು. ಅವನು ಹಲವಾರು ತೆರಿಗೆಗಳನ್ನು ಹಾಕುತ್ತಿದ್ದನು. ಶಾಸನವು ಅಂತಹ ತೆರಿಗೆಗಳ ಬಗೆಗೆ ಸುಳಿವು ನೀಡಿವೆ.

ಅಡೆಕಲುವಣ(ಕ್ರಿ.ಶ.೧೧೨೪ರ ಶಾಸನ)[೨೬] ಅಟ್ಟಿದರೆ (ಕ್ರಿ.ಶ.೩೦೯ರ ಶಾಸನ).[೨೭] ಹೀಗೆ ತೆರಿಗೆಗಳು ಪ್ರಾಚೀನ ಕಾಲದ ಬಹಳ ಮುಖ್ಯವಾದ ಆರ್ಥಿಕ ಮೂಲಗಳಾಗಿದ್ದವು. ಇವುಗಳ ಬಗೆಗೆ ನಮ್ಮ ತಾಲ್ಲೂಕಿನಲ್ಲಿ ಅನೇಕ ಶಾಸನಗಳಲ್ಲಿ ಮಾಹಿತಿಗಳಿವೆ. ಅವುಗಳನ್ನು ಆಧರಿಸಿ ಈ ಕೆಳಕಂಡಂತೆ ಅಧ್ಯಯನ ನಡೆಸಲಾಗಿದೆ.

ಕರಡಿಕಲ್ ಗ್ರಾಮದ ಬಳಿಯ ಗುಳ್ಳಮ್ಮನ ಗುಡಿ ಗೋಡೆಗೆ ಸೇರಿಸಿರುವ ಕಂಬದಲ್ಲಿ ಶಾಸನ ಇದೆ. ಈ ಶಾಸನದಲ್ಲಿ ಚಾಳುಕ್ಯ ವಿಕ್ರಮವರ್ಷದ ಉಲ್ಲೇಖವಿದೆ. ಅವನ ಆಳ್ವಿಕೆಯ ವರ್ಷ ಈ ಶಾಸನದಲ್ಲಿ ನಷ್ಟವಾಗಿದೆ. ಸಿದ್ಧಾರ್ಥ, ಆಷಾಢ, ಬ.೧ ಆದಿವಾರದ ಉಲ್ಲೇಖವಿದೆ. ಇದು ಕ್ರಿ.ಶ.೧೮-೬-೧೦೭೯ರ ಮಂಗಳವಾರಕ್ಕೆ ಸರಿಹೊಂದುತ್ತದೆ.

ಮೊದಲ ಭಾಗವು ಕ್ರಿ.ಶ.೧೦೭೯ಕ್ಕೆ ಸೇರಿದ್ದು, ಹೆಗ್ಗಡೆ ಸೂಕ್ಷ್ಮಶಿವಭಟಾರ ಮತ್ತು ಪ್ರಮುಖ ತಪೋಧನರು ಸೇರಿಕೊಂಡು ದಾಸಿಸೆಟ್ಟಿಗೆ ಮತ್ತು ನಕರಕ್ಕೆ(ವ್ಯಾಪಾರಗಳಿಗೆ) ಕೆಲವು ಕಟ್ಟಳೆಗಳನ್ನು ಮಾಡಿ ಶಾಸನ ನೀಡುತ್ತಾನೆ. ನಡೆಮುಡಿಗೆ ಸಂಬಂಧಪಟ್ಟಂತೆ ಇರುವ ಈ ಶಾಸನದಲ್ಲಿ ಅಂತ್ಯಜರು ಅಥವಾ ಕೀಳು ಕುಲದವರು ತಮ್ಮ ಮದುವೆಯ ಬಂಡಿಯನ್ನು ಅಂಗಡಿ ಬೀದಿಯೊಳಗೆ ತರಬಾರದೆಂದೂ ಹಾಗೇನಾದರೂ ಬಂದರೆ ಹನ್ನೆರಡು ಗದ್ಯಾಣ ಹೊನ್ನನ್ನು ದಂಡವಾಗಿ ಕೊಡಬೇಕೆಂದು ಕಟ್ಟಳೆ ವಿಧಿಸಲಾಗಿದೆ ಎಂದು ಈ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಎರಡನೆಯ ಭಾಗದಲ್ಲಿ ಕಾಲವು ಶಕ ವರ್ಷ ೯೫೦ನೆಯ ವಿಭವ, ಶ್ರಾವಣ, ಬ.೮, ಬೃಹಸ್ಪತಿವಾರದ ಉಲ್ಲೇಖವಿದ್ದು, ಇದು ಕ್ರಿ.ಶ.೧೬-೮-೧೦೨೮ಕ್ಕೆ ಸಮನಾಗುತ್ತದೆ. ಕರಡಿಕಲ್ಲ ರಾಜಗುರು ವ್ಯೋಮಶಿವಭಟಾರರು ಚಾಮುಣ್ಣಸೆಟ್ಟಿಗೆ ವ್ಯಾಪಾರ ಸಂಘಕ್ಕೆ ಮತ್ತು ದೇವರ ಸೇವಾ ಪರಿಚಾರಕರಿಗೆ ಹಲವು ದಾನಗಳನ್ನು ಬಿಟ್ಟ ವಿಷಯ ಈ ಶಾಸನದಲ್ಲಿದೆ. ಅಂಗಡಿಯ ತೆರಿಗೆಯ ಒಂದು ಭಾಗವನ್ನು ಬಿಟ್ಟು ಮುಂದೆ ಒಂದು ವರುಷ ಪ್ರತಿ ಮಾಳಿಗೆಯಂಗಡಿಗೆ ಎರಡು ಪಣವಡ್ಡ, ಹುಲ್ಲಿನ ಅಂಗಡಿಗೆ ಎರಡು ಪಣವಡ್ಡ, ಧಾನ್ಯ ವಿಕ್ರಯಕ್ಕೆ, ಎತ್ತಿನ ಹೇರಿಗೆ, ಕತ್ತೆಯ ಹೇರಿಗೆ, ಕೋಣದ ಹೇರಿಗೆ, ಕೆಲವು ಸುಂಕಗಳನ್ನು ನಿಗದಿಪಡಿಸಿದೆ ಮತ್ತು ಬಡಿದವನಿಗೆ ಹನ್ನೆರಡು ಹಣ ದಂಡ, ಎಂಜಲು ಉಗಿದರೆ, ಚಪ್ಪಲಿಯಲ್ಲಿ ಹೊಡಿದರೆ

ಆರು ಪಣ ದಂಡ ಇರಿದವನಿಗೆ ಮೂರು ಗದ್ಯಾಣ ದಂಡ, ಇನ್ನೂ ಕೆಲವು ತಪ್ಪುಗಳಿಗೆ ಕೆಲವು ಹಣವನ್ನು ನಿಗದಿಗೊಳಿಸಿ ದಾನ ಬಿಡಲಾಗಿದೆ.[೨೯]

ಜಲದುರ್ಗ ಗ್ರಾಮದ ಆಂಜನೇಯ ಮೂರ್ತಿಯ ಹಿಂಬದಿಯಲ್ಲಿ ಈ ಶಾಸನವಿದೆ. ಈ ಶಾಸನದ ಕಾಲವು ಚಾಳುಕ್ಯ ವಿಕ್ರಮ ವರ್ಷದ ೧೨, ಪ್ರಭವ, ಆಷಾಢ ಶು.೧೦ ಆದಿತ್ಯವಾರ, ದಕ್ಷಿಣಾಯನ ಸಂಕ್ರಾಂತಿಯೆಂದಿದ್ದು, ಇದು ಕ್ರಿ.ಶ.೧೩-೧೬-೧೦೮೭ಕ್ಕೆ ಸರಿ ಹೊಂದುತ್ತದೆ.

ಕಲ್ಯಾಣ ಚಾಲುಕ್ಯ ಅರಸ ತ್ರಿಭುವನಮಲ್ಲನು ಆಳ್ವಿಕೆ ನಡೆಸುತ್ತಿದ್ದಾಗ, ಕುಡುಗುಂಡೆಯ ಶ್ರೀ ಧನಂಜಯೇಶ್ವರದೇವರ ಪೂಜೆ ಪುನಸ್ಕಾರಕ್ಕೆ ಮಹಾಜನರು ದತ್ತಿ ಬಿಟ್ಟ ವಿವರ ಈ ಶಾಸನದಲ್ಲಿದೆ. ಚಾಳುಕ್ಯ ವಿಕ್ರಮ ವರ್ಷದ ೪೫ನೆಯ ಶಾರ್ವರಿ, ಶು.೧೦ ಬುಧವಾರದಂದು ಅಂದರೆ ಕ್ರಿ.ಶ.೭-೭-೧೧೨೦ರಂದು ಮಹಾಪ್ರಧಾನಿ ಮನೆವೆರ್ಗ್ಗಡೆ ದಂಡನಾಯಕ ಗೋವಿಂದಮಯ್ಯಗಳ ಆಜ್ಞೆಯಂತೆ ಕರಡಿಕಲ್ಲು ನಾಡಿನ ವಡ್ಡರಾವುಳದ ಸುಂಕವೆರ್ಗ್ಗಡೆ ಬಾಚಿಮಯ್ಯನಾಯಕನು ಕುಡುಗುಂದೆಯಲ್ಲಿ ಒಕ್ಕಲುದೆರೆಯನ್ನು ಬಿಡುತ್ತಾನೆ. ಭೂಮಿಯನ್ನು, ಮನ್ನೆಯ ಮಣ್ಡಳಿಕ ಭೂತರಸನ ಬೆಸದಿಂದ ಒಡೆಯ ಧನಂಜರಸನು ಸ್ವಲ್ಪ ಭೂಮಿಯನ್ನು, ಪೊನ್ನಕಣಿಯ ದಂಡನಾಯಕ ಬಿಟ್ಟರಸನ ಅನುಮತಿಯಂತೆ ಹೆಗ್ಗಡೆ ಕಾವಣಭಟ್ಟರು ಕರಡಿಕಲ್ಲು ಮುನ್ನೂರರ ಬಣಜಿಗರಾದ ನಾಮಸೆಟ್ಟಿ, ಕೇಸವಸೆಟ್ಟಿ, ರೇವಿಸೆಟ್ಟಿ, ಆದಿಮಯಸೆಟ್ಟಿ, ಮುಪ್ಪಿಸೆಟ್ಟಿ, ಜಾಮಿಸೆಟ್ಟಿ, ಗಾತ್ರಿಗರು, ಬೀರರು, ಬೀರವಣಿಗರು ಮುಂತಾದವರೆಲ್ಲ ಸೇರಿ ತಾವು ವ್ಯಾಪಾರ ಮಾಡುವ ವಸ್ತುಗಳಿಗೆ ಇಂತಿಷ್ಟು ತೆರಿಗೆಯೆಂಬಂತೆ ಹಲವು ರೂಪದಲ್ಲಿ ದತ್ತಿ ಬಿಡುತ್ತಾರೆ. ಹಾಗೆಯೆ ಹೊನ್ನಕಣೆಯ ಸ್ಥಳದ ಬೋವರಾದ ಬೆಣ್ಣಬೋವ, ಆನೆಯ ಕೇತಬೋವ, ದೊಡ್ಡಬಮ್ಮಬೋವ, ಹಾಲಬೋವ, ಕೊಂಕಬೋವ ಮೊದಲಾದ ಪ್ರಮುಖರಾದ ಕುಳಿಯ(ಗಣಿಯ) ಬೋವರೆಲ್ಲರೂ ಸೇರಿ ದೇವ ನಂದಾದೀವಿಗೆಗೆ, ಎಣ್ಣೆಗಾಗಿ ಎರಡು ಗಾಣಗಳನ್ನು ದಾನ ಬಿಡುತ್ತಾರೆ.[೩೦]

ಹಿರೇಹೆಸರೂರು ಗ್ರಾಮದ ಮಲ್ಲಯ್ಯನ ಗುಡಿ ಹಿಂಬದಿ ಗೋಡೆಗೆ ಸೇರಿಸಿರುವ ಶಾಸನ. ಈ ಶಾಸನ ಸುಮಾರು ೧೨ನೆಯ ಶತಮಾನಕ್ಕೆ ಸೇರುತ್ತದೆ. ಉತ್ತರಾಯಣ ಸಂಕ್ರಾಂತಿಯೆಂದು ಯಾವುದೋ ಕಾರ್ಯಕ್ಕೆ ಎಲೆ, ಅಡಿಕೆ ಮುಂತಾದ ವಸ್ತುಗಳ ವಿಕ್ರಯದ ಸಮಯದಲ್ಲಿ ಕೆಲವು ತೆರಿಗೆಗಳನ್ನು ಗೌಡ ಮಾಬಿಸೆಟ್ಟಿ, ಸೋಮಿಸೆಟ್ಟಿ, ಪಾರಿಸೆಟ್ಟಿ, ಪುಗ್ಗಿಸೆಟ್ಟಿ ಮುಂತಾದವರು ದಾನ ಬಿಟ್ಟಂತೆ ತಿಳಿಯುತ್ತದೆ.[೩೧]

ಮಸ್ಕಿಯ ಪ್ರವಾಸಿ ಮಂದಿರದ ಆವರಣದಲ್ಲಿನ ೯ನೆಯ ಶಾಸನವು ಇದ್ದು, ಶಾಸನೋಕ್ತ ಕಾಲವು ಪ್ಲವಂಗ, ಶ್ರಾವಣ ಶು.೧೧ ಎಂದಿದ್ದು, ಇದು ಕ್ರಿ.ಶ.೨೭-೭-೧೫೪೭ಕ್ಕೆ ಸರಿಹೊಂದುತ್ತದೆ.

ಸದಾಶಿವ ಮಹಾರಾಯನು ಆಳುತ್ತಿರುವಾಗ ಅವನ ಕಾರ್ಯಕ್ಕೆ ಕರ್ತನಾದ ಅಳಿಯ ರಾಮರಾಜಯ್ಯದೇವ ಅರಸನು ನಾಯಿಂದರ ತಿಮ್ಮೋಜ, ಕೊಂಡೋಜ ಮತ್ತು ಭದ್ರೋಜರುಗಳ ಮನವಿಯ ಮೇರಿಗೆ ಮೊಸಗೆ ಸೀಮೆಗೆ ಸೇರುವ ಒಂದು ಗ್ರಾಮವನ್ನು ಆ ಕುಲದವರೆಗೆ ಅಂನು, ಪಂನು ಮುಂತಾದ ತೆರಿಗೆಗಳನ್ನು ಬಿಟ್ಟ ವಿಷಯವಿದೆ.[೩೨]

ಮುದಗಲ್ ಕೋಟೆಯಲ್ಲಿರುವ ರಾಮಲಿಂಗೇಶ್ವರ ದೇವಾಲಯದಲ್ಲಿನ ಶಾಸನವಿದೆ. ಇದರ ಶಾಸನೋಕ್ತ ಕಾಲವು ಶಕವರ್ಷ ೧೧೨೮, ಯುವ, ಭಾದ್ರಪದ, ಸು.ಪುಣ್ಣಮಿ, ಬುಧವಾರ, ಸೋಮಗ್ರಹಣವೆಂದಿದ್ದು, ಇದು ಕ್ರಿ.ಶ.೯-೯-೧೨೧೫ಕ್ಕೆ ಸರಿಹೊಂದುತ್ತದೆ. ಆ ದಿನ ಚಂದ್ರಗ್ರಹಣವಿತ್ತು.

ಶಾಸನವು ದೇವಗಿರಿ ಯಾದವವಂಶದ ಸಿಂಹಣನ ಆಳ್ವಿಕೆಯಲ್ಲಿ ಅವನ ದಂಡನಾಥನಾದ ದಾಮೋದರನನ್ನು ಈ ಶಾಸನದಲ್ಲಿ ಹೆಸರಿಸುತ್ತದೆ. ಈ ಶಾಸನವು ಮುಂದುವರಿದು ಎಡದೊರೆನಾಡನ್ನೂ ಅದರಲ್ಲಿನ ಕರಡಿಕಲ್-೩೦೦ರ ವಿಭಾಗವನ್ನು, ಆ ಪ್ರದೇಶಕ್ಕೆ ರಾಜಧಾನಿ ಪಟ್ಟಣವಾದ ಮುದುಗಲ್ಲನ್ನು ವರ್ಣಿಸುತ್ತದೆ. ಈ ಪ್ರದೇಶವನ್ನು ಸಾಮಂತನಾದ ಕದಂಬವಂಶದ ಬಜ್ಜರಸನು ಆಳುತ್ತಿದ್ದ. ಶಾಸನ ಮುಂದುವರಿದು ಕದಂಬವಂಶದ ಅರಸನನ್ನು ಹೊಗಳುತ್ತದೆ. ಮುದುಗಲ್ಲ ಊರೊಡೆಯರು, ಐಯ್ಯುವೊಳೆ ಐನೂರ್ವರ್ ಸ್ವಾಮಿಗಳು, ಕುಬೇರನ ವಂಶದವರಾದ ವೈಶ್ಯಕುಲದವರಾದ ಮುದುಗಲ್ ಸಮಸ್ತ ನಖರರುಗಳು, ಕರಡಿಕಲ್ಲು-೩೦೦ರ ಸೆಟ್ಟಿಗುತ್ತ, ಸೇಗಿಸಸೆಟ್ಟ ಸ್ಥಳದ ಸಮಸ್ತ ಮುಂಮುರಿದಂಡಗಳು, ಮಹಾಪ್ರಧಾನ, ಪರಸಯ್ಯ ದಂಡನಾಯಕ ಎಲ್ಲರೂ ಒಂದೇ ಮನಸ್ಸಿನಿಂದ ತೀರ್ಮಾನಿಸಿ ಚಂದ್ರಗ್ರಹಣದ ದಿವಸ ನಖರೇಶ್ವರ ಮತ್ತು ಪ್ರಸನ್ನ ಚನ್ನಕೇಶವದೇವರ ಸೇವೆಗಾಗಿ ಸರ್ವಬಾಧಾ ಪರಿಹಾರವಾಗಿ ನಾನಾ ಕಡೆ ಕೆಲವು ಭೂಮಿಯನ್ನು, ದೇವರ ದೀಪಕ್ಕೆ, ಒಂದು ಗಾಣವನ್ನು ದಾನ ಮಾಡಲಾಗಿದೆ. ವೈಶ್ಯರ ಮನೆ ಮದುವೆಯಲ್ಲಿ ಚೌಲದಲ್ಲಿ, ಮೈನೆರದಲ್ಲಿ ಇನ್ನೂ ಮುಂತಾದ ಸಮಯಗಳಲ್ಲಿ ಇಂತಿಷ್ಟು ಹಣವನ್ನು ಕೂಡಬೇಕೆಂದು ನಿಯಮ ಮಾಡಿ ದಾನವನ್ನು ಬಿಡಲಾಗಿದೆ.[೩೩]

**೩.೧.೩ ಬಸದಿ ದಾನ ಶಾಸನಗಳು**

ಪ್ರಾಚೀನ ಕಾಲದಲ್ಲಿ ಬಸದಿ-ಮಠ-ದೇವಾಲಯಗಳು ಧರ್ಮಸಂಸ್ಕೃತಿಯ ಕೇಂದ್ರಗಳಾಗಿದ್ದು, ಶಿಕ್ಷಣ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ವಿಷ್ಣುವರ್ಧನನ ಆಳ್ವಿಕೆಯನ್ನು ಉಲ್ಲೇಖಿಸುವ

ಮಂಗಳೂರಿನ ಶಾಸನವು ನರಸಿಂಹ ಹೊಯ್ಸಳದೇವನು ಗೋವಿಂದ ಜಿನಾಲಯಕ್ಕೆ ಮುಗಳಿ ಅಗ್ರಹಾರದಲ್ಲಿ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೩೪]

ಹೆಸರೂರ ಪಶ್ಚಿಮಕ್ಕೆ ಪಂಪಯ್ಯನ ಹೊಲದಲ್ಲಿ ಶಾಸನವಿದೆ. ಇದರ ಶಾಸನೋಕ್ತ ಕಾಲವು ಶಕವರ್ಷ ೯೪೩. ರೌದ್ರಿ ಸಂವತ್ಸರ, ಭಾದ್ರಪದ, ಸು.ಪುಣ್ಣಿಮೆ, ಸೋಮಗ್ರಹಣವೆಂದಿದ್ದು. ಇದು ಕ್ರಿ.ಶ.೪-೧೦-೧೦೨೦ರ ಮಂಗಳವಾರಕ್ಕೆ ಸರಿಹೊಂದುತ್ತದೆ.

ಚಂದ್ರಗ್ರಹಣದಂದು ಮೊಸಗಿಯ(ಮಸ್ಕಿ) ತಂತ್ರಪಾಳನಾದ ಕಡಿಳಿನೊಗತ್ತಯ್ಯ ಕರಡಿಕಲ್ಲು-೩೦೦ರ ನಾಡಿಗೆ ಸೇರಿದ ಹಿರಿಯ ಹೆಸರೂರು ಗ್ರಾಮದ(ಬಸದಿಗೆ) ಕೆಲವು ಮತ್ತರು ಭೂಮಿಯನ್ನು ದಾನಬಿಟ್ಟ ವಿಷಯವನ್ನು ಈ ಶಾಸನ ಒಳಗೊಂಡಿದೆ. ದಾನ ನೀಡಿದ ವಿವರಗಳ ಭಾಗ ತ್ರುಟಿತವಾಗಿದೆ.[೩೫]

ಮಸ್ಕಿಯ ಪ್ರವಾಸಿ ಮಂದಿರದ ಆವರಣದಲ್ಲಿನ ೪ನೆ ಶಾಸನದಲ್ಲಿ ಕಾಲವು ಶಕವರ್ಷ ೯೫೩, ಪ್ರಜಾಪತಿ, ಫಾಲ್ಗುಣ, ಸು.೯ ಸೋಮವಾರ, ಮೀನ ಸಂಕ್ರಾಂತಿ ಎಂದಿದ್ದು, ಇದು ಕ್ರಿ.ಶ.೨೧-೨-೧೦೩೨ಕ್ಕೆ ಸರಿಹೊಂದುತ್ತದೆ.

ಚಾಳುಕ್ಯ ಅರಸ ಜಗದೇಕಮಲ್ಲನ ಆಳ್ವಿಕೆಯಲ್ಲಿ ಅಷ್ಟೋಪವಾಸಿ ಕನಕಣನ್ದಿ ಭರೂರರ ಪ್ರಾರ್ಥನೆಯಂತೆ ಕಾಳಿದಾಸನ ಚೊಳಾಯ್ತ ರೇವಣನ ಆಜ್ಞೆಯಂತೆ ಸಮಸ್ತ ಪ್ರಧಾನರ ಇಚ್ಛೆಯಂತೆ ರಾಜಧಾನಿ ಪಿರಿಯ ಮೊಸಂಗಿಯ ಹೊದಲ್ಲಿ ದೇಸಿಗಗಣದ ಶ್ರೀ ಜಗದೇಕಮಲ್ಲ ಜಿನಾಲಯದ ಭೋಗಕ್ಕಾಗಿ ಜಗದೇಕಮಲ್ಲದೇವನು ನೂರು ಮತ್ತರು ಕರಿಯ ನೆಲ, ಎರಡು ಮತ್ತರು ಗದ್ದೆ, ಹೂವಿನ ತೋಟ, ದೀಪಕ್ಕಾಗಿ ಒಂದು ಗಾಣವನ್ನು ದತ್ತಿ ಬಿಡುತ್ತಾನೆ. ಈ ದತ್ತಿಯನ್ನು ಜಗದೇಕಮಲ್ಲ ಜಯಸಿಂಹವಲ್ಲಭನ ದತ್ತಿ ಎಂದು ಕರೆಯಲಾಗಿದೆ.[೩೬]

ಈಗ ಹೈದ್ರಾಬಾದ್ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿರುವ ಶಾಸನವಿದೆ. ಈ ಶಾಸನೋಕ್ತ ಕಾಲವು ಶಕವರ್ಷ ೯೪೯. ಪ್ರಭವ ಸಂವತ್ಸರ, ಪುಷ್ಯ, ಬ.೯, ಆದಿತ್ಯವಾರ, ಉತ್ತರಾಯಣವೆಂದಿದ್ದು, ಇದು ಕ್ರಿ.ಶ.೨೪-೧೨-೧೦೨೭ಕ್ಕೆ ಸರಿಹೊಂದುತ್ತದೆ.

ಚಾಳುಕ್ಯ ಅರಸ ಜಗದೇಕಮಲ್ಲನ ಕಾಲದಲ್ಲಿ ಅವನ ಮಗಳು ಸಹಜ ವೆಡಂಗಿಯಾದ ಸೋಮಲದೇವಿಯು ಪುಲಿಪೊದರಿ ನೆಲೆವೀಡಿನಲ್ಲಿದ್ದಾಗ ತಂಬಿವಟ್ಟಬೆಸವೋಜ ಎಂಬುವವನ ಬಿನ್ನಪದಂತೆ ಬೆಸವೋಜನು ಕಟ್ಟಿದ ಬಸದಿಯ ಭೋಗಕ್ಕೆ ಐವತ್ತು ಮತ್ತರು ಭೂಮಿ ಮತ್ತು ಅಕಡಿ ಮತ್ತರು ೫೦ನ್ನು ಕೊಡಿಸುತ್ತಾಳೆ. ಇದಲ್ಲದೆ ದೀಪಕ್ಕೆ ಒಂದು ಗಾಣ, ಹೂವಿನ

ತೋಟವೊಂದನ್ನು ದಾನ ನೀಡಲಾಗಿದೆ. ಬಸದಿಯನ್ನು ಸೋದೊರೆ ವಡಿಯರ ರೇವಣಯ್ಯನ ಆಜ್ಞೆಯ ಮೇರೆಗೆ ಕಟ್ಟಿಸಿದಂತೆ ಹೇಳಲಾಗಿದೆ.[೩೭]

## ೩.೨. ವೀರಗಲ್ಲುಗಳು

ಯುದ್ಧದಲ್ಲಿ ಹೋರಾಡಿ ಮಡಿದ ಪೀರರ ಸ್ಮಾರಕವಾಗಿ ನಿಲ್ಲಿಸುವ ಕಲ್ಲುಗಳೇ ವೀರಗಲ್ಲುಗಳೂ. ಮೂಲತಃ ಸಂಸ್ಕೃತ ಭಾಷೆಯ ಪದವಾದ ಈ 'ವೀರ' ಎಂಬುದು ಅನೇಕ ಇಂಡೋ–ಆರ್ಯನ್ ಭಾಷೆಗಳಲ್ಲಿ ಬಳಕೆಯಲ್ಲಿದೆ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಲ್ಲಿದೆ.[೩೮] "ವೀರ" ಎಂಬ ಪದಕ್ಕೆ ಸಮನಾರ್ಥಕ ಪದವಾಗಿ ಇಂಗ್ಲೀಷ್‌ನ "Hero" ಎಂಬ ಪದವನ್ನು ಸಮನಾರ್ಥಕವಾಗಿ ಕನ್ನಡದಲ್ಲಿ "ವೀರ" ಎಂಬ ಪದವನ್ನು ಬಳಸುವುದು ರೂಢಿಯಲ್ಲಿದೆ. ಇದು ಮೂಲತಃ ಗ್ರೀಕ್ ಭಾಷೆಯಿಂದ ಇಂಗ್ಲೀಷ್ ಭಾಷೆಗೆ ಬಂದ ಪದ. ಇದು ಕಾಲದಿಂದ ಕಾಲಕ್ಕೆ ಹೆಚ್ಚು ಅರ್ಥವ್ಯಾಪ್ತಿಯನ್ನು ಪಡೆಯುತ್ತಾ ಹೋಯಿತು.[೩೯]

ಜಿತೇನ ಲಭ್ಯತೇ ಲಕ್ಷ್ಮಿ ಮೃತೇನಾಪಿ ಸುರಾಂಗನಾ

ಕ್ಷಣ ವಿದ್ವಸಿನೀಕಾಯೇ ಕಾ ಚಿಂತಾ ಮರಣೇ ರಣೇ[೪೦]

ಯುದ್ಧದಲ್ಲಿ ಗೆದ್ದರೆ ಇಹಲೋಕದಲ್ಲಿ ರಾಜ್ಯಲಕ್ಷ್ಮಿಯೂ, ಹೋರಾಡುತ್ತ ಮಡಿದರೆ ಸ್ವರ್ಗದಲ್ಲಿ ಸುರಾಂಗನೆಯರೂ ದೊರಕುವುದರಿಂದ ಕ್ಷಣದಲ್ಲಿ ನಾಶವಾಗುವ ಈ ದೇಹಕ್ಕಾಗಿ ಮರಣ ಇಂತಹ ಮಾನವೀಯ ಮೌಲ್ಯಗಳನ್ನು ಹೊಂದಿರುವ ವ್ಯಕ್ತಿಗಳು ಮಡಿದ ವೀರನ ನೆನಪಿಗಾಗಿ ಹಾಕಿಸುತ್ತಾರೆ. ಈ ವೀರಗಲ್ಲುಗಳು ಬರಹವನ್ನು ಮಾತ್ರವಲ್ಲದೆ, ಶಿಲ್ಪದ ವಿವರಗಳನ್ನು ಹೊಂದಿರುತ್ತವೆ. ಅಂದರೆ, ಶಾಸನ ಮತ್ತು ಶಿಲ್ಪ, ಆ ವೀರಗಲ್ಲು ಯಾವ ವೀರ ಸ್ಮಾರಕವಾಗಿದಿದ್ದಿಯೋ ಆ ವೀರನ ಪರಾಕ್ರಮವನ್ನು ಸಾರುವಂತಹವೇ ಆಗಿರುತ್ತವೆ. ವೀರನು ಹೋರಾಟದಲ್ಲಿ ಮಡಿದ ನಂತರ ಇಪ್ಪತ್ತು ತಲೆಮಾರುಗಳವರೆಗೂ ಆತನ ಪರಾಕ್ರಮದ ಕೀರ್ತಿ ಶಾಶ್ವತವಾಗಿ ನಿಲ್ಲುವುದು ಎಂಬ ನಂಬಿಕೆ ಇತ್ತು. ಆದ್ದರಿಂದ ಈ ಶಾಸನಗಳನ್ನು ಹಾಕಿಸುತ್ತಿದ್ದರು. ಆ ಕಾಲದಲ್ಲಿ ಒಬ್ಬ ವ್ಯಕ್ತಿ ಸಾಕಷ್ಟು ಸಾಧನೆ ಮಾಡಿದರೂ ಪ್ರಸಾರ ಆಗುತ್ತಿರಲಿಲ್ಲ. ಆದರೆ ಒಬ್ಬ ವೀರ ಮರಣ ಹೊಂದಿದರೆ ಅಥವಾ ಯುದ್ಧದಲ್ಲಿ ಸತ್ತು ಪ್ರಾಣತ್ಯಾಗ ಮಾಡಿದರೆ ಆತನ ತ್ಯಾಗವನ್ನು ಪ್ರಚಾರಪಡಿಸಲಾಗುತ್ತಿತ್ತು. ವೀರನ ಪರಾಕ್ರಮ ಲೋಕಕ್ಕೆ ತಿಳಿಯುವಂತೆ ಮಾಡಿ ಅದರಿಂದ ಅಂದಿನ ತಲೆಮಾರಿನ ಸಂಸ್ಕೃತಿಯನ್ನು ತಿಳಿಸುತ್ತದೆ.

ವೀರಗಲ್ಲುಗಳು ವೀರರ ನೆನಪಿಗೆ ನಿಲ್ಲಿಸಿದ ಶಾಸನಗಳಾಗಿವೆ. ಕರ್ನಾಟಕದಲ್ಲಿ ವೀರಗಲ್ಲುಗಳ ಸಂಖ್ಯೆ ಅಧಿಕವಾಗಿದೆ. ಇವುಗಳ ಶಿಲ್ಪವನ್ನು ಶಾಸನ ಸಹಿತ ಶಿಲ್ಪ ಮತ್ತು ಶಾಸನರಹಿತ ಶಿಲ್ಪವೆಂದು ಎರಡು ಭಾಗ ಮಾಡಬಹುದು. ಈ ವೀರಗಲ್ಲುಗಳ ವಿಷಯ ಮತ್ತು ಅವುಗಳ ಮೇಲಿರುವ ಶಿಲ್ಪದ ಆಧಾರದಿಂದ ಹಲವು ವಿಧವಾಗಿ ವಿಂಗಡಿಸಿ ಅಧ್ಯಯನ ಮಾಡಬಹುದು. ವ್ಯಕ್ತಿ ವ್ಯಕ್ತಿಗಳ ಹೋರಾಟ ಶಿಲ್ಪ, ಪ್ರಾಣಿ ಪ್ರಾಣಿಗಳ ಹೋರಾಟ ಶಿಲ್ಪ, ವ್ಯಕ್ತಿ ಪ್ರಾಣಿಗಳ ಹೋರಾಟದ ಶಿಲ್ಪ ಮತ್ತು ವೀರಸ್ತಂಭಗಳ ಶಿಲ್ಪ ಎಂದು ೪ ಮುಖ್ಯ ಭಾಗಗಳಲ್ಲಿ ಇಲ್ಲಿ ಚರ್ಚಿಸಲಾಗಿದೆ.

**ವ್ಯಕ್ತಿ-ವ್ಯಕ್ತಿಗಳ ಹೋರಾಟ ಶಿಲ್ಪ**

ವ್ಯಕ್ತಿ-ವ್ಯಕ್ತಿಯೊಡನೆ ಹೋರಾಡುತ್ತಿರುವ ಶಿಲ್ಪ ಎಂದರೆ ತನ್ನ ಪ್ರಾಣ ರಕ್ಷಣೆಗಾಗಿಯೊ ಅಥವಾ ಆಸ್ತಿ, ಸ್ತ್ರೀ, ದನ-ಕರುಗಳ ರಕ್ಷಣೆಗಾಗಿಯೋ, ಶತ್ರುಗಳ ಜೊತೆ ಹೋರಾಡುತ್ತಿರುವುದನ್ನು ಸೂಚಿಸುವ ಶಿಲ್ಪಗಳು. ಇದನ್ನು ಅಧ್ಯಯನ ದೃಷ್ಟಿಯಿಂದ ತುರುಗೋಳ್ ಶಿಲ್ಪ. ಪೆಣ್ಬುಯಲ್ ಶಿಲ್ಪ, ಊರಳಿವು ಶಿಲ್ಪ, ಗಡಿಕಾಳಗ ಶಿಲ್ಪ ಮತ್ತು ಕಳ್ಳೊಡನೆ ಹೋರಾಟದ ಶಿಲ್ಪ ಎಂದು ಐದು ವಿಧವಾಗಿ ವಿಂಗಡಿಸಬಹುದು.[೪೧] ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು, ಲೌಕಿಕ ಉದ್ದೇಶವಾಗಿದ್ದರೆ, ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ತಮ್ಮ ಕರ್ತವ್ಯ ಎಂದು ಭಾವಿಸಿ ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆ ಎಂಬ ನಂಬಿಕೆಗಾಗಿ ವೀರಗಲ್ಲುಗಳನ್ನು ನಿಲ್ಲಿಸುತ್ತಿದ್ದರು. ಇದು ಪರಾಮಾರ್ಥಿಕ ಉದ್ದೇಶವಾಗಿದೆ.[೪೨] ಧ್ಯಾನ, ದಾನ ಮೊದಲಾದ ಧರ್ಮ ಮಾರ್ಗಗಳಲ್ಲಿ ನಡೆದ ಧರ್ಮವೀರನಿಗೆ ಸಾಧ್ಯವಾಗುವ ಮೋಕ್ಷಸಾಧನೆಯು ಧಾರ್ಮಿಕ ಬಲಿದಾನ ಮತ್ತು ಲೌಕಿಕ ಬಲಿದಾನ ಮಾರ್ಗಗಳಿಂದಲೂ ಸಾಧ್ಯವೆಂಬ ಭಾವನೆ ಬೆಳೆದು ಕೊನೆ ಕೊನೆಗೆ ಯುದ್ಧಮಾರ್ಗದಲ್ಲಿ ಮಡಿದ ಯುದ್ಧವೀರನಿಗೂ ಸಾಧ್ಯವೆಂಬ ವಿಸ್ತಾರ ಪಡೆಯಿತು. ಲಿಂಗಸೂಗೂರು ತಾಲೂಕಿನಲ್ಲಿ ದೊರೆತ ವೀರಗಲ್ಲು ಇವುಗಳನ್ನು ಆಧಾರವಾಗಿಟ್ಟುಕೊಂಡು ವೀರಗಲ್ಲುಗಳ ದಾಖಲಾತಿಯನ್ನು ಇಲ್ಲಿ ಮಾಡಲಾಗಿದೆ.

೧ **ಗ್ರಾಮ** : ಹುನಕುಂಟೆ    **ಸ್ಥಳ** : ಊರ ಮುಂದಿರುವ ಸಜ್ಜಿ ಹೊಲದ ಬಾವಿ ಹತ್ತಿರ

**ಕಾಲ** : ಕ್ರಿ.ಶ.೧೮-೧೯ನೇ ಶತಮಾನ

**ಪ್ರಕಟಣೆ** : ಅಪ್ರಕಟಿತ    **ವಸ್ತು** : ಕಪ್ಪುಶಿಲೆ

ಈ ವೀರಗಲ್ಲು ಒಂದೇ ಪಟ್ಟಿಕೆಯಿಂದ ಕೂಡಿದ್ದು ವೀರಗಲ್ಲು ಆಗಿದೆ. ವೀರರು ಕಾದಾಡುತ್ತಿರುವ ದೃಶ್ಯವನ್ನು ಕಾಣಬಹುದು. ಒಬ್ಬ ವೀರನನ್ನು ಎದುರಾಳಿಯ ವೀರರು

ಕೊಳಲು ಪ್ರಯತ್ನಿಸುತ್ತಿದ್ದಾರೆ. ಎದುರಾಳಿಯ ಇಬ್ಬರು ವೀರರು ಜಡೆ ಕಟ್ಟಿದರ ಬಗ್ಗೆ ವೀರಗಲ್ಲಿನಲ್ಲಿ ಕಾಣಬಹುದು.

ವೀರನು ಎದುರಾಳಿಯಿಂದ ರಕ್ಷಣೆಯನ್ನು ಪಡೆಯಲು ಗುರಾಣಿಯನ್ನು ತನ್ನ ಎಡಗೈಯಲ್ಲಿ ಹಿಡಿದು ಹೊಡೆತವನ್ನು ತಪ್ಪಿಸುತ್ತಿದ್ದಾನೆ. ಒಬ್ಬನ ಕಾಲು ಮತ್ತೊಬ್ಬರ ಕಾಲಿಗೆ ತಾಗಿ ಯುದ್ಧದ ಭಂಗಿಯಲ್ಲಿ ನಿಂತ ಸನ್ನಿವೇಶವನ್ನು ಕಾಣುತ್ತೇವೆ. ವೀರನು ತನ್ನ ಎಡಗೈಯಲ್ಲಿ ಗದೆಯನ್ನು ಹೊಂದಿದ್ದನು. ತಲೆ ಮೇಲೆ ಕೂದಲು ಕಟ್ಟಿದ್ದರೆ ಚಿತ್ರವನ್ನು ಸಹ ವೀರಗಲ್ಲಿನಲ್ಲಿ ಕಾಣುತ್ತೇವೆ.

೨. **ಗ್ರಾಮ** : ಲಿಂಗಸೂಗೂರು **ಸ್ಥಳ** : ಹಳೆ ಪೊಲೀಸ್ ಠಾಣೆ ಮುಂದಿರುವ

**ಕಾಲ** : ಕ್ರಿ.ಶ.೧೦-೧೧ನೇ ಶತಮಾನ **ವಸ್ತು** : ಕಪ್ಪುಶಿಲೆ

**ಪ್ರಕಟಣೆ :**

ಈ ವೀರಗಲ್ಲಿನಲ್ಲಿ ವೀರನು ತನ್ನ ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ವೀರನು ತನ್ನ ಬಲಗೈಯಿಂದ ಬಾಣ ಬಿಡುತ್ತಿರುವ ದೃಶ್ಯವಿದೆ. ತಲೆ ಮೇಲೆ ಕೂದಲು ಕಟ್ಟಿದ್ದರ ಚಿತ್ರವನ್ನು ಸಹ ವೀರಗಲ್ಲಿನಲ್ಲಿ ಕಾಣುತ್ತೇವೆ. ವೀರನು ತನ್ನ ಬಲಗಾಲನ್ನು ಮುಂದೆ ಇಟ್ಟಿದಾನೆ. ಎಡಗಾಲು ಹಿಂದೆ ಇಟ್ಟ ಹಾಗೆ ಕಂಡುಬರುತ್ತದೆ. ವೀರನು ತನ್ನ ಕಾಲಿನಲ್ಲಿ ಕಾಲಬಂದಿ ಧರಿಸಿದಂತಿದೆ. ಕೈಬಂಧಿ ಮತ್ತು ತೋಳಬಂಧಿ ಧರಿಸಿರುವ ಚಿತ್ರವನ್ನು ಕಾಣುತ್ತೇವೆ. ಕಿವಿಯಲ್ಲಿ ಓಲೆ ಮತ್ತು ಕೊರಳಲ್ಲಿ ಎರಡು ಕಂಠಹಾರಗಳನ್ನು ಧರಿಸಿದೆ.

೩. **ಗ್ರಾಮ** : ಲಿಂಗಸೂಗೂರು **ಸ್ಥಳ** : ಎ.ಸಿ.ಕಚೇರಿ ಮುಂದುಗಡೆ

**ಕಾಲ** : ಕ್ರಿ.ಶ.೧೭-೧೮ನೇ ಶತಮಾನ **ವಸ್ತು** : ಕರಿಯ ಕಲ್ಲು

**ಪ್ರಕಟಣೆ :** ಅಪ್ರಕಟಿತ

ಈ ವೀರಗಲ್ಲು ಒಂದೇ ಪಟ್ಟಿಕೆಯಿಂದ ಕೂಡಿರುವ ವೀರಗಲ್ಲು ಆಗಿದೆ. ವೀರನು ಕುದುರೆಯ ಮೇಲೆ ಕುಳಿತುಕೊಂಡಿದ್ದಾನೆ. ಮತ್ತು ಬಲಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ವೀರನು ಕಚ್ಚೆ ಪಂಚೆಯನ್ನು ಧರಿಸಿದ್ದು, ಕಾಲಲ್ಲಿ ಕಡಗವನ್ನು ಧರಿಸಿ ಮುಡಿಯನ್ನು ಕಟ್ಟಿದ್ದಾನೆ. ವೀರನು ತನ್ನ ಕಾಲಿನಲ್ಲಿ ಕಾಲಬಂಧಿ ಧರಿಸಿದಂತಿದೆ. ಕೈಬಂಧಿ ಮತ್ತು ತೋಳಬಂಧಿ ಧರಿಸಿರುವ ಚಿತ್ರವನ್ನು ಕಾಣುತ್ತೇವೆ. ಕಿವಿಯಲ್ಲಿ ಓಲೆ ಮತ್ತು ಕೊರಳಲ್ಲಿ ಎರಡು ಕಂಠಹಾರಗಳನ್ನು ಧರಿಸಿದ್ದಾನೆ.

೪ **ಗ್ರಾಮ** : ಕುಪ್ಪೆಗುಡ್ಡ **ಸ್ಥಳ** : ಗ್ರಾಮದ ಹೊರ ಹೊಲದಲ್ಲಿ

**ಕಾಲ** : ಕ್ರಿ.ಶ.೧೮-೧೮ನೇ ಶತಮಾನ **ವಸ್ತು** : ಕರಿಯ ಕಲ್ಲು

**ಪ್ರಕಟಣೆ**:

ಈ ಗ್ರಾಮವು ಲಿಂಗಸೂಗೂರು ತಾಲೂಕು ಕೇಂದ್ರದಿಂದ ರಾಯಚೂರು ರಸ್ತೆಯಲ್ಲಿ ೩ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಇಲ್ಲಿ ವೀರಗಲ್ಲಿನ ಶಾಸನ ಪತ್ತೆಯಾಗಿದೆ. ಕ್ರಿ.ಶ.೧೭-೧೮ನೇ ಶತಮಾನಕ್ಕೆ ಸೇರಿದೆ. ಇದು ೮ ಅಡಿ ಎತ್ತರ, ಎರಡೂವರೆ ಅಗಲವಿದ್ದು, ಕರಿಯ ಕಲ್ಲಿನಲ್ಲಿ ಕೆತ್ತನೆಯಾಗಿದೆ. ಇದರಲ್ಲಿ ಅಕ್ಷರವನ್ನು ಬಲಬದಿಯ ಭಾಗದಿಂದ ಎಡಬದಿಯ ಭಾಗಕ್ಕೆ ಮೂರು ಹಂತಗಳಲ್ಲಿ ಶಿಲ್ಪಕಾರನು ಕಂಡರಿಸಿದ್ದಾನೆ. ಈ ವೀರಗಲ್ಲಿನ ಶಾಸನದಲ್ಲಿ ಒಟ್ಟು ೧೭ ಸಾಲುಗಳು ಇವೆ. ಬಲಬದಿಯ ಭಾಗದಲ್ಲಿ ೭ ಸಾಲುಗಳಿದ್ದು, ಮಧ್ಯಭಾಗದಲ್ಲಿ ೭ ಸಾಲುಗಳಿವೆ. ಇದರ ಎಡಬದಿಯಲ್ಲಿ ವಕ್ರವಾಗಿ ಮೂರು ಸಾಲುಗಳನ್ನು ಕೆತ್ತಲಾಗಿದೆ. ಒಟ್ಟಾರೆಯಾಗಿ ಈ ವೀರಗಲ್ಲಿನ ಶಾಸನವು ಜಂಣ ನಾಯಕ, ಸಿದ್ಧನಾಯಕ ಮತ್ತು ಅವರ ಮಕ್ಕಳು ಕರಡಿಕಲ್ ಕಾಳಗದಲ್ಲಿ ವೈರಿಪಾಳೆಯದ ಹದಿನೈದು ಮಂದಿ ಸೈನಿಕರನ್ನು ಕೊಂದರೆಂಬ ವಿವರ ತಿಳಿಸುತ್ತದೆ.[೪೩]

೫ **ಗ್ರಾಮ** : ಮಾವಿನ ಬಾವಿ **ಸ್ಥಳ** : ಗ್ರಾಮದ ಹನುಮಂತ ದೇವರಗುಡಿ ಎದುರುಗಡೆ

**ಕಾಲ** : ಕ್ರಿ.ಶ.೧೮-೧೮ನೇ ಶತಮಾನ

**ಪ್ರಕಟಣೆ**: ಅಪ್ರಕಟಿತ **ವಸ್ತು** : ಕಪ್ಪು

ಈ ವೀರಗಲ್ಲು ಒಂದೇ ಪಟ್ಟಿಕೆಯಿಂದ ಕೂಡಿದ್ದು ವೀರಗಲ್ಲು ಆಗಿದೆ. ಗ್ರಾಮದ ಹನುಮಂತದೇವರ ಗುಡಿಯ ಎದುರುಗಡೆ ಇದೆ. ಕ್ರಿ.ಶ.೧೭-೧೮ನೇ ಶತಮಾನದ ಶಿಲ್ಪವಿದ್ದು, ಇದು ಬೇಡರ ವೀರಗಲ್ಲಾಗಿದೆ. ಈತನನ್ನು ಸ್ಥಳೀಯರು ನರಸಪ್ಪ ನಾಯಕನೆಂದು ತಿಳಿಸುತ್ತಾರೆ. ಈ ಶಿಲ್ಪದಲ್ಲಿ ವೀರನು ಕುದುರೆಯ ಮೇಲೆ ಕುಳಿತು ಯುದ್ಧ ಮಾಡುವ ಭಂಗಿಯಲ್ಲಿದ್ದಾನೆ. ಈತನ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ತಲೆಗೆ ರುಮಾಲು ಸುತ್ತಿಕೊಂಡಿದ್ದು, ಕಿವಿಯಲ್ಲಿ ಕರ್ಣಕುಂಡಲಿಗಳಿವೆ. ಕೊರಳಲ್ಲಿ ಸರ ಇದ್ದು, ಟೊಂಕದಲ್ಲಿ ಕತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಈ ವೀರನ ಮುಂದೆ ಇನ್ನೊಂದು ಶಿಲ್ಪವು ನೆಲದ ಮೇಲೆ ನಿಂತುಕೊಂಡಿದೆ. ಈತನು ಎಡಗೈಯಲ್ಲಿ ದಂಡವನ್ನಿಡಿದಿದ್ದು, ಬಲಗೈಯಲ್ಲಿ ಚೌರ ಬೀಸುತ್ತಿರುವ ದೃಶ್ಯ ಇದೆ.

೬ **ಗ್ರಾಮ** : ಬೊಮ್ಮನಹಾಳ **ಸ್ಥಳ** : ಗುರು ರಾಮಲಿಂಗೇಶ್ವರ ಗುಡಿಯ ಮುಂಭಾಗದಲ್ಲಿ

**ಕಾಲ** : ಕ್ರಿ.ಶ.೧೨-೧೩ನೇ ಶತಮಾನ

**ಪ್ರಕಟಣೆ**: –

**ವಸ್ತು** : ಕಪ್ಪು

ಈ ವೀರಗಲ್ಲು ಲಿಂಗಸೂಗೂರು ತಾಲೂಕಿನ ಬೊಮ್ಮನಹಾಳ ಗ್ರಾಮದ ಗುರು ರಾಮಲಿಂಗೇಶ್ವರ ಗುಡಿಯ ಮುಂಭಾಗದಲ್ಲಿದೆ. ಇದರ ಕಾಲ ೧೨-೧೩ನೇ ಶತಮಾನದ ವೀರಗಲ್ಲಿನಲ್ಲಿ ವೀರನು ಎಡಗೈಯಲ್ಲಿ ಬಿಲ್ಲನ್ನು ಹಿಡಿದ್ದಾನೆ. ಬಲಗೈಯಿಂದ ಬಾಣ ಬಿಡುತ್ತಿರುವ ದೃಶ್ಯವಿದೆ. ತಲೆ ಮೇಲೆ ಕೂದಲು ಕಟ್ಟಿದ್ದರ ಚಿತ್ರವನ್ನು ವೀರಗಲ್ಲಿನಲ್ಲಿ ಕಾಣುತ್ತವೆ. ವೀರನು ತನ್ನ ಬಲಗಾಲನ್ನು ಮುಂದೆ ಇಟ್ಟು ವೈರಿಯ ಕಡೆಗೆ ತನ್ನ ಬತ್ತಳಿಕೆಯಿಂದ ಬಾಣ ಬಿಡುತ್ತಿದ್ದಾನೆ. ವೀರನು ಕಚ್ಚೆ ಪಂಚೆಯನ್ನು ಧರಿಸಿದ್ದು, ಕಾಲಲ್ಲಿ ಕಡಗವನ್ನು ಧರಿಸಿ ಮುಡಿಯನ್ನು ಕಟ್ಟಿದ್ದಾನೆ. ವೀರನು ಕಾಳಗದಲ್ಲಿ ಮರಣ ಹೊಂದಿದ್ದ ಚಿತ್ರಣವಿದೆ. ಎರಡನೆ ಪಟ್ಟಿಕೆಯಲ್ಲಿ ಅಪ್ಸರೆಯರು ಆ ವೀರನನ್ನು ಒಯ್ಯುತ್ತಿರುವ ದೃಶ್ಯವಿದೆ. ಮೂರನೆ ಪಟ್ಟಿಕೆಯಲ್ಲಿ ವೀರನು ಕೈಮುಗಿದು ಕುಳಿತುಕೊಂಡಿದ್ದಾನೆ. ಅವನ ಪಕ್ಕದಲ್ಲಿಯೇ ಶಿವಲಿಂಗದ ಚಿತ್ರವಿದೆ.

## ೩.೩. ಮಾಸ್ತಿಗಲ್ಲುಗಳು

ಒಬ್ಬ ಪತಿವ್ರತೆಯಾದ ಹೆಂಗಸು ತನ್ನ ಗಂಡನು ಸತ್ತು ಹೋದರೆ ಸಹಗಮನ ಮಾಡಿದ ಸಂಗತಿಯನ್ನು ಸೂಚಿಸುವ ಸ್ಥಳದಲ್ಲಿ ನೆಟ್ಟಕಲ್ಲಿಗೆ 'ಮಾಸ್ತಿಕಲ್ಲು' ಎಂದು ಹೆಸರು.[೪೪] "ಮಹಾಸತಿ" "ಮಾಸ್ತಿ" "ಮಹಾಸತಿಕಲ್ಲು" ಇವುಗಳಲ್ಲಿ ಅದೇ ಅರ್ಥವನ್ನು ಒಳಗೊಂಡಿದೆ.[೪೫]

ಮಾಸ್ತಿ ಎರಡು ಬಗೆಯಾಗಿವೆ. ೧. ಸಹಗನ(ಸಹಮರಣ), ೨. ಅನುಗಮನ(ಅನುಮರಣ). ಗಂಡನ ಶವದೊಂದಿಗೆ ಚಿತೆಯೇರುವುದು ಸಹಗಮನ. ಸತ್ತ ಗಂಡನ ಹಿಂದೆ ಹೆಂಡತಿ ಸತ್ತು ಇನ್ನೊಂದು ಲೋಕದಲ್ಲೂ ಸಹ ಭಾಗಿಯಾಗಬೇಕೆನ್ನುವುದೇ ಆ ನಂಬಿಕೆಯ ಮುಖ್ಯ ಅಂಶ. ಗಂಡ ದೂರದ ಸ್ಥಳದಲ್ಲಿ ಮಡಿದರೆ ಅವನ ಪ್ರಿಯವಸ್ತುವನ್ನು ಹಿಡಿದು ಚಿತೆಯೇರುವುದು ಅನುಗಮನ. ಗಂಡ ಯಾವುದೇ ರೀತಿಯಿಂದ ಸತ್ತಿರಲಿ ಚಿತೆಯೇರಬೇಕೆಂಬುದು ಇಲ್ಲಿನ ಪರಂಪರೆ.[೪೬]

ಐದು ಅಥವಾ ಆರನೆಯ ಶತಮಾನದ ಕವಡಿ ಶಾಸನ ಬಹುಶಃ ಕದಂಬ ರವಿವರ್ಮನ ರಾಣಿಯ ಸಹಗಮನವನ್ನು ಸೂಚಿಸುತ್ತಿದ್ದು, ನಮ್ಮ ನಾಡಿನಲ್ಲಿಯ ಈ ಪದ್ಧತಿಯನ್ನು ಕುರಿತು ಪ್ರಥಮ ದಾಖಲೆಯಾಗಿದೆ. ಜೈನ ಪರಂಪರೆಯಲ್ಲಿ ಪತಿಯ ಮರಣ ನಂತರ ಸತಿಯು ಚಿತೆಯ ಪ್ರವೇಶ ಮಾಡುವುದು ತದ್ವಿರುದ್ಧ. ಹೀಗಿದ್ದರೂ ಗುಂಡಬ್ಬೆ

ಚಿತಾಗ್ನಿಯಲ್ಲಿ ಮಡಿದಿರುವುದು ಲೋಕ ವಿಖ್ಯಾತವಾಗಿದೆ. ಗ್ರೀಕ್ ರಾಜರ ಆಳ್ವಿಕೆಯಲ್ಲೂ ಸತಿಯ ಘಟನೆಗಳು ನಡೆದಿರಬಹುದು ಎನ್ನುವುದಕ್ಕೆ ಅಲ್ಲಿಯ ಪ್ರಾಚೀನ ಐತಿಹ್ಯವೊಂದರಲ್ಲಿ ಎವಡ್ನೆ ಎನ್ನುವ ರಾಣಿ ತನ್ನ ಗಂಡನ ಚಿತೆಯಲ್ಲಿ ಹಾರಿಕೊಂಡು ಪ್ರಾಣಬಿಡುವ ಘಟನೆಯ ಉಲ್ಲೇಖವನ್ನು ಗಮನಿಸಬಹುದು.[೪೭]

**ಮಾಸ್ತಿ ಹೋಗುವ ಬಗೆ**

ಸಾಮಾನ್ಯವಾಗಿ ಊರೊಡೆಯನ ಅಪ್ಪಣೆ ಪಡೆದು, ಹಳದಿ ಸೀರೆಯನ್ನುಟ್ಟು, ಒಂದು ಕೈಯಲ್ಲಿ ಲಿಂಬೆಹಣ್ಣು, ಇನ್ನೊಂದು ಕೈಯಲ್ಲಿ ಕನ್ನಡಿ ಹಿಡಿದು, ದಂಡೆ, ಬಾಸಿಂಗ, ಕಾಲ ಕುಪ್ಪಸ, ಮೊಲೆಗಟ್ಟುಗಳಿಂದ ಸಿಂಗಿರಿಸಿಕೊಂಡು, ಬೀದಿಯಲ್ಲಿ ಕಾಲುನಡಿಗೆ ಇಲ್ಲವೆ ಕುದುರೆ ಪಲ್ಲಕ್ಕಿಗಳನ್ನೇರಿ ಮಾಸ್ತಿಯಾಗುವಳು ಬರುತ್ತಿದ್ದಳು. ಆಗ ವೀರರು ಅವಳಿಂದ ಲಿಂಬೆ, ಮುಡಿಯ ಹೂ ಪಡೆಯುತ್ತಿದ್ದರು. ಆಮೇಲೆ ಗೌರಿವ್ರತ ಪೂರೈಸಿ, ಎಣ್ಣೆಯಲ್ಲಿ ಮುಖ ನೋಡಿ, ಕೊಂಡದ ಹತ್ತಿರ ಹಿಡಿದ ತೆರೆಗೆ ಎದುರಾಗಿ ಸತಿ ಕಲ್ಲ ಮೇಲೆ ನಿಲ್ಲುತ್ತಿದ್ದಳು, ಕಟ್ಟಿಗೆ ಕರ್ಪೂರಗಳಿಂದ ಬೆಂಕಿ ಉಜ್ವಲಗೊಳ್ಳುತ್ತಿದ್ದಂತೆ ಆಕೆ ಚಿತೆಯನ್ನು ಪ್ರವೇಶಿಸುವುದೇ ತಡ, ಆಗ ಜನ ಗೋಳಿಡುತ್ತಿದ್ದರೆಂದೂ ಜಯಘೋಷ ಮಾಡುತ್ತಿದ್ದರೆಂದೂ ಉಲ್ಲೇಖಗಳಿವೆ. ಉದಾಹರಣೆಗೆ ದೇಕಬ್ಬೆ ಬೆಳತೂರು ಶಾಸನ ಕ್ರಿ.ಶ.೧೦೫೭.[೪೮] ಹೀಗೆ ಮಡಿದವರ ಹೆಸರಿನಲ್ಲಿ ಸ್ಮಾರಕಗಳನ್ನು ಅವರ ಸಂಬಂಧಿಕರು ನಿರ್ಮಿಸುತ್ತಿದ್ದರು. ಮುಂದೆ ಬ್ರಿಟಿಷರ ಕಾಲದಲ್ಲಿಯೂ ಈ ಪದ್ಧತಿ ಸಾಗಿ ಬಂದುದ್ದನ್ನು ಬಾರ್ಬೋಸ್(೧೫೦೦), ನ್ಯೂನಿಝ್, ಸೀಜರ್ ಫ್ರೆಡರಿಕ್(೧೫೬೧), ಪಿಯಟ್ರಯಲ್ಲೇವಲ್ಲೆ(೧೬೨೩) ಮೊದಲಾದವರ ದಿನಚರಿಗಳು ತಿಳಿಸುತ್ತವೆ. ಬ್ರಾಹ್ಮಣ ಸ್ತ್ರೀಗೆ ಸಹಗಮನ ನಿಷಿದ್ಧವಿದ್ದರೂ ತಲಕಾಡಿನ ಬ್ರಾಹ್ಮಣತಿಯೊಬ್ಬಳು ಅಗ್ನಿ ಪ್ರವೇಶಕ್ಕೆ ಹಟ ಹಿಡಿದಾಗ ಆ ಬಗ್ಗೆ ಮೈಸೂರು ಸರಕಾರಕ್ಕೆ ಬರೆದ ಅರ್ಜಿ ಅದಕ್ಕೆ ನೀಡಿದ ಒಪ್ಪಿಗೆಗಳು ಎಮ್.ಎ.ಆರ್. ೧೯೩೮ರಲ್ಲಿ ಪ್ರಕಟವಾಗಿದೆ. ಕರ್ನಾಟಕದಲ್ಲಿ ವೀರಯುಗದೊಡನೆ(೯–೧೦ನೇ ಶತಮಾನ) ಪ್ರಬಲಗೊಂಡ ಸಹಗಮನ ಪದ್ಧತಿಯು ಹೊಯ್ಸಳ ವಿಜಯನಗರ ಸಾಮ್ರಾಜ್ಯಗಳ ಕಾಲದಲ್ಲಿ ತನ್ನ ತುದಿಯನ್ನು ಮುಟ್ಟಿತು.[೪೯]

ಪ್ರಸ್ತುತ ಲಿಂಗಸೂಗೂರು ತಾಲೂಕಿಗೆ ಸೀಮಿತವಾಗಿರಿಸಿ ನೋಡಿದಲ್ಲಿ, ಕ್ಷೇತ್ರಕಾರ್ಯ ಕೈಗೊಂಡಾಗ ಸುಮಾರು ಮಾಸ್ತಿಗಲ್ಲುಗಳು ದೊರಕಿವೆ. ಇವುಗಳನ್ನು ಆಧಾರವಾಗಿಟ್ಟುಕೊಂಡು ಲಿಂಗಸೂಗೂರು ತಾಲೂಕಿನಲ್ಲಿ ಮಹಾಸತಿ ಆಚರಣೆ ಇತ್ತು ಎಂದು ಕಟ್ಟಿಕೊಡಲು ಸಾಕ್ಷಿಯಾಗಿ ನಿಂತಿದೆ.

**ಗ್ರಾಮ** : ಮುದಗಲ್ **ಸ್ಥಳ** : ಮುದಗಲ್ ಪುರಸಭೆ ಮುಂದೆ

**ಕಾಲ** : ಕ್ರಿ.ಶ.೧೭–೧೮ನೇ ಶತಮಾನ **ವಸ್ತು** : ಕಪ್ಪು ಶಿಲೆ

**ಪ್ರಕಟಣೆ**: –

ಲಿಂಗಸೂಗೂರು ತಾಲೂಕಿನ ಮುದಗಲ್ ಪುರಸಭೆಯ ಮುಂದೆ ಈ ಮಾಸ್ತಿಕಲ್ಲು ಇದೆ. ಗಂಡ ಮಡಿದಾಗ ಅವನ ಜತೆಯಲ್ಲಿಯೇ ಹೆಂಡತಿ ಚಿತೆ ಪ್ರವೇಶ ಮಾಡಿ ತನ್ನನ್ನು ಸಮರ್ಪಿಸಿಕೊಳ್ಳುವ ಹೆಣ್ಣಿನ ನೆನಪಿಗಾಗಿ ನೆಡುವ ಸ್ಮಾರಕವೇ ಮಾಸ್ತಿಗಲ್ಲು. ಮಹಿಳೆಯ ತನ್ನ ಕೈಯನ್ನು ತೋರಿಸಿದ್ದಾಳೆ. ಅದರ ಮೇಲೆ ಒಂದು ಅಗ್ನಿ ಕುಂಡದ ಚಿತ್ರಣವಿದೆ. ಬಲಗೈ ತೋಳನ್ನು ಮೇಲೆತ್ತಿ ತೋರುವಂತೆ ಎಡಗೈನ ಹೆಬ್ಬೆರಳುಗಳ ನಡುವೆ ಹಣ್ಣು ಹಿಡಿದಿರುವ ಚಿತ್ರವಿದೆ.

**ಗ್ರಾಮ** : ಮಾವಿನ ಬಾವಿ **ಸ್ಥಳ** : ಗ್ರಾಮದ ಈಶ್ವರ ಗುಡಿಯ ಎದುರುಗಡೆ

**ಕಾಲ** : ಕ್ರಿ.ಶ.೧೭–೧೮ನೇ ಶತಮಾನ **ವಸ್ತು** : ಕಪ್ಪು ಶಿಲೆ

**ಪ್ರಕಟಣೆ**: ಅಪ್ರಕಟಿತ

ಲಿಂಗಸೂಗೂರು ತಾಲೂಕಿನ ಮಾವಿನಬಾವಿ ಗ್ರಾಮದ ಈಶ್ವರಿ ಗುಡಿಯ ಎದುರುಗಡೆ ವೀರ–ಮಾಸ್ತಿಶಿಲ್ಪವು ಇದೆ. ಈ ಶಿಲ್ಪವು ೧೭–೧೮ನೇ ಶತಮಾನದಾಗಿದೆ. ಈ ಮಾಸ್ತಿಕಲ್ಲಿನ ಕೆಳಭಾಗದಲ್ಲಿ ವೀರ ಮತ್ತು ಆತನ ಹೆಂಡತಿ ಕುಳಿತಿದ್ದಾರೆ. ಮಧ್ಯದ ಹಂತದಲ್ಲಿ ವೀರ ಸ್ವರ್ಗಸ್ತನಾದ ಮೇಲೆ ಆತನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಎತ್ತಿಕೊಂಡು ಹೋಗುವ ಸನ್ನಿವೇಶವಿದೆ. ಇದರ ಮೇಲೆ ಈಶ್ವರ ಲಿಂಗವಿದ್ದು, ಇದಕ್ಕೆ ಎದುರಾಗಿ ವೀರ ಕೈಮುಗಿದು ಕುಳಿತುಕೊಂಡಿದ್ದಾನೆ. ಈ ಲಿಂಗಕ್ಕೆ ಕಾಳಾಮುಖಮುನಿ ಪೂಜೆ ಸಲ್ಲಿಸುತ್ತಿದ್ದಾನೆ.

**ಗ್ರಾಮ** : ಆನೆ ಹೂಸೂರು **ಸ್ಥಳ** : ಕುಲಕರ್ಣಿಯವರ ಓಣಿಯಲ್ಲಿನ ಬೇವಿನ ಮರದ ಕೆಳಗೆ

**ಕಾಲ** : ಕ್ರಿ.ಶ.೧೨–೧೩ನೇ ಶತಮಾನ **ವಸ್ತು** : ಕಪ್ಪು ಶಿಲೆ

**ಪ್ರಕಟಣೆ**: –

ಲಿಂಗಸೂಗೂರು ತಾಲೂಕಿನ ಆನೆಹೊಸೂರು ಗ್ರಾಮದಲ್ಲಿರುವ ಕುಲಕರ್ಣಿಯವರ ಓಣಿಯಲ್ಲಿ ಬೇವಿನ ಮರದ ಕೆಳಗೆ ಇರುವ ವೀರಗಲ್ಲಿನಲ್ಲಿ ವೀರಮಹಿಳೆಯು ಕತ್ತಿಯನ್ನು ಹಿಡಿದು ಹುಲಿಯ ಜೊತೆ ವೀರಾವೇಶದಿಂದ ಹೋರಾಟ ಮಾಡುತ್ತಿರುವ ಕೆತ್ತನೆಗಳಿವೆ. ಅವಳ ಹಿಂಭಾಗದಲ್ಲಿ ಆಕಳುಗಳು ಇವೆ. ಇದರ ಮೇಲಿನ ಹಂತದಲ್ಲಿ ಮಹಿಳೆಯನ್ನು

ಇಬ್ಬರು ದೇವತಾ ಸ್ತ್ರೀಯರು ಸ್ವರ್ಗಕ್ಕೆ ಒಯ್ಯುತ್ತಿದ್ದಾರೆ. ಅದರ ಮೇಲಿನ ಭಾಗದಲ್ಲಿ ಶಿವಲಿಂಗದ ಮುಂದೆ ಮಹಿಳೆಯು ಅಂಜಲಿ ಮುದ್ರೆಯಲ್ಲಿದ್ದಾಳೆ. ಅವಳ ಎರಡು ಕಡೆಗಳಲ್ಲಿ ಸೂರ್ಯ-ಚಂದ್ರರನ್ನು ತೋರಲಾಗಿದೆ.

### ೩.೪. ಪ್ರಶಸ್ತಿ ಶಾಸನಗಳು

ಅರಸನ ಬಿರುದಾವಳಿಗಳು ಮತ್ತು ದಿಗ್ವಿಜಯಗಳನ್ನು ತಿಳಿಸುವ ಶಾಸನಗಳಲ್ಲಿ ಪ್ರಶಸ್ತಿ ಶಾಸನಗಳು ಪ್ರಸ್ತುತ ಲಿಂಗಸೂಗೂರು ತಾಲೂಕಿನ ಪ್ರದೇಶದಲ್ಲಿ ಬಹುಮನಿ ಅರಸರ ಕಾಲದ ಹಲವು ಪ್ರಶಸ್ತಿ ಶಾಸನಗಳು ಲಭ್ಯವಾಗಿವೆ. ಅವುಗಳ ಮಾಹಿತಿ ಕೆಳಗಿನ ಶಾಸನಗಳಲ್ಲಿ ದಾಖಲಿಸಲಾಗಿದೆ.

ಲಿಂಗಸೂಗೂರು ತಾಲೂಕಿನ ಮುದಗಲ್ ಪಟ್ಟಣದ ಕೋಟೆ ಗೋಡೆಯಲ್ಲಿರುವ ಕ್ರಿ.ಶ.೧೫೧೧ರ ಶಾಶನ ಇಬ್ರಾಹಿಂ ಆದಿಲ್‌ಷಾನ ಬಿರುದುಗಳನ್ನು ಹೇಳುತ್ತವೆ.[೫೦] ಮುದಗಲ್ ಕೋಟೆಯಲ್ಲಿರುವ ಮೂರನೆಯ ಶಾಸನವು ಮಲಿಕಮುರಾದನ ಬಿರುದುಗಳನ್ನು ಹೇಳುತ್ತದೆ.[೫೧] ಅದೇ ಕೋಟೆಯಲ್ಲಿರುವ ೬೭ನೇ ಶಾಸನವು ಮಲಿಕಮುರಾದನ ಬಿರುದುಗಳನ್ನು ಹೇಳುತ್ತವೆ.[೫೨] ಅದೇ ಜಾಗದಲ್ಲಿ ಬುರುಜಿನ ಮೇಲೆ ಇಡಲಾದ ತೋಪಿನ ಮೇಲಿನ ಕ್ರಿ.ಶ. ೧೫೬೮ರ ಶಾಸನ ಮಲಿಕಮುರಾದನ ಬಿರುದುಗಳನ್ನು ಹೇಳುತ್ತದೆ.[೫೩] ಮುದಗಲ್ ಕೋಟೆಯ ಬಾಗಿಲ ಬಲಗೋಡೆಯ ಮೇಲಿನ ಕ್ರಿ.ಶ.೧೬೧೦ರ ಶಾಸನವು ಮಲಿಕಮುರಾದನ ಬಿರುದುಗಳನ್ನು ಹೇಳುತ್ತವೆ.[೫೪] ಮುದಗಲ್ ಕೋಟೆ ಬಾಗಿಲ ಮಧ್ಯದ ಕಂಬದ ಮೇಲೆ ಇರುವ ಶಾಸನವು ಮಲಿಕ ಮುರಾದನ ಬಿರುದನ್ನು ಹೇಳುತ್ತದೆ.[೫೫] ಮುದಗಲ್ ಕೋಟೆಯ ಎಡಗೋಡೆಯ ಮೇಲಿನ ೧೬೧೦ರ ಶಾಸನವು ಮುರಾದನ ಬಿರುದನ್ನು ಹೇಳುತ್ತದೆ.[೫೬] ಮುದಗಲ್ ಕೋಟೆಯ ಅಗಸೆಯ ಪಶ್ಚಿಮಕ್ಕೆ ಹೊರಕೋಟೆಯ ಒಳಗೆ ಬರೆದಿರುವ ಕ್ರಿ.ಶ.೧೫೯೦ರ ಶಾಸನವು ಮುರಾದನ ಬಿರುದನ್ನು ಹೇಳುತ್ತದೆ.[೫೭] ಮುದಗಲ್ ಕೋಟೆಯ ಪಶ್ಚಿಮಕ್ಕೆ ಕೋಟೆಯ ಮೇಲಿನ ಕ್ರಿ.ಶ.೧೫೯೦ರ ಶಾಸನವು ಮಲ್ಲಿಕ್ ಮುರಾದನ ಬಿರುದನ್ನು ಹೇಳುತ್ತದೆ.[೫೮] ಅದೇ ಕೋಟೆಯ ನೈರುತ್ಯಕ್ಕಿರುವ ಕೊತ್ತಳದ ಬಳಿಯ ಶಾಸನ ಮುರಾದನ ಬಿರುದನ್ನು ಹೇಳುತ್ತದೆ.[೫೯] ಹೊರಕೋಟೆಯ ಒಳಭಾಗದಲ್ಲಿ ಇನ್ನೊಂದು ಬುರುಜಿನ ದಕ್ಷಿಣದಲ್ಲಿರುವ ಶಾಸನವು ಮುರಾದನ ಬಿರುದನ್ನು ಹೇಳುತ್ತದೆ.[೬೦] ಅಲ್ಲಿರುವ ಇನ್ನೊಂದು ಬುರುಜಿನ ಶಾಸನವ ಮಲ್ಲಿಕ್ ಮುರಾದನ ಬಿರುದನ್ನು ಹೇಳುತ್ತದೆ.[೬೧] ಕೋಟೆಯ

ನೈರುತ್ಯಕ್ಕಿರುವ ಇನ್ನೊಂದು ಬುರುಜಿನಲ್ಲಿರುವ ಶಾಸನ ಮಲ್ಲಿಕ್ ಮುರಾದನ ಬಿರುದನ್ನು ಹೇಳುತ್ತದೆ.[೨] ಅದೇ ಕೋಟೆಯ ಅದೇ ಸ್ಥಳದಲ್ಲಿನ ಇನ್ನೊಂದು ಶಾಸನ ಮಲ್ಲಿಕ್ ಮುರಾದನ ಬಿರುದನ್ನೇ ಹೇಳುತ್ತದೆ.[೬೩] ಅದೇ ಸ್ಥಳದ ಆಗ್ನೇಯಕ್ಕೆ ಕೋಟೆಯ ಬುರುಜಿನಲ್ಲಿರುವ ಶಾಸನ ಮಲ್ಲಿಕ ಮುರಾದನ ಬಿರುದನ್ನು ಹೇಳುತ್ತದೆ.[೬೪] ಅದೇ ಸ್ಥಳದಲ್ಲಿರುವ ಶಾಸನ ಮಲ್ಲಿಕ್ ಮುರಾದನ ಬಿರುದನ್ನು ಹೇಳುತ್ತದೆ.[೬೫]

ಕಲ್ಯಾಣ ಚಾಲುಕ್ಯ ಅರಸರ ಕಾಲದ ಪ್ರಶಸ್ತಿ ಶಾಸನಗಳು ಲಭ್ಯವಾಗಿವೆ. ಅವುಗಳ ಮಾಹಿತಿ ಕೆಳಗಿನ ಶಾಸನಗಳಲ್ಲಿ ದಾಖಲಿಸಲಾಗಿದೆ. ಲಿಂಗಸೂಗೂರು ತಾಲೂಕಿನ ಕಸಭಾ ಲಿಂಗಸೂಗೂರಿನ ಕಲ್ಲೇಶ್ವರ ದೇವಾಲಯದ ಕ್ರಿ.ಶ.೧೧೨೪ರ ಶಾಸನದಲ್ಲಿ ಆರನೇ ವಿಕ್ರಮಾದಿತ್ಯನ ರಾಣಿಯಾದ ಅಬ್ಬಲದೇವಿಯ ಬಿರುದುಗಳನ್ನು ಹೇಳುತ್ತದೆ.[೬೬] ಲಿಂಗಸೂಗೂರು ತಾಲೂಕಿನ ಕಂಡೆಕಲ್ ಗ್ರಾಮದ ಊರಹೊರಗಿನ ಕುಣಿಸೋಮೇಶ್ವರ ದೇವಾಲಯದ ಕ್ರಿ.ಶ.೧೧೯೧ರ ಶಾಸನವು ಕದಂಬಕುಲದ ಬಿಜ್ಜರಸನ ಬಿರುದುಗಳನ್ನು ದಾಖಲಿಸುತ್ತದೆ.[೬೭]

### ೩.೫. ಇತರೆ ಶಾಸನಗಳು

೧. ಲಿಂಗಸೂಗೂರು ತಾಲೂಕಿನ ಜಲದುರ್ಗದ ಮೇಲೆ ಸಂಗಮೇಶ್ವರ ಗದ್ದುಗೆ ಮುಂದೆ ಇರುವ ಶಾಸನವು ನಾಗರಿ ಮತ್ತು ಪರ್ಶಿಯಾ ಲಿಪಿ ಮತ್ತು ಹಿಂದಿ ಮತ್ತು ಪರ್ಷಿಯಾ ಭಾಷೆಯಲ್ಲಿದೆ. ಹಿಜಿರಾ ೧೧೧೧ ಎಂದರೆ ೧೬೯೯–೧೭೦೦ಕ್ಕೆ ಸರಿಹೊಂದುತ್ತಿದೆ. ಈ ಶಾಸನದಲ್ಲಿ ಔರಂಗಜೇಬ ಅಲಮ್‌ಗೀರ್ ಚಕ್ರವರ್ತಿಯ ಖಾನ್‌ಜಾದ್(ಒಡೆಯ ಮನೆಯಲ್ಲಿ ಹುಟ್ಟುವ ಗುಲಾಂ ಸಂತತಿ)ನಾದ ಚಿತ್ರಾಂಗದ ಬುಂದೇಲನ ಪುತ್ರ ತಕೂಕ್ ಸಿಂಗನನ್ನು ಉಲ್ಲೇಖಿಸುತ್ತದೆ.[೬೮]

೨. ಲಿಂಗಸೂಗೂರು ತಾಲ್ಲೂಕಿನಿಂದ ೧೯ ಕಿ.ಮೀ. ಅಂತರದ ಉತ್ತರ ದಿಕ್ಕಿನಲ್ಲಿರುವ ಗುರಗುಂಟ ಬಸವಣ್ಣ ಗುಡಿಯ ಶಾಸನ ತ್ರುಟಿತವಾಗಿದೆ. ಕ್ರಿ.ಶ.ಸು.೧೬ನೆಯ ಶತಮಾನಕ್ಕೆ ಸರಿಹೊಂದುತ್ತದೆ. ಈ ಶಾಸನದಲ್ಲಿ ಆ ಊರಿನ ಚಾವಡಿಯಲ್ಲಿ ದೇವಲಾಕಾಯ(ಉತ್ಸವ ಮುಂತಾದವು) ನಿಂತು ಹೋಗಿದ್ದು, ಅದು ಮೊದಲಿನಂತೆ ನಡೆಯಬೇಕೆಂದು ತೀರ್ಮಾನಿಸಿದ ವಿಷಯವು ಶಾಸನಗದಲ್ಲಿ ಒಳಗೊಂಡಿರುತ್ತದೆ.[೬೯]

೩. ಗುರಗುಂಟ ಗ್ರಾಮದ ಬಸವಣ್ಣ ಗುಡಿಯ ಹತ್ತಿರದಲ್ಲಿ ಅದೇ ಸ್ಥಳದಲ್ಲಿ ಇನ್ನೊಂದು ಶಾಸನದ ಶಾಸನ ಕಾಲ ಕ್ರಿ.ಶ.ಸು.೧೬ನೆಯ ಶತಮಾನಕ್ಕೆ ಸರಿಹೊಂದುತ್ತದೆ. ದೇವರ

ಮೆರವಣಿಗೆಗಾಗಿ ಚಾವಡಿ ಮುಂದಿನ ಜಾಗದಲ್ಲಿ ದಾರಿಯನ್ನು ಬಿಟ್ಟುಕೊಟ್ಟು, ಚಾವಡಿಯ ಜಾಗದಲ್ಲಿ ಮೊದಲಿನಂತೆ ದೇವರಕಾರ್ಯ(ಉತ್ಸವ ಮುಂತಾದವು) ನಡೆಸಬೇಕೆಂದು ತೀರ್ಮಾನಿಸಿದ ವಿಷಯವನ್ನು ಈ ಶಾಸನ ತಿಳಿಸುತ್ತದೆ.[೨೦]

೪. ಲಿಂಗಸೂಗೂರು ತಾಲೂಕಿನ ಕೋಟೆ ಹೊಳೆಯ ಬದಿಯ ರಾಮಲಿಂಗೇಶ್ವರ ದೇವಾಲಯದ ಬಳಿ ಬಿದ್ದಿರುವ ಕಲ್ಲು ಇದು ತ್ರುಟಿತವಾಗಿದೆ. ಈ ಶಾಸನದಲ್ಲಿರುವ ಲಿಪಿಗಳು ಬಹುತೇಕ ನಾಶವಾಗಿದೆ. ವಿವರಗಳು ಸ್ಪಷ್ಟವಿಲ್ಲ. ಲಿಪಿಯ ದೃಷ್ಟಿಯಿಂದ ಸು.ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರುತ್ತದೆ.[೨೧]

೫. ಲಿಂಗಸೂಗೂರು ತಾಲೂಕಿನ ಚುಕ್ಕೇನ ಹಟ್ಟಿ ಬಸ್ ನಿಲ್ದಾಣದ ಸಮೀಪ ಗದ್ದುಗೆಯ ಚೌಳಿಗೋಡೆಯಲ್ಲಿನ ಶಾಸನದಲ್ಲಿ ಕಾಲವು ಶಕವರ್ಷ ೧೫೬೪ನೆಯ (ಕ್ರಿ.ಶ.೧೬೪೩) ಚಿತ್ರಭಾನು ಸಂವತ್ಸರದಲ್ಲಿ ಯಿಬರಾಯ(ಇಬ್ರಾಯಿಂ) ಎಂಬುವನು ಏನನ್ನೋ ದಾನ ಬಿಟ್ಟ ವಿವರವಿದೆ. ಯಾರಿಗೆ ಎಂಬ ವಿವರವಿಲ್ಲ.[೨೨]

೬. ಲಿಂಗಸೂಗೂರು ತಾಲೂಕಿನ ಹಿರೇನಗ್ನೂರಿಲ್ಲಿರುವ ಅಶ್ವತ್ಥಕಟ್ಟೆಯ ಕೆಳಗಿನ ಬಂಡೆಯ ಮೇಲಿನ ಶಾಸನ ತ್ರುಟಿತವಾಗಿದೆ. ಶಾಸನೋಕ್ತ ಕಾಲವು ಶಾತವಾಹನ ಶಕವರ್ಷ ೧೫೬೪, ಚಿತ್ರಭಾನು ಸಂವತ್ಸರ, ಕಾರ್ತಿಕ, ಸು.೫ ಎಂದಿದ್ದು, ಇದು ಕ್ರಿ.ಶ.೧೮-೧೦-೧೬೪೨ರ ಮಂಗಳವಾರಕ್ಕೆ ಸಮವಾಗುತ್ತದೆ. ಯಭರಾಮಪುರದ ಗವುಡ ಲಿಂಗಿರೆಪಿ ಮತ್ತು ಶೇಕ್‌ಕಾಸಿಮ(ಸೆಖಕಸಿಮ) ಮುಂತಾದವರು ನಾಗಪ್ಪ ಎಂಬುವವನಿಗೆ ಬಿರಾಡವನ್ನು ಬಿಟ್ಟಂತೆ ಹೇಳಿದೆ.[೨೩]

೭. ಲಿಂಗಸೂಗೂರು ತಾಲೂಕಿನ ಸಂಗಮೇಶ್ವರ ಗುಡಿ ಒಳಗಿನ ಬಲಕಂಬದ ಮೇಲಿನ ಶಾಸನದಲ್ಲಿರುವ ಲಿಪಿಯ ಆಧಾರದಿಂದ ಈ ಶಾಸನದ ಕಾಲವನ್ನು ಕ್ರಿ.ಶ.೧೩ನೆಯ ಶತಮಾನವೆನ್ನಬಹುದು. ಒಂದು ಗೋಡೆಗೆ (ಧ್ಯಾನದ ಒಂದು ಅಳತೆ) ನಾಲ್ಕು ವರಹ ಹೊನ್ನು ಮತ್ತು ಒಂದು ವರ್ಷಕ್ಕೆ ಹತ್ತು ಹೊನ್ನು ಎಂದು ಹೇಳುತ್ತದೆ.[೨೪]

೮. ಲಿಂಗಸೂಗೂರು ತಾಲೂಕಿನ ಮಸ್ಕಿ ಗ್ರಾಮದ ಪ್ರವಾಸಿ ಮಂದಿರದಲ್ಲಿನ ಹನ್ನೆರಡನೆಯ ಶಾಸನವು ಬಹಳ ತ್ರುಟಿತವಾಗಿದೆ. ಕಾರ್ತಿಕ ಶುದ್ಧ ಪಂಚಮಿಯಂದು ಶಾಸನ ಹಾಕಿಸಿದ್ದು, ಇದು ಕಲ್ಯಾಣ ಚಾಳುಕ್ಯ ಅರಸ ಜಗದೇಕಮಲ್ಲದೇವನ ಅವಧಿಯದ್ದಾಗಿದೆ. ಇದರಲ್ಲಿನ ದಾನದ ಭಾಗ ಬಹಳ ಸವೆದು ಹೋಗಿದೆ. ಶಾಪಾಶಯದ ಭಾಗ ಸಂಪ್ರದಾಯದಂತೆ ಬಂದಿದೆ. ಪೊಟ್ಟಳಕೆರೆ, ಮಹೇಶ್ವರದೇವ ಇವರ ಉಲ್ಲೇಖ ಬಂದಿದೆ.[೨೫]

೯. ಲಿಂಗಸೂಗೂರು ತಾಲೂಕಿನ ಮಸ್ಕಿ ಗ್ರಾಮದ ಪ್ರವಾಸಿ ಮಂದಿರದಲ್ಲಿರುವ ಇನ್ನೊಂದು ತುಂಡು ಶಾಸನದಲ್ಲಿ ಮಸ್ಕಿಯ ದಕ್ಷಿಣ ಭಾಗದಲ್ಲಿನ ಭೂಮಿಯನ್ನು ಪರೆಕಾರ ಮುಂತಾದವರಿಗೆ ದಾನ ಬಿಟ್ಟಂತೆ ತಿಳಿದುಬರುತ್ತದೆ. ಲಿಪಿಯ ದೃಷ್ಟಿಯಿಂದ ಶಾಸನದ ಕಾಲ ಕ್ರಿ.ಶ.೧೨ನೆಯ ಶತಮಾನವಾಗುತ್ತದೆ.[೬೬]

**ಅಡಿಟಿಪ್ಪಣಿಗಳು**

೧. ಡಾ.ಎಸ್.ಎಂ.ಹಿರೇಮಠ, **ಶಾಸನ ಪರಿಭಾಷೆ,** ವಿದ್ಯಾನಿಧಿ ಪ್ರಕಾಶನ, ೨೦೦೫, ಪು.೧೪೬.

೨. ಡಾ.ನಾಯಕರ ಹುಲುಗಪ್ಪ, **ಶಾಸನಗಳ ಪ್ರಕಾರ ಮತ್ತು ಅವುಗಳ ಮಹತ್ವ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧, ಪು.೦೫.

೩. ಎಸ್.ಎಸ್.ಭಗವತಿ, ಎಚ್.ಎಸ್.ಮೇಲಿನಮನಿ, **ಕನ್ನಡ ಶಾಸನಗಳ ಅಧ್ಯಯನ,** ವಿದ್ಯಾನಿಧಿ ಪ್ರಕಾಶನ, ೨೦೦೪, ಪು.೧೨೧.

೪. ಡಾ.ದೇವರಕೊಂಡಾರೆಡ್ಡಿ(ಸಂ), **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೭, ರಾಯಚೂರು ಜಿಲ್ಲೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು.೧೩೦.

೫. ಅದೇ, (ಶಾ.ಸಂ.೭) ಪು.೧೩೮.

೬. ಅದೇ, (ಶಾ.ಸಂ.೮) ಪು.೧೩೯.

೭. ಅದೇ, (ಶಾ.ಸಂ.೧೦) ಪು.೧೪೩.

೮. ಅದೇ, (ಶಾ.ಸಂ.೧೨೬) ಪು.೨೨೫.

೯. ಅದೇ, (ಶಾ.ಸಂ.೧೨೫) ಪು.೨೨೪.

೧೦. ಅದೇ, (ಶಾ.ಸಂ.೪೬), ಪು.೧೮೦

೧೧. ಅದೇ, (ಶಾ.ಸಂ.೦೨), ಪು.೧೨೫.

೧೨. ಡಾ.ದೇವರಕೊಂಡಾರೆಡ್ಡಿ, **ಮುಳುಗಡೆ ಗ್ರಾಮಗಳಲ್ಲಿನ ಶಾಸನ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು.೫೩.

೧೩. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೩, ಪು(ಶಾ.ಸಂ.೪೪).೧೭೭.

೧೫. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೫, ಪು(ಶಾ.ಸಂ.೩೧).೫೧.

೧೬. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೩, ಪು(ಶಾ.ಸಂ.೧೫).೧೫೯.

೧೭. ಅದೇ, (ಶಾ.ಸಂ.೧೭) ಪು.೧೫೧.

೧೮. ಅದೇ, (ಶಾ.ಸಂ.೫೦), ಪು.೧೮೬.

೧೯. ಅದೇ, (ಶಾ.ಸಂ.೧೧೮), ಪು.೧೧೮.

೨೦. ಅದೇ, (ಶಾ.ಸಂ.೨೪), ಪು.೧೫೬.

೨೧. ಅದೇ, (ಶಾ.ಸಂ.೩೪), ಪು.೧೬೭.

೨೨. ಅದೇ, (ಶಾ.ಸಂ.೩೬), ಪು.೧೬೯.

೨೩. ಅದೇ, (ಶಾ.ಸಂ.೧೨೦), ಪು.೨೧೯.

೨೪. ಅದೇ, (ಶಾ.ಸಂ.೩೯), ಪು.೧೭೩.

೨೫. ಡಾ.ಎಸ್.ಎಂ.ಹಿರೇಮಠ, **ಶಾಸನಾನುಸಂಧಾನ,** ಪ್ರಿಯದರ್ಶಿನಿ ಪ್ರಕಾಶನ, ೨೦೧೪, ಪು.೨೧೮.

೨೬. ಅದೇ

೨೭. ಅದೇ

೨೮. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೩, ಪು.೧೩೫

೨೯. ಅದೇ, ಪು.೧೩೬.

೩೦. ಅದೇ, ಪು.೧೪೬.

೩೧. ಅದೇ, ಪು.೧೫೯.

೩೨. ಅದೇ, ಪು.೧೭೨

೩೩. ಅದೇ, ಪು.೧೮೩

೩೪. ಡಾ.ಎಸ್.ಎಂ.ಹಿರೇಮಠ, **ಶಾಸನಾನುಸಂಧಾನ,** ಪ್ರಿಯದರ್ಶಿನಿ ಪ್ರಕಾಶನ, ೨೦೧೪, ಪು.೨೧೮.

೩೫. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೦೩, ಪು.೧೬೦.

೩೬. ಅದೇ, ಪು.೧೬೬.

೩೭. ಅದೇ, ಪು.೧೭೮.

೩೮. ಡಾ.ಆರ್.ಶೇಷಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು,** ಕಾಮಧೇನು ಪುಸ್ತಕ ಭವನ ೨೦೧೭, ಪು.೨೨.

೩೯. ಅದೇ, ಪು.೨೨.

೪೦. ಅದೇ, ಪು.೨೮.

೪೧. ಡಾ.ಪರಮಶಿವಮೂರ್ತಿ ಡಿ.ವಿ., **ಕನ್ನಡ ಶಾಸನಶಿಲ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೭೭.

೪೨. ಡಾ.ಆರ್.ಶೇಷಶಾಸ್ತ್ರಿ, **ಪೂರ್ವೋಕ್ತ,** ೧೯೮೨, ಪು.೭.

೪೩. ಡಾ.ಚನ್ನಬಸಪ್ಪ, **ಲಿಂಗಸೂಗೂರು ತಾಲೂಕಿನ ಐದು ಅಪ್ರಕಟಿತ ಶಾಸನಗಳು,** ಛಾವಣಿ ಸ್ಮರಣ ಸಂಚಿಕೆ, ೨೦೧೬, ಪು.೨೧

೪೪. ಎಸ್.ಎಸ್.ಭಗವತಿ, **ಪೂರ್ವೋಕ್ತ,** ೨೦೦೪, ಪು.೧೩೪.

೪೫. ಎಂ.ಎಂ.ಕಲಬುರ್ಗಿ, **ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು,** ಪು.೭೧

೪೬. ಎಸ್.ಎಸ್.ಭಗವತಿ, **ಪೂರ್ವೋಕ್ತ,** ಪು.೧೩೪.

೪೭. ಡಾ.ಎಸ್.ಎಂ.ಹಿರೇಮಠ, **ಪೂರ್ವೋಕ್ತ,** ೧೯೯೮, ಪು.೫೬.

೪೮. ಎಸ್.ಎಸ್.ಭಗವತಿ, **ಪೂರ್ವೋಕ್ತ,** ಪು.೧೭೬.

೪೯. ಕಲಬುರ್ಗಿ ಎಂ.ಎಂ., **ಪೂರ್ವೋಕ್ತ,** ಪು.೩೭.

೫೦. ದೇವರ ಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೦೩, ಪು.೧೯೦.

೫೧. ಅದೇ (ಶಾ.ಸಂ.೫೯), ಪು.೧೯೨.

೫೨. ಅದೇ (ಶಾ.ಸಂ.೬೭), ಪು.೧೯೫.

೫೩. ಅದೇ (ಶಾ.ಸಂ.೭೧), ಪು.೧೯೭.

೫೪. ಅದೇ (ಶಾ.ಸಂ.೭೦), ಪು.೧೯೭.

೫೫. ಅದೇ (ಶಾ.ಸಂ.೬೮), ಪು.೧೯೬.

೫೬. ಅದೇ (ಶಾ.ಸಂ.೬೯), ಪು.೧೯೬.

೫೭. ಅದೇ (ಶಾ.ಸಂ.೭೨), ಪು.೧೯೮.

೫೮. ಅದೇ (ಶಾ.ಸಂ.೭೫), ಪು.೧೯೯.

೫೯. ಅದೇ (ಶಾ.ಸಂ.೮೨), ಪು.೨೦೨.

೬೦. ಅದೇ (ಶಾ.ಸಂ.೯೩), ಪು.೨೦೬.

೬೧. ಅದೇ (ಶಾ.ಸಂ.೯೪), ಪು.೨೦೭.

೬೨. ಅದೇ (ಶಾ.ಸಂ.೯೭), ಪು.೨೦೮.

೬೩. ಅದೇ (ಶಾ.ಸಂ.೧೦೧), ಪು.೨೧೦.

೬೪. ಅದೇ (ಶಾ.ಸಂ.೧೦೨), ಪು.೨೧೦.

೬೫. ಅದೇ (ಶಾ.ಸಂ.೧೦೫), ಪು.೨೧೧.

೬೬. ಅದೇ (ಶಾ.ಸಂ.೦೧), ಪು.೨೨೪.

೬೭. ಅದೇ (ಶಾ.ಸಂ.೦೫), ಪು.೧೩೧.

೬೮. ಅದೇ (ಶಾ.ಸಂ.೧೪), ಪು.೧೪೮.

೬೯. ಅದೇ (ಶಾ.ಸಂ.೧೮), ಪು.೧೫೨.

೭೦. ಅದೇ (ಶಾ.ಸಂ.೧೯), ಪು.೧೫೨.

೭೧. ಅದೇ (ಶಾ.ಸಂ.೨೧), ಪು.೧೫೪.

೭೨. ಅದೇ (ಶಾ.ಸಂ.೨೨), ಪು.೧೫೫.

೭೩. ಅದೇ (ಶಾ.ಸಂ.೨೩), ಪು.೧೫೬.

೭೪. ಅದೇ (ಶಾ.ಸಂ.೨೫), ಪು.೧೫೮.

೭೫. ಅದೇ (ಶಾ.ಸಂ.೪೧), ಪು.೧೭೫.

೭೬. ಅದೇ (ಶಾ.ಸಂ.೪೮), ಪು.೧೮೨.

## ಅಧ್ಯಾಯ: ನಾಲ್ಕು

# ಮೂರ್ತಿ ಶಿಲ್ಪಗಳು

೪.೧. ಗಾಣಪತ್ಯ ಶಿಲ್ಪಗಳು

೪.೨. ಶೈವ ಮೂರ್ತಿಶಿಲ್ಪಗಳು

೪.೩. ವೈಷ್ಣವ ಮೂರ್ತಿಶಿಲ್ಪಗಳು

೪.೪. ಶಾಕ್ತ ಮೂರ್ತಿಶಿಲ್ಪಗಳು

೪.೫. ಜೈನ ಮೂರ್ತಿಶಿಲ್ಪಗಳು

# ಅಧ್ಯಾಯ: ನಾಲ್ಕು

## ಮೂರ್ತಿ ಶಿಲ್ಪಗಳು

ಇತಿಹಾಸವು ಹಲವು ಅಂಶಗಳನ್ನು ತನ್ನ ಒಡಲಿನಲ್ಲಿ ಅಡಗಿಸಿಕೊಂಡಿರುವ ಲಿಂಗಸೂಗೂರು ತಾಲೂಕು ಪ್ರಾಚೀನ ಕಾಲದಿಂದಲೂ ಅತ್ಯಂತ ಮಹತ್ವ ಪಡೆದ ಸ್ಥಳವಾಗಿದೆ. ವಾಸ್ತುಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಮೂರ್ತಿಶಿಲ್ಪಕ್ಕಿದೆ. ಶಿಲ್ಪ ಎಂದರೆ ಮೂರ್ತಿಗಳ ರಚನೆಯೇ ಆಗಿದೆ. 'ಶೀಲ ಸಮಧೌ ಶೀಲ್ಯತ ಇತಿ ಶಿಲ್ಪ' ಮನಸ್ಸು ಶಾಂತ ಸ್ಥಿತಿಯಲ್ಲಿದ್ದಾಗ ರೂಪಿತವಾಗುವ ಕರಕುಶಲ ವಸ್ತುವೇ ಶಿಲ್ಪ.[೧] ಶಿಲ್ಪ ಎಂದರೆ ಒಂದು ವಾಸ್ತವಿಕ ಅಥವಾ ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ತೋರಿಸುವ ಕಲೆಯೇ ಆಗಿದೆ. ಅಂದರೆ ನಾಲ್ಕು ದಿಕ್ಕುಗಳಿಂದ ನೋಡಬಹುದಾದ ಮಾಧ್ಯಮಿಕ ನಿರ್ಮಾಣವೇ ಮೂರ್ತಿಶಿಲ್ಪ.[೨] ಮೂರ್ತಿ, ವಿಗ್ರಹ, ಬಿಂಬ ಪ್ರತಿಬಿಂಬ ಇತ್ಯಾದಿ ಹೆಸರುಗಳೂ ಮೂರ್ತಿಶಿಲ್ಪದ ಸಮನಾರ್ಥಕ ಪದಗಳಾಗಿವೆ. ಆಗಾಗಿ ಮೂರ್ತಿಶಿಲ್ಪವು ತನ್ನದೇಯಾದ ಹಾವಭಾವ, ವಾಹನ, ನಿಲುವು, ಆಯುಧಗಳನ್ನೊಳಗೊಂಡಿರುತ್ತವೆ.

ದೇವಾಲಯ ನಿರ್ಮಿಸುವುದು ಏತಕ್ಕಾಗಿ ಎಂಬ ಪ್ರಶ್ನೆ ಹಾಕಿಕೊಂಡಾಗ ನಮಗೆ ಸಹಜವಾಗಿ ಅರಿವಿಗೆ ಬರುವುದು ಮೂರ್ತಿ ಪೂಜೆಗಾಗಿ. ಮೂರ್ತಿಶಿಲ್ಪದ ನೆಲೆಯ ಮೂಲಕ ವಾಸ್ತುಶಿಲ್ಪ ಬೆಳೆದು ಬಂದಿರಬಹುದು. ಅಂದರೆ ಇವೆರಡು ಅವಿನಾಭಾವ ಸಂಬಂಧವನ್ನು ಹೊಂದಿದೆ. ಸಾಮಾನ್ಯವಾಗಿ ವಾಸ್ತುಶಿಲ್ಪ ದೇವರಿಗೆ ಆಲಯ ನಿರ್ಮಿಸಿದರೆ ಮೂರ್ತಿಶಿಲ್ಪ ಆ ದೇವರ ಬಿಂಬಕ್ಕೆ ಸಾಂಕೇತಿಕ ರೂಪ ಕೊಡಲು ಪ್ರಯತ್ನಿಸಿದ್ದನ್ನು ತಿಳಿಯಬಹುದು. ಮೂರ್ತಿಯ ರಕ್ಷಣೆಗಾಗಿ ದೇವಾಲಯಗಳು ನಿರ್ಮಾಣವಾದವು. ಗರ್ಭಗೃಹ ದೇವಾಲಯದ ಹೃದಯವಾದರೆ, ಅದರಲ್ಲಿರುವ ಶಿಲ್ಪಗಳು ಉಸಿರು, ದೇವರಿಗಾಗಿ ಕಟ್ಟಿದ ಮಂದಿರವೇ ದೇವಾಲಯ. ಅಂದರೆ ವಾಸ್ತುಶಿಲ್ಪಕ್ಕಿಂತ ಪ್ರಾಚೀನವಾದ ಇತಿಹಾಸ ಮೂರ್ತಿಶಿಲ್ಪಕ್ಕಿದೆ.

ಪ್ರಸ್ತುತ ಲಿಂಗಸೂಗೂರು ತಾಲೂಕಿನ ಪರಿಸರದದ್ಯಾಂತ ಕಂಡುಬರುವ ಮೂರ್ತಿಶಿಲ್ಪಗಳು ವಿವಿಧ ಅರಸುಮನೆತನಗಳಿಗೆ ಸಂಬಂಧಿಸಿವೆ. ಈ ರಾಷ್ಟ್ರಕೂಟರ ಕಾಲದ ಶಿಲ್ಪಗಳು ವಿರಳ ವಾಗಿದ್ದು, ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದ ಶಿಲ್ಪಗಳು ಹೆಚ್ಚು ಪ್ರಚಲಿತದಲ್ಲಿವೆ.

## ೪.೧. ಗಾಣಪತ್ಯ ಶಿಲ್ಪಗಳು

ಪುರಾಣಗಳಲ್ಲಿ ಆಗಮಶಾಸ್ತ್ರಗಳಲ್ಲಿ ಧರ್ಮಶಾಸ್ತ್ರಗಳಲ್ಲಿ, ಬ್ರಾಹ್ಮಣ ಸ್ತೋತ್ರಗಳಲ್ಲಿ, ಗಣಪತಿಯ ಮಹಿಮೆಯನ್ನು ತಿಳಿಸುವಲ್ಲಿ ಇವು ಆಕರ ಗ್ರಂಥಗಳಾಗಿವೆ. ಗಣೇಶನ ಹುಟ್ಟಿನ ಬಗ್ಗೆ ಅನೇಕ ದಂತಕಥೆಗಳಿವೆ. ವೈದಿಕ ಸಂಪ್ರದಾಯದ ಪ್ರಕಾರ ಹಲವು ದೇವತೆಗಳಂತೆ ಹಿಂದೂಗಳ ಆದಿದೇವಗಣದಲ್ಲಿ ಗಣೇಶನು ಒಬ್ಬನಾಗಿದ್ದಾನೆ. ಬುದ್ಧಿಶೀಲನಾದ ವಿನಾಯಕನು ರುದ್ರನ ಪುತ್ರನಾಗಿ ಬೃಹಸ್ಪತಿಯಾಗಿದ್ದಾನೆ. ವಿದ್ವಾಂಸರ ಅಭಿಪ್ರಾಯದಂತೆ ವೈದಿಕ ದೇವತೆಗಳೇ ಪುರಾಣ ಕಾಲದ ಗಜಮುಖ ವಿನಾಯಕ ಎಂದಿದ್ದಾರೆ.[೩] ಪ್ರಾಚೀನ ಕಾಲದಿಂದಲೂ ಗಣೇಶನನ್ನು ಎಲ್ಲಾ ಮತದವರು ಆರಾಧಿಸುತ್ತಾ ಬಂದಿದ್ದಾರೆ. ಪ್ರಸ್ತುತವಾಗಿ ಹುನಕುಂಟೆ, ಮುದಗಲ್, ಕರಡಿಕಲ್ಲು, ಕೋಟಾ, ಗುರಗುಂಟ ಮೊದಲಾದವುಗಳ ಪ್ರದೇಶದಲ್ಲಿ ಗಣೇಶನ ಮೂರ್ತಿಗಳು ಕಾಣಿಸುತ್ತವೆ. ಅವುಗಳಲ್ಲಿ ಒಂದಾದ ಹುನಕುಂಟಿಯ ಬಸವೇಶ್ವರ ದೇವಾಲಯದಲ್ಲಿ ಈ ಶಿಲ್ಪವಿದೆ. ಗಣಪತಿ ಅಧಿಷ್ಠಾನದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ತಲೆಯ ಮೇಲೆ ಕಿರೀಟವಿದೆ. ಆನೆಯ ಮುಖವಿದೆ. ಸೊಂಡಿಲು ಎಡಕ್ಕೆ ವಾಲಿದೆ. ಭಗ್ನಗೊಂಡಂತೆ ಕಾಣುತ್ತದೆ. ಕೊರಳಲ್ಲಿ ಕಂಠಹಾರ ಧರಿಸಿದ್ದಾನೆ. ಲಿಂಗಸೂಗೂರು ತಾಲೂಕಿನ ಮಸ್ಕಿ ಪಟ್ಟಣದಲ್ಲಿರುವ ಮಲ್ಲಿಕಾರ್ಜುನ ದೇವಾಲಯದಲ್ಲಿ ಗರ್ಭಗೃಹದ ಹಾಗೂ ನವರಂಗದ ಗೋಡೆಯ ಮೇಲೆ ಗಣಪತಿ ಉಬ್ಬುಶಿಲ್ಪ ಹೊರ ಬಿತ್ತಿಯಲ್ಲಿದೆ. ವಿಘ್ನವಿನಾಶಕನ ತಲೆಯ ಮೇಲೆ ಕಿರೀಟವಿದೆ. ಈತ ಸುಖಾಸನದಲ್ಲಿ ಕುಳಿತಿದ್ದಾನೆ. ಕೈಯಲ್ಲಿ ದಂತ, ಪರಶು, ಅಂಕುಶಗಳಿವೆ. ಕೊರಳಲ್ಲಿ ಜನಿವಾರವಿದೆ. ಇದರ ಸೊಂಡಿಲು ಎಡಕ್ಕೆ ವಾಲಿದೆ.

## ೪.೨. ಶೈವ ಮೂರ್ತಿಶಿಲ್ಪಗಳು

ಸಾಮಾನ್ಯವಾಗಿ ಶಿವನನ್ನು ಲಿಂಗರೂಪದಲ್ಲಿ ಪೂಜಿಸಲಾಗುತ್ತದೆ. ಯೂನಿ ಪೀಠದ ಮೇಲೆ ಸ್ಥಾಪಿಸಿದ ಲಿಂಗವೇ ಶಿವಲಿಂಗವಾಗಿದೆ. ಶಾಸ್ತ್ರಗ್ರಂಥಗಳಲ್ಲಿ ಪ್ರಕೃತಿ ಪುರುಷ ಸಮ್ಮಿಲನದ ಸಂಕೇತವಾಗಿ ಶಿವಶಿವೆಯರ ರೂಪವೇ ಶಿವಲಿಂಗವೆಂದು ಹೇಳಲಾಗಿದೆ. ಅತಿ ಪ್ರಾಚೀನ ಲಿಂಗಗಳು ಪೀಠ ರಹಿತವಾಗಿದೆ. ನಂತರ ಪೀಠದ ಮೇಲೆ ನಿರ್ಮಿಸುವ ಪರಂಪರೆ ಆರಂಭವಾಯಿತು. ಶಿವಲಿಂಗದ ಆಧಾರದ ಪೀಠ ಬ್ರಹ್ಮಭಾಗ, ಇದರ ಮೇಲೆ ಸ್ಥಾಪಿಸಿದ ಯೂಪೀಠ ವಿಷ್ಣುಭಾಗ, ಪೀಠದ ಮೇಲಿನ ಲಿಂಗ ರುದ್ರಭಾಗವಾಗಿದೆ. ರುದ್ರಭಾಗವು

ವೃತ್ತಾಕಾರವಾಗಿದ್ದು ಪೂಜಾಭಾಗವಾಗಿದೆ. ಲಿಂಗದ ಮೇಲ್ಭಾಗ ಅರ್ಧ ಚಂದ್ರಾಕಾರದಲ್ಲಿರುತ್ತದೆ. ಕೆಲವು ಲಿಂಗಗಳ ಮೇಲೆ ವಿವಿಧ ಪ್ರಕಾರದ ಬ್ರಹ್ಮಸೂತ್ರಗಳಿರುತ್ತವೆ. ಹೀಗೆ ಇದಕ್ಕೆ ತನ್ನದೇ ಆದ ವೈಶಿಷ್ಟತೆ ಇದೆ. ಪ್ರಸ್ತುತ ಲಿಂಗಸೂಗೂರು ತಾಲೂಕಿನ ಕಲ್ಯಾಣ ಚಾಲುಕ್ಯರ ಮನೆತನಕ್ಕೆ ಸೀಮಿತವಾಗಿಸಿ ನೋಡಿದರೆ ಲಿಂಗಸೂಗೂರು ತಾಲೂಕಿನ ಕರಡಗಲ್ ಗ್ರಾಮದ ಕುಣಿ ಸೋಮೇಶ್ವರ ದೇವಾಲಯ, ಗುಡಿಹಾಳ ಗ್ರಾಮದ ರಾಮಲಿಂಗೇಶ್ವರ ದೇವಾಲಯ, ಆಮದಿಹಾಳ ಗ್ರಾಮದ ರಾಮಲಿಂಗೇಶ್ವರ ದೇವಾಲಯ, ಬೊಮ್ಮನಹಾಳ ಗ್ರಾಮದ ಗುರು ರಾಮಲಿಂಗೇಶ್ವರ ದೇವಾಲಯ, ಮುದಗಲ್ ಗ್ರಾಮದ ರಾಮಲಿಂಗೇಶ್ವರ ದೇವಾಲಯಗಳ ಆವರಣಗಳಲ್ಲಿ ಪೀಠರಹಿತ ಸ್ತಂಭದಂತಹ ಶಿವಲಿಂಗಗಳ ಕಂಡುಬರುತ್ತವೆ.

**ಶಿವಲಿಂಗಗಳು**

ಭಾರತೀಯರು ಸಾಮಾನ್ಯವಾಗಿ ಲಿಂಗದ ಆಕೃತಿಯಲ್ಲಿ ಇರುವ ಶಿವನನ್ನು ಆರಾಧಿಸುತ್ತ ಬಂದಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಶಿವಲಿಂಗಗಳು ನಾಳದ ರೂಪದಲ್ಲಿದ್ದವು. ಕಾಲಾನಂತರದಲ್ಲಿ ಯೂನಿ ಅಥವಾ ಪಾಣಿವಾಟವನ್ನು ಸೇರಿಸಲಾಯಿತು. ಕಾರಣ ನಾಳವನ್ನು ಸ್ಥಿರವಾಗಿ ನಿಲ್ಲಲು ಅನುಕೂಲವಾಗುವಂತೆ ಪೀಠವನ್ನು ರೂಪಿಸಲಾಯಿತು. ಅಲ್ಲದೆ ಲಿಂಗಕ್ಕೆ ಅಭಿಷೇಕ ಮಾಡಿದಾಗ ನೀರು ತಡೆದು ನಿಲ್ಲುವಂತೆ ಲಿಂಗದ ತಲೆಯ ಮೇಲೆ ನೀರು ಬಿಟ್ಟಾಗ ಕೆಳಗೆ ಬಿದ್ದ ನೀರನ್ನು ಹಿಡಿದಿಟ್ಟುಕೊಳ್ಳಲು ಅನುಕೂಲವಾಗುವಂತೆ ಪೀಠ ರಚಿಸಿದಂತೆ ತೋರುತ್ತದೆ. ಲಿಂಗಸೂಗೂರು ತಾಲ್ಲೂಕಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಶೈವಶಿಲ್ಪಗಳು ದೊರಕಿದ್ದು, ಅವುಗಳಲ್ಲಿ ಶಿವಲಿಂಗಗಳು, ನಂದಿ, ಭೈರವ, ವೀರಭದ್ರ, ಉಮಾಮಹೇಶ್ವರ ಶಿಲ್ಪಗಳಾಗಿವೆ. ಲಿಂಗಸೂಗೂರು ತಾಲೂಕಿನ ಮುದಗಲ್ ಹೋಬಳಿಗೆ ಸೇರಿದ ಕನಸಾವಿ, ತಾಲೂಕು ಕೇಂದ್ರದಿಂದ ೪೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ರಾಮಲಿಂಗೇಶ್ವರ ದೇವಾಲಯದಲ್ಲಿರುವ ಈಶ್ವರ ಲಿಂಗ ಕ್ರಿ.ಶ.೧೨-೧೩ನೇ ಶತಮಾನದ್ದಾಗಿದ್ದು, ಪ್ರಾಚೀನ ಕಾಲದ ಈಶ್ವರಲಿಂಗ ದೇವಾಲಯದ ಗರ್ಭಗೃಹದಲ್ಲಿರುವ ಶಿವಲಿಂಗವಾಗಿದೆ.

ಕರಡಿಕಲ್ ಕಣಿಸೋಮೇಶ್ವರ ದೇವಾಲಯದ ಗರ್ಭಗೃಹದಲ್ಲಿರುವ ಶಿವಲಿಂಗವು ಚೌಕಾಕಾರ ಪೀಠದ ಮೇಲೆ ಶಿವಲಿಂಗ ಕಂಡುಬಂದಿದ್ದು, ಇದು ಕಪ್ಪುಶಿಲೆಯಲ್ಲಿದ್ದು, ಸು.ಕ್ರಿ.ಶ. ೧೦ನೇ ಶತಮಾನದ್ದಾಗಿದೆ. ಕಸಬಾಲಿಂಗಸೂಗೂರಿನ ಕಲ್ಲೇಶ್ವರ ದೇವಾಲಯದ ಗರ್ಭಗೃಹದಲ್ಲಿರುವ ಶಿವಲಿಂಗವು ಕಪ್ಪುಶಿಲೆಯಲ್ಲಿದ್ದು ಸು.ಕ್ರಿ.ಶ.೧೧ನೇ ಶತಮಾನದ್ದಾಗಿದೆ.

ಕಸಬಾ ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೪ ಕಿ.ಮೀ. ಅಂತರದಲ್ಲಿದೆ. ಕರಡಕಲ್ಲು-೪೦೦ ಆಳ್ವಿಕೆಯ ಕಾಲದಲ್ಲಿ ಈ ಊರಿಗೆ ಲಿಂಗ ಎಂದು

ಕರೆಯುತ್ತಿದ್ದರು. ಈ ಕುರಿತು ಕಲ್ಲೇಶ್ವರ ದೇವಾಲಯದಲ್ಲಿ ದೊರೆಯುವ ಕಲ್ಯಾಣ ಚಾಲುಕ್ಯರ ಶಾಸನದ ವಿವರವಾದ ಮಾಹಿತಿಯನ್ನು ಕೊಡುತ್ತದೆ.

**ಸ್ಫಟಿಕಲಿಂಗ:** ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನ ಹಲ್ಕಾವಟಗಿ ಗ್ರಾಮದ ದತ್ತಾತ್ರೇಯ ಎಂಬುವರ ಮನೆಯಲ್ಲಿ ವಿಶಿಷ್ಟ ಲಿಂಗು ಇರುವುದು ಪತ್ತೆಯಾಗಿದೆ. ಈ ವಿಶಿಷ್ಟವಾದ ಲಿಂಗು ಸುಮಾರು ಒಂದು ಫೀಟ್ ಎತ್ತರವಿರುವುದು ಕಂಡುಬರುತ್ತದೆ. ಇದರ ಲಿಂಗುವಿನ ಮೇಲ್ಭಾಗದಿಂದ ನೋಡಿದರೆ ಕೆಳಭಾಗದ ಹಸ್ತದ ಗೆರೆಗಳು ಕಾಣಿಸುತ್ತವೆ. ನೋಡುವುದಕ್ಕೆ ಇದು ಸ್ಪಟಿಕದ ಲಿಂಗ ಇರಬಹುದು ಎನ್ನಲಾಗಿದೆ.

**ನಂದಿಶಿಲ್ಪಗಳು**

ಶಿವನ ವಾಹನ ವೃಷಭ. ಶೈವ ದೇವಾಲಯಗಳಲ್ಲಿ ಶಿವಲಿಂಗದ ಎದುರಿಗೆ ನಂದಿಯನ್ನು ಪ್ರತಿಷ್ಠಾಪಿಸಿರುತ್ತಾರೆ ಲಿಂಗಸೂಗೂರ ಪರಿಸರದ ಅನೇಕ ಶೈವ ದೇವಾಲಯಗಳಲ್ಲಿ ಶಿವಲಿಂಗದ ಎದುರಿನಲ್ಲಿ ನಂದಿಗಳಿರುವುದನ್ನು ಕಾಣಬಹುದು. ಅನ್ವರಿ,[೪] ಅಮರೇಶ್ವರ,[೫] ಆನೆಹೂಸೂರು,[೬] ಹುನಕುಂಟೆ,[೭] ಕನಸಾವಿ,[೮] ಕೋಟಾ,[೯] ಗುಡಿಹಾಳ.[೧೦] ನಂದಿ ವಿಗ್ರಹಗಳಿವೆ. ಇವುಗಳಲ್ಲಿ ಅತ್ಯಂತ ಸುಂದರವಾದ ವಿಗ್ರಹ ಕನಸಾವಿಯಲ್ಲಿದೆ. ಹುನಕುಂಟಿ ಗ್ರಾಮದಲ್ಲಿರುವ ಬಸವೇಶ್ವರ ದೇವಾಲಯದಲ್ಲಿರುವ ನಂದಿ ಭಕ್ತಿ, ಭಾವ ತುಂಬಿದ ರೀತಿಯಲ್ಲಿ ಕುಳಿತ ಭಂಗಿಯಲ್ಲಿದೆ. ಕಿರಿದಾದ ಕೊಂಬುಗಳು, ನಿಚ್ಚಳವಾಗಿರುವ ಕಣ್ಣುಗಳು, ಚಿಕ್ಕ ಕಿವಿಗಳು, ದಪ್ಪ ಪುಷ್ಟವಾದ ಮೈಮಾಟ ನಂದಿಯ ಲಕ್ಷಣಗಳಾಗಿವೆ. ಕೊರಳೊಳಗಿರುವ ಗೆಜ್ಜೆಯ ಸರ, ಗಂಟೆ, ಹಣೆಯ ಪಟ್ಟಿಯ ಗೆಜ್ಜೆ ಸರಗಳನ್ನು ಕೆತ್ತಲಾಗಿದೆ. ಇದೇ ಮಾದರಿಯ ಚಿಕ್ಕ ನಂದಿ ಶಿಲ್ಪಗಳು ಇತರ ದೇವಾಲಯಗಳಲ್ಲಿ ಕಾಣಬಹುದು.

## ೪.೩. ವೈಷ್ಣವ ಮೂರ್ತಿಶಿಲ್ಪಗಳು

ಭಾರತ ದೇಶ ಹಲವಾರು ಧರ್ಮಗಳ ಸಂಸ್ಕೃತಿಯ ತವರೂರು ಆಗಿದೆ. ಪ್ರಾಚೀನ ಧರ್ಮ ಅಂಥ ಬಂದಾಗ ವೈಷ್ಣವ ಧರ್ಮವು ನಮ್ಮ ಕಣ್ಮುಂದೆ ಕಾಣಿಸುತ್ತದೆ. ಇದರ ಪ್ರಾರಂಭದ ಉಲ್ಲೇಖವನ್ನು ವೈದಿಕ ಸಾಹಿತ್ಯದಲ್ಲಿ ಸಿಗುತ್ತದೆ. ನಂತರ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ ಮತ್ತು ಅನಿರುದ್ಧರೆನ್ನುವ ಪಂಚವೀರರು ಇದರ ಅನುಯಾಯಿಗಳಾಗಿದ್ದಾರೆ. ಇವರ ಆರಾಧನೆಯನ್ನು ವೀರವಾದ ಎಂದು ಕರೆಯಲಾಗುತ್ತದೆ.[೧೧]

ಈ ವಾದದ ಪ್ರಕಾರ ವಾಸುದೇವನೇ ಶ್ರೇಷ್ಠ. ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರು ಒಬ್ಬರಾದ ನಂತರ ಮತ್ತೊಬ್ಬರು ವಾಸುದೇವನಿಂದ ಅವಿರ್ಭವಿಸಿದವರಾಗಿದ್ದಾರೆ.

ಸುಮಾರು ಕ್ರಿ.ಪೂ.೪ನೇ ಶತಮಾನದಲ್ಲಿ ಮಥುರಾ ಪ್ರದೇಶದ ಜನರು ವಾಸುದೇವ ಅಥವಾ ಶ್ರೀಕೃಷ್ಣನ ಪೂಜೆಯನ್ನು ಮಾಡುತ್ತಿರುವರೆಂದು ಗ್ರೀಕ್ ರಾಯಭಾರಿ ಮೆಗಸ್ತಾನಿಸ್ ಮತ್ತು ಪಾಣಿನಿಯರು ಅಭಿಪ್ರಾಪಟ್ಟಿದ್ದಾರೆ. ವಿಷ್ಣುವಿನ ಅವತಾರಗಳಲ್ಲಿ ಹತ್ತು ಎಂದು ಶತಪಥ ಬ್ರಾಹ್ಮಣದಲ್ಲಿ ಉಲ್ಲೇಖವಿದೆ. ಆದರೆ ಕೆಲವೊಂದು ಸಲ ಇಪ್ಪತ್ತೆರಡು ಅದಕ್ಕಿಂತಲೂ ಹೆಚ್ಚಿಗೆ ಹೇಳುವುದುಂಟು.[೨] ಬೇರೆ ಬೇರೆ ಕೃತಿಗಳು ಬೇರೆ ಬೇರೆ ಅವತಾರಗಳನ್ನು ಹೇಳುತ್ತವೆ. ಸಾಮಾನ್ಯವಾಗಿ ಹತ್ತು ಅವತಾರಗಳಿವೆ. ಅವುಗಳೆಂದರೆ ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ ಮತ್ತು ಕಲ್ಕಿ ಮತ್ತು ನರಸಿಂಹ ಲ. ಲಿಂಗಸೂಗೂರು ಪರಿಸರದಲ್ಲಿ ಸಾಕಷ್ಟು ವೈಷ್ಣವ ಶಿಲ್ಪಗಳಿವೆ.

**೧. ಸ್ಥಾನಿಕ ಮೂರ್ತಿ:** ಸಮಸ್ಥಾನದಲ್ಲಿ ನಿಂತಿರುವ ವಿಷ್ಣುವಿನ ವಿವಿಧ ರೂಪಗಳು ಸ್ಥಾನಿಕ ಮೂರ್ತಿಗಳಾಗಿವೆ.

**೨. ಆಸನ ಮೂರ್ತಿ:** ಪೀಠದ ಮೇಲೆ ಪದ್ಮಸನ ಅಥವಾ ಅರ್ಧಪರ್ಯಂಕಾಸದಲ್ಲಿ ಕುಳಿತಿರುವ ವಿಷ್ಣುವಿನ ವಿವಿಧ ರೂಪಗಳ ಶಿಲ್ಪಗಳೇ ಆಸನ ಮೂರ್ತಿಗಳು.

**೩. ಶಯನ ಮೂರ್ತಿ:** ವಿಷ್ಣುವಿನ ಅನಂತಶಯನ ರೂಪದಲ್ಲಿ ಐದು, ಏಳು ಹೆಡೆಗಳ ನಾಗಸರ್ಪದ ಮೇಲೆ ಅಳವಡಿಸಿರುವಂತೆ ಈ ಶಿಲ್ಪದ ನಿರ್ಮಾಣವಿರುತ್ತದೆ.

**೪. ಅವತಾರ ಮೂರ್ತಿ:** ವಿಷ್ಣುವಿನ ದಶವತಾರಕ್ಕೆ ಸಂಬಂಧಿಸಿದಂತೆ ವಿವಿಧ ರೀತಿಯ ಮೂರ್ತಿಗಳಿದ್ದು, ಇವು ವಿಷ್ಣುವಿನ ದಶಾವತಾರದ ಶಿಲ್ಪಗಳನ್ನು ಪ್ರತಿನಿಧಿಸುತ್ತವೆ. ಹಾಗೆಯೇ ಕೆಲವು ಸಂದರ್ಭದಲ್ಲಿ ಗರ್ಭಗೃಹ, ಅಂತರಾಳ, ತೋರಣದಲ್ಲಿ ನವರಂಗದ ಕಂಬಗಳಲ್ಲಿ ದಶಾವತಾರದ ಶಿಲ್ಪಗಳು ಕಂಡುಬರುತ್ತವೆ.

**ವಿಷ್ಣುಶಿಲ್ಪ**

ಈ ಶಿಲ್ಪವು ಲಿಂಗಸೂಗೂರು ತಾಲೂಕಿನ ಮುದಗಲ್ ಪಟ್ಟಣದಲ್ಲಿ ಕಂಡುಬರುತ್ತದೆ. ಇದು ರಾಘವೇಂದ್ರ ಮಠದ ಕಟ್ಟೆ ಮೇಲೆ ಇರುವುದು. ಈ ಶಿಲ್ಪವು ಕ್ರಿ.ಶ.೧೧–೧೨ನೇ ಶತಮಾನಕ್ಕೆ ಸೇರಿರಬಹುದಾಗಿದೆ. ಇದು ನಿಂತ ಭಂಗಿಯಲ್ಲಿ ಕೆತ್ತಲ್ಪಟ್ಟಿದೆ. ಇದಕ್ಕೆ ಕ್ಲೋರಿಸಿಸ್ಟ್ ಕಲ್ಲನ್ನು ಬಳಸಿದ್ದಾರೆ. ಈ ಶಿಲ್ಪವು ನಾಲ್ಕು ಕೈಗಳನ್ನು ಹೊಂದಿದೆ. ಮೇಲಿನ ಎಡ ಕೈಗಳಲ್ಲಿ ಶಂಖ ಹಿಡಿದಿದ್ದು, ಇನ್ನೊಂದು ಕೈಯಲ್ಲಿ ರಕ್ಷಣಾ ಸೂಚಕ ಅಭಯ ಹಸ್ತವನ್ನು ತೋರಿಸಲಾಗಿರುತ್ತದೆ. ಈ ಶಿಲ್ಪದ ಬಲಭಾಗದಲ್ಲಿರುವ ಎರಡು ಕೈಗಳು ಭಗ್ನಗೊಂಡಿರುವ ಸ್ಥಿತಿಯಲ್ಲಿದೆ. ಈ ಶಿಲ್ಪದ ತಲೆಯ ಮೇಲೆ ಕಿರೀಟ ಇದೆ. ಕಿವಿಯಲ್ಲಿ ಮಕರ ಕುಂಡಲಗಳನ್ನು

ಧರಿಸಿದ್ದು, ಕೊರಳಲ್ಲಿ ಕೌಸ್ತುಭಮಣಿ ಹಾಗೂ ವೈಜಯಂತಿ ಮಣಿ ಹಾರಗಳನ್ನು ಧರಿಸಿ ಶೃಂಗಾರಗೊಂಡಿದ್ದಾನೆ. ನಗುಮುಖ, ವಿಶಾಲ ಎದೆ, ಉದ್ದನೆಯ ತೋಳು ಮತ್ತು ದಪ್ಪ ಕುತ್ತಿಗೆಯನ್ನು ಹೊಂದಿರುವನು. ದೂರಿನಿಂದಲೇ ನೋಡಿದರೆ ಗರುಡನ ಮೇಲೆ ನಿಂತಿರುವ ರೂಪದಲ್ಲಿ ಕಾಣಸಿಗುತ್ತದೆ.

**ಏಳು ಹನುಮಂತ**

ಲಿಂಗಸೂಗೂರು ತಾಲೂಕಿನ ಮುದಗಲ್ ಪಟ್ಟಣದಲ್ಲಿ ಬರುವ ಕೋಟೆಯ ಮೇಲ್ಭಾಗದಲ್ಲಿ ಕಂಡುಬರುತ್ತದೆ. ಇದು ೭ ಹನುಮಂತನ ಶಿಲ್ಪಮೂರ್ತಿ ಶಿಲ್ಪಗಳು ಒಂದೇ ಕಲ್ಲಿನಲ್ಲಿ ಸ್ಪಷ್ಟವಾಗಿ ಕಾಣಸಿಗುತ್ತವೆ. ಈತ ಶ್ರೀರಾಮನ ಭಕ್ತನಾಗಿದ್ದಾನೆ. ಶ್ರೀರಾಮ ಭಕ್ತಿಯನ್ನು ಪ್ರಚಾರ ಮಾಡಿದ ವೀರಾಂಜನೆಯ ಆಗಿದ್ದಾನೆ. ಇಲ್ಲಿ ಬಂಡೆಯ ಮೇಲೆ ೭ ಹನುಮಂತನ ಮೂರ್ತಿಗಳನ್ನು ಕೆತ್ತಿರುವುದು ನೋಡುವುದಕ್ಕೆ ಕಾಣಿಸುತ್ತದೆ. ಇದು ಲಂಕಾದಹನದ ವಿಷಯವನ್ನು ಹರವುತ್ತದೆ. ಶ್ರೀ ರಾಮನಿಗೆ ಏಕ ನಿಷ್ಠಾವಂತ ಸೇವಕನನ್ನು ಒದಗಿಸಿ ರಾಮನ ಕಾರ್ಯ ನೆರವೇರಿಸಿಕೊಟ್ಟ ವಿಷಯವನ್ನು ತಿಳಿಸುತ್ತದೆ. ಈ ಕಲ್ಲಿನಲ್ಲಿ ಎರಡು ಕೈಗಳನ್ನು ಮೇಲಕ್ಕೆ ಎತ್ತಿ ಬಾಲಕ್ಕೆ ಬೆಂಕಿ ಹಚ್ಚಿಕೊಂಡಿರುವ ವೀರಾವೇಶದ ಹನುಮಂತನು ಕಾಣಿಸಿ ಕೊಳ್ಳುತ್ತಾನೆ. ಕೆಳಗೆ ಇಬ್ಬರು ಸೈನಿಕರು ಮಡಿದಿರುವುದು. ಹೆಂಗಸು ಕೈಮುಗಿದುಕೊಂಡು ನಿಂತಿರುವುದು. ಹನುಮಂತ ಸಮುದ್ರ ದಾಟಿ ಲಂಕೆಗೆ ಜಿಗಿದ ಸನ್ನಿವೇಶವಿದೆ. ಏಳು ಮೂರ್ತಿಗಳು ಒಂದೊಂದು ಭಂಗಿಯಲ್ಲಿದ್ದು, ಒಂದೊಂದು ವಿಷಯವನ್ನು ತಿಳಿಸುತ್ತವೆ. ಇದೊಂದು ಅಪರೂಪದ ಮೂರ್ತಿಶಿಲ್ಪ ಎಂದು ಹೇಳಬಹುದಾಗಿದೆ. ಇಲ್ಲಿ ವಿಶ್ವರೂಪದ ಹನುಮಂತನಂತೆ ಕಾಣಿಸಿಕೊಂಡಿದ್ದಾನೆ.

**ಹನುಮಂತನ ವಿಗ್ರಹಗಳು**

ಮೇಗಳ ಪೇಟೆಯ ಬಾಗಿಲಿನ ಉತ್ತರ ದಿಕ್ಕಿಗೆ ಪತ್ತೇದರ ವಾಜದ ಬಾಗಿಲಿನ ಎಡಬದಿಗೆ ಕ್ರಿ.ಶ.೧೫ನೇ ಶತಮಾನಕ್ಕೆ ಸೇರಿದ ವಿಜಯನಗರ ಅರಸರ ಶೈಲಿಯ ಹನುಮಂತನ ಉಬ್ಬುಶಿಲ್ಪಗಳು ಗೋಡೆಗಳಲ್ಲಿ ಕೆತ್ತಿರುವುದು ಸ್ಪಷ್ಟವಾಗಿ ಕಾಣಿಸುತ್ತದೆ. ಕೆಲ ಕಡೆ ಮಂಡಿಯೂರಿ ನಿಂತ ಭಂಗಿಯಲ್ಲಿದೆ. ರತ್ನಕಚಿತ ಕಿರೀಟ ಧರಿಸಿದ್ದು, ಕಿವಿಗಳಲ್ಲಿ ಕರ್ಣಕುಂಡಲವಿದೆ. ಕೆಲ ಶಿಲ್ಪಗಳಲ್ಲಿ ಕೈಯಲ್ಲಿ ಹಾವುಗಳನ್ನು ಹಿಡಿದಿದ್ದು, ಕೈಯಲ್ಲಿ ಕಡಗ ಧರಿಸಿರುವನು. ಮೇಲ್‌ಬದಿಯಲ್ಲಿ ಸೂರ್ಯಚಂದ್ರ ಮತ್ತು ಶಂಖ ಶಿಲ್ಪವಿದೆ. ಕೊರಳಲ್ಲಿ ಮಣಿಹಾರ ಧರಿಸಿದ್ದನ್ನು ಕಾಣಬಹುದಾಗಿದೆ. ಕೆಲಮೂರ್ತಿಯ ಮುಂಭಾಗದಲ್ಲಿ ಚಕ್ರವಿದೆ. ಇನ್ನೊಂದರಲ್ಲಿ ವೈಷ್ಣವ ಲಾಂಛನಗಳಿಂದ ಶಂಖ, ರೇಖಾ ಚಿತ್ರಗಳಿವೆ.

**ಬೆಣ್ಣೆಕೃಷ್ಣ ಮೂರ್ತಿ**

ಇದು ಕಿಲ್ಲಾಲ್ಲಾ ರಾಘವೇಂದ್ರ ಮಠದ ಕಟ್ಟೆಯ ಮೇಲಿದೆ. ಕ್ರಿ.ಶ.೧೩ನೇ ಶತಮಾನಕ್ಕೆ ಸೇರಿದ್ದು ಎಂದು ತಿಳಿದುಬರುವುದು. ಇದು ಕುಳಿತ ಭಂಗಿಯಲ್ಲಿ ಕಾಣಿಸುತ್ತಾನೆ. ಈ ಮೂರ್ತಿಯು ಒಂದೂವರೆ ಅಡಿ ಎತ್ತರದಲ್ಲಿದೆ. ದುಂಡನೆ ಮುಖ, ನಗೆನೋಟ ಬೀರಿದ ಈ ಶಿಲ್ಪ ನಯನ ಮನೋಹರವಾಗಿದೆ. ತಲೆ ಕೂದಲು ಇಳಿಬಿಟ್ಟಿದ್ದು ಕಿವಿಯಲ್ಲಿ ಕರ್ಣಕುಂಡಲ ಧರಿಸಿದ್ದಾನೆ. ಕೊರಳಲ್ಲಿ ತುಳಿಸಿ ಮಾಲೆ, ನರಸಿಂಹ ಪದಕಗಳನ್ನು ಹಾಕಿ ಕೊಂಡಿದ್ದಾನೆ. ಎಡಗೈಯಲ್ಲಿ ಬೆಣ್ಣೆಮಡಿಕೆ ಹಿಡಿದುಕೊಂಡು ಬಲಗೈಯಲ್ಲಿ ಬೆಣ್ಣೆ ಹಿಡಿದು ತಿನ್ನುವಂತೆ ಕಾಣಿಸುತ್ತದೆ. ಎಡಗಾಲು ಮಡಿಚಿದ್ದಾನೆ. ಬಲಗಾಲು ಊರಿಕೊಂಡಿದ್ದಾನೆ. ಇದನ್ನು ಕ್ಲೋರ್‌ಸಿಸ್ಟ್ ಕಲ್ಲಿನಲ್ಲಿ ಕೆತ್ತಲಾಗಿದೆ.

**ವಿಷ್ಣುದೇವ**

ಈ ಶಿಲ್ಪದಲ್ಲಿ ವಿಷ್ಣುವು ಎರಡು ಭಂಗಿಯಲ್ಲಿರುತ್ತಾನೆ. ಒಂದು ನಿಂತ ಭಂಗಿಯಲ್ಲಿದ್ದರೆ ಇನ್ನೊಂದು ಶಯನ ಭಂಗಿಯಲ್ಲಿರುತ್ತದೆ. ಇಂತಹ ಶಿಲ್ಪಗಳು ಲಿಂಗಸೂಗೂರು ತಾಲೂಕಿನ ಬೊಮ್ಮನಾಳ ಗ್ರಾಮದ ವಿವಿಧ ಕಡೆಯಲ್ಲಿ ಕಂಡುಬಂದಿವೆ.

**ಗಜಲಕ್ಷ್ಮಿ ಶಿಲ್ಪಗಳು**

ಕಮಲದ ಮೇಲೆ ಪದ್ಮಾಸನದಲ್ಲಿ ಕುಳಿತ ದ್ವಿಭುಜ ಅಥವಾ ಚತುರ್ಭುಜಲಕ್ಷ್ಮಿ ಪ್ರಾಚೀನ ಶಿಲ್ಪಗಳಲ್ಲಿ ಕಂಡುಬರುವ ದೇವತೆ, ಕಮಲ, ಶ್ರೀಫಲ, ಶಂಖ, ಅಮೃತಘಟ, ಮಾತುಲಿಂಗ, ಖೇಟಕ ಮತ್ತು ಗದೆ ಈಕೆಯ ಆಯುಧಗಳು. ಈಕೆಯ ತಲೆಯ ಮೇಲೆ ಕುಂಬಗಳಿಂದ ಅಭಿಷೇಕ ಮಾಡುತ್ತಿರುವ ಎರಡು ಅನೆಗಳಿರುತ್ತವೆ. ಈ ಆನೆಗಳೆರಡು ಶಂಖ ಮತ್ತು ಪದ್ಮ ಎಂಬ ನಿಧಿಗಳನ್ನು ಸೂಚಿಸುತ್ತದೆ. ಗಜಲಕ್ಷ್ಮಿಯ ಜನಪ್ರಿಯ ರೂಪಗಳಲ್ಲಿ ಒಂದಾಗಿದ್ದು ಇದು ದೇವಸ್ಥಾನದ ಗೋಪುರದ ಅಡಿಗಲ್ಲಿನಲ್ಲಿ ಮತ್ತು ಬಾಗಿಲುಗಳ ಮೇಲೆ ಕಾಣಿಸಿಕೊಳ್ಳುತ್ತವೆ. ಲಕ್ಷ್ಮಿ ಅಷ್ಟದಳ ಕಮಲದ ಮೇಲೆ ಕುಳಿತ ಭಂಗಿಯಲ್ಲಿರುತ್ತಾಳೆ. ಲಕ್ಷ್ಮಿಯ ಹಿಂದಿನ ಕೈಗಳಲ್ಲಿರುವ ಶಂಖ ಮತ್ತು ಪದ್ಮಗಳೆರಡು ಇವನ್ನೇ ಸೂಚಿಸುತ್ತವೆ. ಸಾಮಾನ್ಯವಾಗಿ ಎಲ್ಲಾ ಗಜಲಕ್ಷ್ಮಿ ಶಿಲ್ಪಗಳು ಮೇಲಿನ ಲಕ್ಷಣಗಳನ್ನು ಹೊಂದಿರುತ್ತವೆ.

ಲಿಂಗಸೂಗೂರು ಪರಿಸರದಲ್ಲಿ ಇಂಥ ಶಿಲ್ಪಗಳು ಹೆಚ್ಚಾಗಿ ದೇವಾಲಯದ ಲಲಾಟ ಭಾಗದಲ್ಲಿ ಕಂಡುಬಂದಿವೆ. ಅವುಗಳಲ್ಲಿ ಲಿಂಗಸೂಗೂರು ತಾಲೂಕಿನ ಅಮರೇಶ್ವರ ದೇವಸ್ಥಾನದ ಹತ್ತಿರದಲ್ಲಿರುವ ಆದಯ್ಯನ ಗುಡಿಯ ಉತ್ತರ ಮತ್ತು ದಕ್ಷಿಣ ನವರಂಗ ಭಾಗದಲ್ಲಿ ಪ್ರವೇಶದ್ವಾರಗಳಿವೆ. ದ್ವಾರದ ಮೇಲೆ ಗಜಲಕ್ಷ್ಮೀ ಶಿಲ್ಪವಿದೆ.

ಲಿಂಗಸೂಗೂರು ತಾಲೂಕಿನ ನಿಲೋಗಲ್ ಗ್ರಾಮದ ಅಗಸಿಕಟ್ಟೆಯ ಬಲಭಾಗದಲ್ಲಿರುವ ಗಜಲಕ್ಷ್ಮೀ ಶಿಲ್ಪವು ಪದ್ಮಾಸನದಲ್ಲಿದ್ದು ಎರಡು ಕೈಗಳನ್ನು ಹೊಂದಿದೆ. ಪಾರ್ಶ್ವದಲ್ಲಿ ೨ ಆನೆಗಳಿದ್ದು, ಕುಂಭಾಭಿಷೇಕ ಮಾಡುತ್ತಿರುವುದು ಕಂಡುಬಂದಿದೆ.

ಬೈಲಗುಡ್ಡದಲ್ಲಿರುವ ವೆಂಕಟೇಶ್ವರ ದೇವಾಲಯದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪ ಇದೆ. ಲಕ್ಷ್ಮಿ ಕಮಲ ಪೀಠದ ಮೇಲೆ ಪದ್ಮಾಸನೆಯಾಗಿ ಕುಳಿತಿದ್ದು, ತನ್ನೆರಡು ಕೈಗಳಲ್ಲಿ ಕಮಲ ಪುಷ್ಪದ ನೀಳ ದೇಟುಗಳನ್ನು ಹಿಡಿದಿದ್ದಾಳೆ. ಇಕ್ಕೆಲಗಳಲ್ಲಿ ಎರಡು ಆನೆಗಳು ಇದ್ದು, ಮುಂದಿನ ಕಾಲುಗಳನ್ನು ಮೇಲೆತ್ತಿ ನಿಂತು ಸೊಂಡಿಲಿನಲ್ಲಿ ಅಮೃತಕಲಶ ಹೊಂದಿದೆ. ಆನೆಗಳು ದೇವತೆಯ ಮೇಲೆ ಅಮೃತ ಸುರಿವಂತೆ ಚಿತ್ರಿಸಲಾಗಿದೆ.

### ೪.೪. ಶಾಕ್ತಮೂರ್ತಿ ಶಿಲ್ಪಗಳು

ಭಾರತದಲ್ಲಿ ಶಕ್ತಿದೇವತೆಯ ಆರಾಧನೆಯು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ. ಶಕ್ತಿಯನ್ನು ವೈಷ್ಣವರು ಲಕ್ಷ್ಮಿಯ ರೂಪದಲ್ಲಿ ಶೈವರು ಪಾರ್ವತಿಯ ರೂಪದಲ್ಲಿ ಪೂಜೆ ಮಾಡುತ್ತಾರೆ. ಆದರೆ ಶಕ್ತಿದೇವತೆಗಳ ಅನೇಕ ರೂಪಗಳಾದ ಸರಸ್ವತಿ, ದುರ್ಗಾ, ಮಹಿಷಾಸುರ ಮರ್ದಿನಿ, ಚಾಮುಂಡಿ, ಸಪ್ತಮಾತೃಕೆಯರು, ವರಹಿ ಶಿಲ್ಪಗಳು, ಶಾಕ್ತರು ಎಲ್ಲ ಸ್ತ್ರೀ ದೇವತೆಗಳು ದೇವತಾ ಸ್ವರೂಪವೆಂದು ನೂರಾರು ಹೆಸರುಗಳ ಮೂಲಕ ಕರೆಯುವುದನ್ನು ಕೇಳಿದ್ದೇನೆ.

**ಸಪ್ತಮಾತೃಕೆಯರ ಶಿಲ್ಪಗಳು**

ಗಂಡು ದೇವತೆಗಳೊಂದಿಗೆ ಹೆಣ್ಣು ದೇವತೆಯನ್ನು ಶಕ್ತಿಯರೆಂದು ಒಪ್ಪಿಕೊಂಡು ಪೂಜಿಸಲಾಗುತ್ತಿದೆ. ಶಿವನಿಗೆ ಶಿವ, ವಿಷ್ಣುವಿಗೆ ಲಕ್ಷ್ಮಿ, ಬ್ರಹ್ಮನಿಗೆ ಸರಸ್ವತಿ, ಗಣಪತಿಗೆ ಸೃಷ್ಠಿ, ಅನಂತನಿಗೆ ತುಷ್ಠಿ, ಕಾಲನಿಗೆ ರಾತ್ರಿ, ಸೂರ್ಯನಿಗೆ ಸಂಜ್ಞೆ, ಇಂದ್ರನಿಗೆ ಶಚಿ, ಅಗ್ನಿಗೆ ಸ್ವಾಹಾ, ದಕ್ಷನಿಗೆ ದಕ್ಷಿಣ, ಸ್ಕಂದನಿಗೆ ದೇವಸೇನ ಮುಂತಾದವರು. ಇದಕ್ಕೆ ಉದಾಹರಣೆ ಯಾಗಿರುತ್ತಾರೆ. ಬೃಹತ್ ಸಂಹಿತೆಯಲ್ಲಿ ಸಪ್ತಮಾತೃಕೆಯರ ಹೆಸರುಗಳ ಉಲ್ಲೇಖ ಬರುತ್ತದೆ. ಬ್ರಾಹ್ಮಿ, ವೈಷ್ಣವಿ, ಮಹೇಶ್ವರಿ, ಕೌಮಾರಿ, ಇಂದ್ರೀ, ವಾರುಣಿ ಮತ್ತು ಕೌಬೇರಿ ಇವರು ಕ್ರಮವಾಗಿ ಬ್ರಹ್ಮ, ವಿಷ್ಣು, ಶಿವ, ಸ್ಕಂದ, ಇಂದ್ರ, ವರುಣ ಮತ್ತು ಕುಬೇರ ದೇವತೆಗಳ ಶಕ್ತಿಯರು. ಸಾಮಾನ್ಯವಾಗಿ ಸಪ್ತಮಾತೃಕೆಯರನ್ನು ಒಂದೇ ಫಲಕದಲ್ಲಿ ಸಾಲಾಗಿ ಕೆತ್ತಲಾಗಿರುತ್ತವೆ.

ಮುದಗಲ್ ಪಟ್ಟಣದ ಹೇಳಪೇಟಿ ದೇವರ ಬಾವಿಯಲ್ಲಿ ಸಪ್ತಮಾತೃಕೆಯ ಶಿಲ್ಪವಿದೆ. ಇದು ಯಾದವರ ಕಾಲದಲ್ಲಿ ನಿರ್ಮಾಣಗೊಂಡಿದೆ. ಒಂದೇ ಕಲ್ಲಿನಲ್ಲಿ ಲಲಿತಾಸನದಲ್ಲಿ

ಪಕ್ಕ ಪಕ್ಕದಲ್ಲೇ ಕುಳಿತುಕೊಂಡಿರುವ ರೀತಿಯಲ್ಲಿ ತೋರಿಸಲಾಗಿದೆ. ನಂದಿ ವಾಹನದ ಮಹೇಶ್ವರಿ, ನವಿಲು ವಾಹನದ ಕೌಮಾರಿ, ಗರುಡ ವಾಹನದ ವೈಷ್ಣವಿ, ಕೋಣವಾಹನದ ವಾರಾಹಿ, ಆನೆವಾಹನದ ಇಂದ್ರಾಣಿ, ಗೋಬೆ/ತೋಳ ಮೊದಲಾದವು ಕಂಡುಬರುತ್ತವೆ. ಎರಡು ಕಡೆ ಕೊನೆ ಭಾಗದಲ್ಲಿ ಒಂದೆಡೆ ನಂದಿವಾಹನದ ವೀರಭದ್ರ, ಇನ್ನೊಂದೆಡೆ ಗಣೇಶ ವಾಹನದ ಮೂಷಕದ ಸಪ್ತಮಾತೃಕೆಯರ ಮೂರ್ತಿಶಿಲ್ಪವಿದೆ. ಇವರ ಕೈಗಳಲ್ಲಿ ಕಪಾಲ, ಅಭಯ, ಪ್ರಯೋಗ, ಚಕ್ರ, ಶಂಖ, ಆರಾಮ ಹಸ್ತಗಳಿವೆ. ತಲೆಯಲ್ಲಿ ಕಿರೀಟವಿರುವುದನ್ನು ಇಲ್ಲಿ ನೋಡಬಹುದು.

**ನಾಗಶಿಲ್ಪಗಳು**

ಈ ಪ್ರದೇಶದಲ್ಲಿ ಹಲವು ರೀತಿಯ ನಾಗಶಿಲ್ಪಗಳು ಕಾಣುತ್ತೇವೆ. ಇವುಗಳಿಂದ ನಮಗೆ ಕಂಡುಬಂದಿದ್ದು ಏನೆಂದರೆ ಈ ಭಾಗದಲ್ಲಿ ನಾಗಾರಾಧನೆ ಪ್ರಚಲಿತದಲ್ಲಿತ್ತೆಂದು ತಿಳಿಯಬಹುದಾಗಿದೆ. ನೀಲಗಲ್, ನಗನೂರು, ಕನಸಾವಿ, ಹೀರೇಹೆಸರೂರು, ಬ್ಯಾಲಿಹಾಳ, ಕರಡಕಲ್ ಇನ್ನಿತರ ಗ್ರಾಮಗಳಲ್ಲಿ ಹಲವಾರು ವಿವಿಧ ರೀತಿಯ ನಾಗಶಿಲ್ಪಗಳು ದೊರೆಯುತ್ತವೆ. ಇವುಗಳು ಕ್ರಿ.ಶ.೮ನೇ ಶತಮಾನದಿಂದ ೧೩ನೇ ಶತಮಾನದ ಮಧ್ಯ ಕಾಲದಲ್ಲಿ ನಿರ್ಮಾಣಗೊಂಡಿರ ಬಹುದಾದ ಸಾಧ್ಯತೆಗಳಿವೆ. ಇವು ಕ್ಲೋರ್‌ಪಿಸ್ಟ್ ಕಲ್ಲಿನಲ್ಲಿ ಒಂದು ಎಡೆ, ಎರಡು ಎಡೆ ಹಾಗೂ ಐದು ಎಡೆ ನಾಗಶಿಲ್ಪಗಳು ಹೆಚ್ಚಾಗಿ ಕೆತ್ತಲಾದ ಮೂರ್ತಿಶಿಲ್ಪಗಳು ಆಲದ ಮರ, ಗುಡಿಗಳ ಹೊರಗೆ, ಬೇವಿನ ಮರದ ಕೆಳಗೆ, ಹೊರಗೆ ಕಲ್ಲಿನಲ್ಲಿ ಹಾಸುಗಲ್ಲುಗಳಲ್ಲಿ ಕಡೆದ ನಾಗಶಿಲ್ಪಗಳು ದೊರೆಯುತ್ತವೆ.

### ೪.೫. ಜೈನ ಮೂರ್ತಿಶಿಲ್ಪಗಳು

ಜೈನಧರ್ಮವು ಭಾರತದ ಅತಿ ಪ್ರಾಚೀನ ಧರ್ಮಗಳಲ್ಲಿ ಒಂದಾಗಿದೆ. ಅಹಿಂಸೆ, ತ್ಯಾಗ, ಅಪರಿಗ್ರಹ, ಮೊದಲಾದ ತತ್ವಸಿದ್ಧಾಂತಗಳನ್ನು ಜಗತ್ತಿಗೆ ಸಾರಿದ ಕೀರ್ತಿ ಈ ಧರ್ಮಕ್ಕಿದೆ. ಈ ಧರ್ಮದ ಮೂರ್ತಿಶಿಲ್ಪ ಕಲಾ ಪರಂಪರೆ ಬಹುವೈಶಿಷ್ಟತೆಯಿಂದ ಕೂಡಿದೆ. ಅಷ್ಟೇ ಸ್ವಾರಸ್ಯಕರವೂ ಆಗಿದೆ. ಹೀಗಾಗಿ ಭಾರತೀಯರ ಶಿಲ್ಪಕಲೆಯ ಸಂದರ್ಭದಲ್ಲಿ ಇದಕ್ಕೆ ಬಹುಮಹತ್ವದ ಸ್ಥಾನವನ್ನು ಕಲ್ಪಿಸಲಾಗಿದೆ. ಈ ಧರ್ಮ ತನ್ನ ಕಲಾಪರಂಪರೆಯಲ್ಲಿ ಸಮಕಾಲೀನ ಆಚಾರ-ವಿಚಾರ, ನಂಬುಗೆ, ಸಂಪ್ರದಾಯಗಳನ್ನು ಒಡಮೂಡಿಸುತ್ತ, ಅದನ್ನು ತನ್ನದೇ ಆದ ಪರಿಕಲ್ಪನೆಗಳ ಚೌಕಟ್ಟಿನಲ್ಲಿ ಬೆಳೆಸಿಕೊಂಡು ಬಂದಿದೆ. ಈ ಧರ್ಮದ ತತ್ವ ಸಿದ್ಧಾಂತ ಮತ್ತು ಮುನಿ ಪರಂಪರೆಯ ಪ್ರಭಾವಕ್ಕೊಳಗಾದ ಸಮಕಾಲೀನ ಆಳರಸಾದಿಯಾಗಿ ಶ್ರವಕರು ನಾಮ, ಸ್ಥಾಪನ, ದ್ರವ್ಯ ಮತ್ತು ಭಾವ ಎಂಬ ನಾಲ್ಕು ಭೇದಗಳಿಂದ

ಜೈನಾಗಮನಗಳ ಪ್ರತಿಷ್ಠಾ ವಿಧಿಯಾನುಸಾರವಾಗಿ ಹಾಗೂ ಯಂತ್ರ-ಮಂತ್ರ ಕ್ರಮದಿಂದ ಜಿನಾಲಯಗಳ ನಿರ್ಮಾಣ ಕೈಗೊಂಡು ಚಿನ್ನ, ಚಂದನ, ಶಿಲೆಗಳಿಂದ ನಾಲ್ಕು ಅಂಗಲ ಅಳತೆಯ ಜಿನಬಿಂಬಗಳನ್ನು ಪ್ರತಿಷ್ಠಾಪಿಸಿ ಭಕ್ತಿಪೂರ್ವಕವಾಗಿ ಪ್ರತಿ ದಿನವೂ ಪೂಜಿಸುವರು. ದೇವಲೋಕದ ಸುಖವನ್ನನುಭವಿಸಿ, ಅನಂತರ ಮೇರುಪರ್ವತದಲ್ಲಿ ದೇವತೆಗಳಿಂದ ಪ್ರೇರಿತರಾಗಿ ತೀರ್ಥಂಕರ ಯಕ್ಷ-ಯಕ್ಷಿ, ಬಾಹುಬಲಿ ಮೊದಲಾದ ಶಿಲ್ಪಗಳನ್ನು ಜಿನಾಲಯಗಳಲ್ಲಿ ಪ್ರತಿಷ್ಠಾಪಿಸಲು ದಾನ ಮಾಡಿ, ಮುಕ್ತಿಯನ್ನು ಸಂಪಾದಿಸುವುದರೊಂದಿಗೆ, ಭಾರತೀಯ ಶಿಲ್ಪಕಲಾ ಪರಂಪರೆಯನ್ನು ಶ್ರೀಮಂತಗೊಳಿಸಿದ್ದಾರೆ. ಜೈನತೀರ್ಥಂಕರರು ಬಾಹ್ಯ ಸೌಂದರ್ಯಕ್ಕಿಂತ ಆಂತರಿಕ ಸೌಂದರ್ಯಕ್ಕೆ ಹೆಚ್ಚು ಮಹತ್ವಕೊಟ್ಟಿದ್ದಾರೆ. ಹೀಗಾಗಿ ಆತ್ಮದ ಪರಿಶುದ್ಧತೆಯನ್ನು ಹೊರತರುವುದು ಅಗತ್ಯವಾಗಿದೆ. ಕೆಲವು ಸಲ ಆತ್ಮದ ಉನ್ನತಿಗಾಗಿ ವ್ಯವಹಾರಿಕ ಮತ್ತು ಸುಮಧುರವಾದ ಹಿನ್ನೆಲೆಯನ್ನು ಏರ್ಪಡಿಸುವುದು ಜೈಸಾಹಿತ್ಯ ಕಲೆಯ ಮತ್ತು ಮೂರ್ತಿಶಿಲ್ಪದ ಉದ್ದೇಶವಾಗಿದೆ.[೧೩] ಲಿಂಗಸೂಗೂರು ತಾಲೂಕಿನ ಮುದಗಲ್ ಪಟ್ಟಣದಲ್ಲಿ ಪಾರ್ಶ್ವನಾಥನ ಶಿಲ್ಪಗಳು ದೊರತಿವೆ.

ಮುದಗಲ್ ಪುರಸಭೆ ಮುಂಭಾಗದ ಚರಂಡಿ ಪಕ್ಕದಲ್ಲಿ ೧೨ನೇ ಶತಮಾನಕ್ಕೆ ಸಂಬಂಧಿಸಿದ ಕರಿಕಲ್ಲಿನ ಜೈನ ತೀರ್ಥಂಕರನಾದ ಪಾರ್ಶ್ವನಾಥ ವಿಗ್ರಹ ದೊರೆತಿದೆ. ಇಲ್ಲಿ ಸಿಕ್ಕಿರುವ ಪಾರ್ಶ್ವನಾಥನ ವಿಗ್ರಹ ಎರಡು ಅಡಿ ಎತ್ತರ, ೩ ಅಡಿ ಅಗಲವಿದೆ. ಈ ಪಾರ್ಶ್ವನಾಥ ವಿಗ್ರಹ ಸಂಪೂರ್ಣ ತ್ರುಟಿತವಾಗಿದೆ. ಶಿಲ್ಪಗಳ ಅರಿವು ಇರಲಾರದ ದುಷ್ಕರ್ಮಿಗಳು ಭಗ್ನಗೊಳಿಸಿದ್ದಾರೆ. ಪಾರ್ಶ್ವನಾಥ ತಲೆಯ ಮೇಲೆ ಏಳು ಎಡೆಯ ನಾಗರ ಹಾವು ಕಾಣಿಸುತ್ತದೆ. ಇದರ ಮೇಲೆ ಮುಕ್ಕೊಡೆ ಇದ್ದಿದ್ದನ್ನು ಗಮನಿಸಬಹುದು. ಪಾರ್ಶ್ವನಾಥನ ಎಡಬದಿಯಲ್ಲಿ ಧರಣೇಂದ್ರ ಯಕ್ಷಶಿಲ್ಪವಿದೆ.

ಲಿಂಗಸೂಗೂರು ತಾಲ್ಲೂಕಿನ ಕರಡಿಕಲ್ಲು ಗ್ರಾಮದ ಎರಡು ಪಾರ್ಶ್ವನಾಥ ಶಿಲ್ಪಗಳನ್ನು ಇತ್ತೀಚಿಗೆ ಪ್ರಾಚ್ಯವಸ್ತು ಇಲಾಖೆಯವರು ತೆಗೆದುಕೊಂಡು ಹೋಗಿ ರಾಯಚೂರು ನಗರದ ನವರಂಗ ದರವಾಜದಲ್ಲಿ ಸಂರಕ್ಷಿಸಿದ್ದಾರೆ. ಈ ಶಿಲ್ಪಗಳು ಕ್ರಿ.ಶ.೧೨ನೇ ಶತಮಾನದವು ಗಳಾಗಿರುತ್ತವೆ.

**ಅಡಿಟಿಪ್ಪಣಿಗಳು**

೧. ಕುರುಗುಂದ ಟಿ. ಪಂಕಜಾಕ್ಷ, **ಶಿಲ್ಪ ಸೌಂದರ್ಯ**, ೨೦೦೬, ಪು.೩

೨. ಶಿವರಾಮಕಾರಂತ ಕೆ., **ಭಾರತೀಯ ಶಿಲ್ಪ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫, ಪು.೧

೩. ರಾಮಚಂದ್ರರಾವ್ ಎಸ್.ಕೆ., **ಮೂರ್ತಿಶಿಲ್ಪ: ನೆಲೆ–ಹಿನ್ನೆಲೆ**, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫, ಪು.೮೯.

೪. ರಾಮಲಿಂಗೇಶ್ವರ ದೇವಾಲಯದ ಸಭಾಮಂಟಪದಲ್ಲಿದೆ.

೫. ಆದಯ್ಯನ ಗುಡಿ ಸಭಾ ಮಂಟಪದಲ್ಲಿದೆ.

೬. ರಾಮಲಿಂಗೇಶ್ವರ ದೇವಾಲಯದ ಮಧ್ಯದಲ್ಲಿರುವ ವೇದಿಕೆಯಲ್ಲಿದೆ.

೭. ಬಸವೇಶ್ವರ ದೇವಾಲಯದ ಸಭಾ ಮಂಟಪದಲ್ಲಿದೆ.

೮. ರಾಮಲಿಂಗೇಶ್ವರ ದೇವಾಲಯದ ಮುಂದೆ ಇದೆ.

೯. ರಾಮಲಿಂಗೇಶ್ವರ ದೇವಾಲಯದ ನವರಂಗದ ಮಧ್ಯಭಾಗದಲ್ಲಿದೆ.

೧೦. ರಾಮಲಿಂಗೇಶ್ವರ ದೇವಾಲಯದ ಪಶ್ಚಿಮ ಅಭಿಮುಖವಾಗಿರುವ ಗರ್ಭಗೃಹದಲ್ಲಿದೆ.

೧೧. ಪ್ರೊ.ಬಿ.ಷೇಕ್‌ಅಲಿ, **ಕರ್ನಾಟಕ ಚರಿತ್ರೆ, ಸಂಪುಟ–೧**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೮, ಪು.೩೧೪.

೧೨. ರಾಮಚಂದ್ರರಾವ್ ಎಸ್.ಕೆ., **ಪೂರ್ವೋಕ್ತ** ಪು.೧೨೦–೨೧

೧೩. ದೇವರಕೊಂಡಾರೆಡ್ಡಿ, ಸಪ್ತಮಾತೃಕೆಯರ ಹರಿತಿಸಿರಿ, ಎಚ್.ಎ.ವೀರನಾಯ್ಕ ಹರತಿ, ನೆನಪಿನ ಸಂಪುಟ, ೧೯೮೭, ಪು.೮೪

# ಅಧ್ಯಾಯ: ಐದು

## ಸ್ಮಾರಕಗಳು

೫.೧. ಶೈವ ದೇವಾಲಯಗಳು

೫.೨. ವೈಷ್ಣವ ದೇವಾಲಯಗಳು

೫.೩. ಜೈನ ಬಸದಿಗಳು

೫.೪. ಕೋಟೆಗಳು

೫.೫. ಸಮಾಧಿಗಳು

೫.೬. ಕಟ್ಟಡಗಳು

೫.೭. ಬಾವಿಗಳು

೫.೮. ಕೆರೆಗಳು

೫.೯. ಮಠಗಳು

೫.೧೦. ಇತರೆ ಸ್ಮಾರಕಗಳು

## ಅಧ್ಯಾಯ: ಐದು

# ಸ್ಮಾರಕಗಳು

'ಆಡು ಮುಟ್ಟದ ಸೊಪ್ಪು ಇಲ್ಲ, ಸ್ಮಾರಕಗಳು ಇಲ್ಲದ ಊರುಗಳಿಲ್ಲ' ಎನ್ನುವಂತೆ ಭಾರತದಲ್ಲಿ ಹಳ್ಳಿ ಹಳ್ಳಿಯಲ್ಲೂ, ಬೆಟ್ಟಗಳಲ್ಲೂ, ಸಾರ್ವಜನಿಕ ಸ್ಥಳಗಳಲ್ಲಿ ದೇವಾಲಯಗಳು ಮತ್ತು ಸ್ಮಾರಕಗಳು ಕಂಡುಬರುತ್ತವೆ. ಸ್ಮಾರಕಗಳು ಎಂದರೆ ಹಳೆಯ ಕಾಲದ ಘಟನೆಗಳಿಗೆ ಸಾಕ್ಷಿಯಾದ ಸ್ಮರಣಿಕೆಗಳು ಎಂದರ್ಥ. ಒಂದು ದೇಶದ ಸಂಸ್ಕೃತಿಯ ಪ್ರತಿಕೃತಿಗಳೆಂದರೆ ಸ್ಮಾರಕಗಳು. ಇವುಗಳು ಪುರಾತತ್ವ ಆಧಾರಗಳಲ್ಲಿ ನೆರವಾಗುತ್ತವೆ. ಕೆಲವು ಸಲ ಅಲ್ಲಿನ ಸಾಹಿತ್ಯ, ಶಾಸನ, ಕಲೆ ಮತ್ತು ವಾಸ್ತುಶಿಲ್ಪಗಳು ತಿಳಿಸಲಾರದ ಹೊಸ ಸಂಗತಿಗಳನ್ನು ಸ್ಮಾರಕಗಳು ಹೇಳುತ್ತವೆ. ಆದ್ದರಿಂದ ಇವುಗಳನ್ನು ಮಾನವ ಸಮಾಜದ ಸಂಸ್ಕೃತಿಯ ಪ್ರತಿಬಿಂಬಗಳು ಎಂದು ಕರೆದರೆ ತಪ್ಪಾಗಲಿಕ್ಕಿಲ್ಲ. ಸ್ಮಾರಕಗಳಲ್ಲಿ ಹಳೆಯ ಕಾಲದ ಅರಮನೆಗಳು, ಕೋಟೆಗಳು, ಗುಹೆಗಳು, ಗುಡಿಗಳು, ಬಸದಿಗಳು, ಮೂರ್ತಿಗಳು, ಸ್ತೂಪಗಳು, ಸಾರ್ವಜನಿಕ ಕಟ್ಟಡಗಳು, ಮಠಗಳು, ಬಾವಿಗಳು, ಮುಂತಾದವುಗಳು ಕಂಡು ಬರುತ್ತವೆ. ಇಂಥ ಸ್ಮಾರಕಗಳು ನಮ್ಮ ತಾಲೂಕಿನಲ್ಲಿರುವ ನವಿಲಿ, ಬನ್ನಿಗೋಳ, ಮುದಗಲ್, ಲಿಂಗಸೂಗೂರು, ಸಜ್ಜಲಗುಡ್ಡ, ಅನ್ವಲಿ, ಅಮರೇಶ್ವರ, ಆನೆಹೂಸರು, ಆಮದಿಹಾಳ, ಕರಡಿಕಲ್, ಕಸಭಾಲಿಂಗಸೂಗೂರು, ಹುನಕುಂಟಿ, ಬೈಲಗುಡ್ಡ, ಕೋಟಾ, ಗುಡಿಹಾಳ, ಗೌಡೂರು, ಮಾಚನೂರು, ಛತ್ತರ ಜಲದುರ್ಗ, ತಲೆಖಾನ್ ಮತ್ತು ಹೊನ್ನಳ್ಳಿ ಮುಂತಾದ ಊರುಗಳಲ್ಲಿವೆ.

### ೫.೧. ಶೈವ ದೇವಾಲಯಗಳು

ಶೈವಾರಾಧನೆ ಭಾರತದ ಪ್ರಾಚೀನ ಆರಾಧನೆ ಆಗಿದ್ದು, ಸಿಂಧು ನಾಗರಿಕತೆ ಮತ್ತು ವೈದಿಕ ಯುಗದಲ್ಲಿ ಈ ಕುರಿತು ಕುರುಹುಗಳು ಲಭ್ಯವಾಗಿವೆ. ನಂತರದಲ್ಲಿ ಇದು ಹಲವು ಪಂಥಗಳಾಗಿ ಬೆಳೆಯುವುದರ ಮೂಲಕ ಭಾರತದಾದ್ಯಂತ ಹರಡಿತು. ಪ್ರಸ್ತುತ ಲಿಂಗಸೂಗೂರು

ತಾಲೂಕಿನಲ್ಲಿ ಶೈವದೇವಾಲಯಗಳು ಬಹಳಷ್ಟಿದ್ದು, ಅವುಗಳನ್ನು ಒಂದೆಡೆ ಸೇರಿಹಿಡಿದು ಅವುಗಳ ಬಗ್ಗೆ ಮಾಹಿತಿ ಕೊಡುವ ಪ್ರಯತ್ನ ಮಾಡಲಾಗಿದೆ.

**ಬಸವಣ್ಣ ದೇವಸ್ಥಾನ**

| | | | |
|---|---|---|---|
| **ಊರು** | : ಕನಸಾವಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಬಸವಣ್ಣ ದೇವಾಲಯ | **ಅಭಿಮುಖ** | : ದಕ್ಷಿಣ |
| **ಸ್ಥಳ** | : ಕಾಲಕಾಲೇಶ್ವರ ದೇವಸ್ಥಾನದ ಹಿಂಭಾಗ | **ಸ್ಥಿತಿ** | : |
| **ಕಾಲ** | : ೧೨-೧೩ನೇ ಶತಮಾನ | | |

ಬಸವಣ್ಣ ದೇವಸ್ಥಾನ ದಕ್ಷಿಣ ಅಭಿಮುಖವಾಗಿದ್ದು, ಲಿಂಗಸೂಗೂರು ತಾಲ್ಲೂಕಿನಿಂದ ಪಶ್ಚಿಮಕ್ಕೆ ೪೦ ಕಿ.ಮೀ. ದೂರದಲ್ಲಿದೆ. ಕಾಲಕಾಲೇಶ್ವರ ದೇವಸ್ಥಾನಕ್ಕೆ ಹೊಂದಿಕೊಂಡು ಹಿಂಬಾಗದಲ್ಲಿದೆ. ಇದು ೧೨-೧೩ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ದೇವಾಲಯವು ಗರ್ಭಗೃಹ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ದೇವಕೋಷ್ಟದಲ್ಲಿ ಪ್ರಾಚೀನ ಕಾಲದ ನಂದಿಮೂರ್ತಿ ಇದೆ. ನವರಂಗದ ಛಾವಣಿಗೆ ಹಾಸು ಬಂಡೆಗಲ್ಲುಗಳನ್ನು ಹಾಕಲಾಗಿದ್ದು, ನವರಂಗದ ಭಾಗದಲ್ಲಿ ಭಿತ್ತಿ ಹೊಂದಿದೆ.

**ರಾಮಲಿಂಗೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಅನ್ವರಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಉತ್ತರ |
| **ಸ್ಥಳ** | : ಗ್ರಾಮದ ಮಧ್ಯೆ | **ಸ್ಥಿತಿ** | : ಮಧ್ಯಮ |
| **ಕಾಲ** | : ೧೨-೧೩ನೇ ಶತಮಾನ | | |

ಈ ದೇವಾಲಯವು ಉತ್ತರಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ೩೦ ಕಿ.ಮೀ. ದೂರದಲ್ಲಿದೆ. ಈ ದೇವಾಲಯವು ದ್ವಿಕೂಟವಾಗಿದೆ. ಎರಡು ಗರ್ಭಗೃಹಗಳು, ಅಂತರಾಳ, ನವರಂಗವನ್ನೊಳಗೊಂಡಿದೆ. ಪೂರ್ವಾಭಾಗದ ಗರ್ಭಗೃಹವು ಹೆಚ್ಚು ಅಲಂಕರಣೆಗಳನ್ನು ಹೊಂದಿದೆ. ಗರ್ಭಗೃಹದ ಬಾಗಿಲ ಪಟ್ಟಿಕೆ ಭಾಗಗಳು ಪುಷ್ಪ ಮತ್ತು ಲತಾ ಶಾಖೆಗಳಿಂದ ಕೂಡಿದೆ. ಮೇಲ್ಭಾಗದ ಅಡ್ಡಪಟ್ಟಿಯಲ್ಲಿ ಕಮಲದ ಮೊಗ್ಗು ಇಳಿಬಿಟ್ಟಂತೆ ಕಾಣಿಸುತ್ತದೆ. ದ್ವಾರಶಾಖೆಯ ಕೆಳಭಾಗದಲ್ಲಿ ಸ್ತ್ರೀಯರ ಶಿಲ್ಪಗಳು ಹಾಗೂ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಪಶ್ಚಿಮಾಭಿಮುಖ ಗರ್ಭಗೃಹದಲ್ಲಿ ಲಿಂಗವಿದ್ದು, ಅದರ ಎದುರು ನಂದಿಯ ಶಿಲ್ಪವಿದೆ. ನವರಂಗದ ಮಧ್ಯೆ ನಾಲ್ಕು ಕಂಬಗಳಿವೆ.

ದೇವಾಲಯದ ಹೊರಭಿತ್ತಿಯಲ್ಲಿ ಕೋಷ್ಟಕಗಳಿವೆ. ದೇವಲಯದ ಅಧಿಷ್ಠಾನಭಾಗವು ಹೂತಿದ್ದು, ಶಿಖರ ಭಾಗವಿಲ್ಲ, ದೇವಾಲಯ ಜೀರ್ಣಾವಸ್ಥೆಯಲ್ಲಿದೆ, ಪ್ರಸ್ತುತ ದೇವಾಲಯದ ದಕ್ಷಿಣ ಮತ್ತು ಪಶ್ಚಿಮದ ಭಾಗಗಳನ್ನು ಅಲ್ಲಿನ ಜನರು ಒತ್ತುವರಿ ಮಾಡಿದ್ದಾರೆ.[೧]

ಈ ದೇವಾಲಯಕ್ಕೆ ಸಂಬಂಧಿಸಿದಂತೆ ಇರುವ ಶಾಸನವು ನಿಲುವಂಜಿಯ ಚಂದ್ರಶೇಖರ ಶಕ್ತಿಯ ಶಿಷ್ಯನಾದ ಅಘೋರಶಕ್ತಿ ಪಂಡಿತನು ಶ್ರೀ ಹುಳಿಯಮೇಶ್ವರ ದೇವರಮಠಕ್ಕೆ ಹೊಲ ಮತ್ತು ಇತರ ದಾನದತ್ತಿಗಳನ್ನು ನೀಡಿದನೆಂದು ತಿಳಿಸುತ್ತದೆ.[೨]

**ಆದಯ್ಯ ಗುಡಿ**

| | | | |
|---|---|---|---|
| **ಊರು** | : ಅಮರೇಶ್ವರ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಆದಯ್ಯ ಗುಡಿ | **ಅಭಿಮುಖ** | : ಪಶ್ಚಿಮ |
| **ಸ್ಥಳ** | : ಕಣಿವೆಯ ಮಧ್ಯದಲ್ಲಿ | **ಸ್ಥಿತಿ** | : |
| **ಕಾಲ** | : ೧೨-೧೩ನೇ ಶತಮಾನ | | |

ಆದಯ್ಯ ಗುಡಿ ಪಶ್ಚಿಮಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ಉತ್ತರ ದಿಕ್ಕಿಗೆ ೧೬ ಕಿ.ಮೀ. ದೂರದಲ್ಲಿದೆ. ಇದು ಕ್ರಿ.ಶ.೧೨-೧೩ನೇ ಶತಮಾನದಲ್ಲಿ ನಿರ್ಮಾಣಗೊಂಡಿದ್ದು, ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ದೇವಾಲಯದ ಒಳಭಾಗವು ಗರ್ಭಗೃಹ, ತೆರದ ಅರ್ಧಮಂಟಪ ಮತ್ತು ನವರಂಗಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಇತ್ತೀಚಿನ ಕಾಲದ ಪಾಣಿಪೀಠದ ಮೇಲೆ ಪ್ರಾಚೀನ ಲಿಂಗವಿದೆ. ಗರ್ಭಗೃಹದ ಮೇಲ್ಭಾವಣಿಗೆ ನಕ್ಷತ್ರಾಕಾರದ ಅಲಂಕೃತ ಭುವನೇಶ್ವರಿ ಇದೆ. ನವರಂಗದ ಕಂಬಗಳ ಮಧ್ಯದಲ್ಲಿ ವೇದಿಕೆಯಿದ್ದು, ಗುಡಿಯ ಉತ್ತರ ಮತ್ತು ದಕ್ಷಿಣದ ನವರಂಗ ಭಾಗದಲ್ಲಿ ಪ್ರವೇಶದ್ವಾರಗಳಿವೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರವಿದೆ. ಶಿಖರ ಭಾಗವನ್ನು ಸ್ವಲ್ಪ ಮಟ್ಟಿಗೆ ನವೀಕರಿಸಲಾಗಿದೆ. ಆದಯ್ಯನ ಗುಡಿಗೆ ಹೊಂದಿಕೊಂಡು ಮಾಳಗುಂಡಮ್ಮನ ಗುಡಿ ಇದೆ. ಇದರ ಪಕ್ಕದಲ್ಲಿ ನಂದಿಯ ಶಿಲ್ಪವನ್ನು ಇಡಲಾಗಿದೆ. ಪ್ರಸ್ತುತ ಗುಡಿಗೆ ಕಲ್ಯಾಣ ಚಾಲುಕ್ಯರ ವಾಸ್ತುಶೈಲಿಯ ಕಂಬಗಳಿವೆ.

**ಅಮರೇಶ್ವರ ಗುಡಿ**

| | | | |
|---|---|---|---|
| **ಊರು** | : ಅಮರೇಶ್ವರ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಅಮರೇಶ್ವರ ಗುಡಿ | **ಅಭಿಮುಖ** | : ಪಶ್ಚಿಮ |
| **ಸ್ಥಳ** | : ಕಣಿವೆಯ ನಡುವೆ | **ಸ್ಥಿತಿ** | : ಉತ್ತಮ |
| **ಕಾಲ** | : ೧೯ನೇ ಶತಮಾನ | | |

ಅಮರೇಶ್ವರ ಗುಡಿ ಪಶ್ಚಿಮಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ಉತ್ತರ ದಿಕ್ಕಿಗೆ ೧೬ ಕಿ.ಮೀ. ದೂರದಲ್ಲಿದೆ. ಇದು ಕ್ರಿ.ಶ.೧೯ನೇ ಶತಮಾನದಲ್ಲಿ ನಿರ್ಮಾಣಗೊಂಡಿದೆ. ಇದು ಕಲ್ಯಾಣ ಚಾಲುಕ್ಯ ಶೈಲಿಯ ಶಿವಲಿಂಗವುಳ್ಳ ದೇವಾಲಯವಾಗಿದೆ.

ನೆಲಮಟ್ಟದಿಂದ ನೂರಕ್ಕೂ ಹೆಚ್ಚು ಅಡಿ ಆಳದ ಕಣಿವೆಯ ನಡುವೆ ಪಶ್ಚಿಮಾಭಿಮುಖವಾಗಿ ನಿರ್ಮಾಣಗೊಂಡಿದೆ. ದಕ್ಷಿಣದಿಂದ ಪ್ರವೇಶವಿರುವ ಈ ದೇವಾಲಯಕ್ಕೆ ಇತ್ತೀಚಿನ ಕಾಲದ ತ್ರಿತಲ ಶಿಖರವಿದೆ. ಶಿಖರವನ್ನು ದ್ರಾವಿಡ ಶೈಲಿಯಲ್ಲಿ ನಿರ್ಮಿಸಲಾಗಿದೆ. ದೇವಾಲಯದ ಒಳಭಾಗವು ಗರ್ಭಗೃಹ, ನವರಂಗ ಹೊಂದಿದೆ. ಗರ್ಭಗುಡಿಯು ಪಶ್ಚಿಮಾಭಿಮುಖವಾಗಿದೆ. ನವರಂಗದಲ್ಲಿ ಕಲ್ಯಾಣಚಾಲುಕ್ಯರ ಶೈಲಿಯ ನಾಲ್ಕು ಕಂಬಗಳಿವೆ, ಗರ್ಭಗೃಹದಲ್ಲಿ ಒಂದು ನಿರಾಕಾರ ಕಲ್ಲಿನ ಮೂರ್ತಿಯನ್ನು ಇರಿಸಿ ಪೂಜೆ ಸಲ್ಲಿಸಲಾಗುತ್ತದೆ. ಅದರ ಪಕ್ಕದಲ್ಲಿ ಪ್ರಾಚೀನ ಲಿಂಗವನ್ನು ಇರಿಸಲಾಗಿದೆ. ಗರ್ಭಗೃಹ ನಕ್ಷತ್ರಾಕಾರದ ಮೇಲ್ಛಾವಣಿ ಭುವನೇಶ್ವರಿಯಿಂದ ಕೂಡಿದೆ. ಉತ್ತರದಲ್ಲಿರುವ ಕಿರು ಹೊಂಡದ ನೀರು ಗುಡಿಯ ನವರಂಗ, ಗರ್ಭಗುಡಿಯ ಶಿವಲಿಂಗದ ಮೂಲಕ ದಕ್ಷಿಣಕ್ಕೆ ಸದಾ ಹರಿಯುತ್ತಿದೆ. ಈ ಶಿವಲಿಂಗಕ್ಕೆ ನೀರಿನಲ್ಲಿಯೇ ಪೂಜೆ ಸಲ್ಲಿಸಲಾಗುತ್ತದೆ. ನವರಂಗದ ಕಂಬಗಳಿಗೆ ಕನ್ನಡ ಹಾಗೂ ದೇವನಾಗರಲಿಪಿ ಹಾಗೂ ಕೈಮುಗಿದ ವ್ಯಕ್ತಿಗಳ ರೇಖಾಚಿತ್ರಗಳಿವೆ. ದೇವಾಲಯದ ಸುತ್ತ ಗುರುಮಠ, ಆದಯ್ಯಗುಡಿ ಮತ್ತು ಯಾತ್ರಿಕರ ತಂಗುವ ಕೋಣೆಗಳಿವೆ.

ಇಲ್ಲಿರುವ ಕಟ್ಟಡಗಳು ಇಸ್ಲಾಮಿಕ್ ಶೈಲಿಯ ಕಮಾನುಗಳನ್ನು ಹೊಂದಿದ್ದು, ಕೋಟೆ ಗೋಡೆಯ ಶೈಲಿಯಲ್ಲಿ ದೇವಾಲಯದ ಪ್ರಾಕಾರ ಗೋಡೆಗಳನ್ನು ನಿರ್ಮಿಸಿದೆ.

**ರಾಮಲಿಂಗೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಕನಸಾವಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಹಿಂದೆ | **ಸ್ಥಿತಿ** | : |
| **ಕಾಲ** | : ಕ್ರಿ.ಶ.೧೨-೧೩ನೇ ಶತಮಾನ | | |

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ಪಶ್ಚಿಮಕ್ಕೆ ೪೦ ಕಿ.ಮೀ. ದೂರದಲ್ಲಿದೆ. ಇದು ಕಲ್ಯಾಣ ಚಾಲುಕ್ಯರ ವಾಸ್ತುಶೈಲಿ ಹೊಂದಿದ್ದು, ೧೨-೧೩ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ದೇವಾಲಯದ ಒಳಭಾಗವು ಗರ್ಭಗುಡಿ, ಅಂತರಾಳ ಮತ್ತು ಸಭಾಮಂಟಪಗಳಿವೆ. ಇದರ ಗರ್ಭಗೃಹದಲ್ಲಿ ಪ್ರಾಚೀನ ಕಾಲದ ಈಶ್ವರ ಲಿಂಗವಿದೆ. ದೇವಾಲಯದ ವಿವಿಧ ಭಾಗವು ನವೀಕರಿಸಿರುವುದು ಕಂಡುಬರುತ್ತದೆ. ಇದರ

ಮುಂದೆ ನಂದಿಮೂರ್ತಿ ಇದೆ. ಆಲಯದ ಮುಂದೆ ಕಲ್ಯಾಣ ಚಾಲುಕ್ಯರ ಎರಡು ಶಾಸನಗಳಿವೆ.

ರಾಮಲಿಂಗೇಶ್ವರ ದೇವಾಲಯದ ಮುಂದೆ ೧೨ನೇ ಶತಮಾನದ ಶಾಸನದ ಕೆಲ ಭಾಗಗಳು ದೊರತಿವೆ. ಈ ಶಾಸನದಲ್ಲಿ ಶಾಪಾಶಯದ ವಿವರ ನೀಡುತ್ತವೆ. ಶಾಸನದ ಕೊನೆಯ ಭಾಗ ಹಾಳಾಗಿದೆ.

ಗ್ರಾಮದ ಕೆರೆಯ ದಂಡೆಯ ಮೇಲೆ ಶಾಸನ ಕಲ್ಲಿನಲ್ಲಿದೆ. ಇದು ಸಹ ತ್ರುಟಿತವಾಗಿದ್ದು, ಚಾಲುಕ್ಯ ವಿಕ್ರಮ ವರುಷ ೩೦, ಪಾರ್ಥಿವ, ಶ್ರಾವಣ ಶು.೧೩, ಸೋಮವಾರ, ದಕ್ಷಿಣಾಯನ ಸಂಕ್ರಮಣವೆಂದಿದ್ದು, ಇದು ಕ್ರಿ.ಶ.೧೨–೭–೧೧೦೫ಕ್ಕೆ ಸರಿಹೊಂದುತ್ತದೆ. ತ್ರಿಭುವನಮಲ್ಲನು ಕಲ್ಯಾಣದಲ್ಲಿದ್ದಾಗ ಅವನ ದಂಡನಾಯಕನಾದ ಮಹೇಶ್ವರಯ್ಯ ಎಂಬುವವನು ದಾನ ನೀಡಿದ ಉಲ್ಲೇಖವಿದೆ. ಶಾಸನದಲ್ಲಿ ಗ್ರಾಮವನ್ನು ಕಣ್ಣಸಾವಿ ಎಂದಿದೆ.[೩] ಇದೇ ಗ್ರಾಮದ ದುರ್ಗಾದೇವಿ ಗುಡಿಯ ಬಲಭಾಗದ ಶಾಸನದಲ್ಲಿ ವಿಕ್ರಮ ಕಾಲ ೧೬, ಉತ್ತರಾಯಣ ಸಂಕ್ರಾಂತಿ, ಪ್ರಜಾಪತಿ, ಪುಶ್ಯ, ಶು.೧೩ ಎಂದಿದ್ದು, ೨೬–೧೨–೧೦೯೧ಕ್ಕೆ ಸರಿಹೊಂದುತ್ತದೆ. ಪ್ರಸ್ತುತ ಶಾಸನವು ಚಾಲುಕ್ಯ ತ್ರಿಭುವನಮಲ್ಲ ದಂಡನಾಯಕ ಬಿವಣ್ಣಯ್ಯನು ಕಣ್ಣುಸಾವಿಯ ಧರ್ಮದ ಐತದ ಬಾವಿಗೆ ಆರು ಮತ್ತರು ಭೂಮಿಯನ್ನು ದಾನ ಬಿಡುತ್ತಾನೆ. ಈ ದಣ್ಣನಾಯಕನನ್ನು ಶಾಸನವು ವಿಶೇಷವಾಗಿ ಹೊಗಳುತ್ತದೆ.[೪]

**ವೀರಭದ್ರಗುಡಿ**

| | | | |
|---|---|---|---|
| **ಊರು** | : ಕರಡಕಲ್ಲು | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ವೀರಭದ್ರ ಗುಡಿ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ವಾಯುವ್ಯಕ್ಕೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೨–೧೩ನೇ ಶತಮಾನ | | |

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಲಿಂಗಸೂಗೂರು ಪುರಸಭೆಯ ಒಂದು ಬಡಾವಣೆಯಾಗಿದೆ. ದೇವಾಲಯದಲ್ಲಿ ಗರ್ಭಗೃಹ ಮತ್ತು ತೆರೆದ ಸಭಾಮಂಟಪವಿದೆ. ಇದು ಕಲ್ಯಾಣ ಚಾಲುಕ್ಯರ ವಾಸ್ತುಶೈಲಿಯಲ್ಲಿದೆ. ಕ್ರಿ.ಶ.೧೨–೧೩ನೇ ಶತಮಾನದಲ್ಲಿ ದೇವಾಲಯ ನಿರ್ಮಾಣಗೊಂಡಿದೆ. ಗರ್ಭಗೃಹದಲ್ಲಿ ವಿಜಯನಗರೋತ್ತರ ಪಾಳೆಯಗಾರ ಕಾಲದ ವೀರಭದ್ರನ ಮೂರ್ತಿಶಿಲ್ಪವಿದೆ. ತೆರೆದ ಸಭಾಮಂಟಪ ಅಥವಾ ನವರಂಗ ಭಾಗದಲ್ಲಿ ಎರಡು ಕಂಬಗಳಿದ್ದು, ಅದರ ಮುಂಭಾಗದಲ್ಲಿ ಮತ್ತೆರಡು ಕಂಬಗಳಿವೆ. ಆಲಯದ ಆವರಣಕ್ಕೆ

ಪ್ರಾಕಾರವಿದ್ದು, ಅದರ ಮುಖ್ಯದ್ವಾರದ ಇಕ್ಕೆಲಗಳಲ್ಲಿ ಶಾಖೆಗಳು ಮತ್ತು ದ್ವಾರಪಾಲಕರ ವಿವಿಧ ನೃತ್ಯ ಭಂಗಿಯ ಉಬ್ಬುಶಿಲ್ಪಗಳಿವೆ. ನವರಂಗದಲ್ಲಿನ ಕಂಬಗಳಲ್ಲಿ ಪಟ್ಟಿಕೆಯ ಅಲಂಕರಣಗಳನ್ನು ಕಾಣಬಹುದು.

**ಬಸವೇಶ್ವರ ದೇವಾಲಯ**

**ಊರು** : ಕಸಬಾ ಲಿಂಗಸೂಗೂರು **ಶೈಲಿ** : ಕಲ್ಯಾಣ ಚಾಲುಕ್ಯ

**ಸ್ಮಾರಕ** : ಬಸವೇಶ್ವರ **ಅಭಿಮುಖ** : ಉತ್ತರ

**ಸ್ಥಳ** : ಅಗಸಿಯ ಒಳಗೆ **ಸ್ಥಿತಿ** : ಮಧ್ಯಮ

**ಕಾಲ** : ಕ್ರಿ.ಶ.೧೨-೧೩ನೇ ಶತಮಾನ

ಈ ದೇವಾಲಯವು ಉತ್ತರಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ದಕ್ಷಿಣ ದಿಕ್ಕಿಗೆ ೪ ಕಿ.ಮೀ. ಅಂತರದಲ್ಲಿದೆ. ಗರ್ಭಗೃಹ ಮತ್ತು ತೆರೆದ ಮುಖಮಂಟಪವನ್ನು ಈ ದೇವಾಲಯವು ಹೊಂದಿದೆ. ಗರ್ಭಗೃಹದಲ್ಲಿ ಬಸವನ ಮೂರ್ತಿಶಿಲ್ಪವನ್ನು ಇರಿಸಲಾಗಿದೆ. ಮುಖಮಂಟಪದಲ್ಲಿ ವಿವಿಧ ಶೈಲಿಯ ಕಂಬಗಳು ಇವೆ. ಸಭಾಮಂಟಪದ ಮುಂದೆ ತೆರೆದ ವಿಶಾಲವಾದ ಸ್ಥಳವಿದ್ದು, ದೇವಾಲಯ ಪ್ರವೇಶಕ್ಕೆ ಮೆಟ್ಟಿಲುಗಳಿವೆ. ದೇವಾಲಯಕ್ಕೆ ಗುಮ್ಮಟಾಕಾರದ ಶಿಖರವಿದೆ. ಈ ದೇವಾಲಯಕ್ಕೆ ಬಣ್ಣ ಹಚ್ಚಲಾಗಿದೆ. ಬಸವೇಶ್ವರ ಆಲಯದ ಕಟ್ಟೆಯು ಇತ್ತೀಚಿನ ನಿರ್ಮಾಣವಾಗಿದೆ. ಗುಡಿಯ ಪಕ್ಕದಲ್ಲಿ ಮೈಲಾರಲಿಂಗನ ಗುಡಿಯಿದೆ.

**ರಾಮಲಿಂಗೇಶ್ವರ ದೇವಾಲಯ**

**ಊರು** : ಗುಡಿಹಾಳ(ದೇವಪುರ) **ಶೈಲಿ** : ಕಲ್ಯಾಣ ಚಾಲುಕ್ಯ

**ಸ್ಮಾರಕ** : ರಾಮಲಿಂಗೇಶ್ವರ **ಅಭಿಮುಖ** : ದಕ್ಷಿಣ

**ಸ್ಥಳ** : ಅಗಸಿಯ ಒಳಭಾಗದಲ್ಲಿ **ಸ್ಥಿತಿ** : ಉತ್ತಮ

**ಕಾಲ** : ಕ್ರಿ.ಶ.೧೨-೧೩ನೇ ಶತಮಾನ

ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ೨೦ ಕಿ.ಮೀ. ಅಂತರದಲ್ಲಿದೆ. ಕ್ರಿ.ಶ.೧೧-೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ವಾಸ್ತುಶೈಲಿ ಹೊಂದಿದೆ. ಈ ದೇವಾಲಯವು ತ್ರಿಕೂಟವಾಗಿದ್ದು, ಮೂರು ಗರ್ಭಗೃಹಗಳು, ಅಂತರಾಳ ಮತ್ತು ನವರಂಗಗಳನ್ನು ಹೊಂದಿವೆ. ಪೂರ್ವಾಭಿಮುಖವಾಗಿರುವ ಗರ್ಭಗೃಹಕ್ಕೆ ಅಂತರಾಳವಿದ್ದರೆ ದಕ್ಷಿಣ ಮತ್ತು ಪಶ್ಚಿಮಾಭಿಮುಖವಾಗಿರುವ ಗರ್ಭಗೃಹಗಳಿಗೆ ತೆರೆದ ಅಂತರಾಳಗಳಿವೆ. ಇವೆಲ್ಲವೂ ನವರಂಗಕ್ಕೆ ತೆರೆದುಕೊಳ್ಳುತ್ತವೆ. ದೇವಾಲಯ ಪ್ರವೇಶಕ್ಕೆ ದಕ್ಷಿಣದಲ್ಲಿ ದ್ವಾರ

ಬಾಗಿಲು ಇದೆ. ದ್ವಾರದಲ್ಲಿ ಪಟ್ಟಿಕೆಗಳಿದ್ದು, ಅವುಗಳ ಕೆಳಭಾಗದಲ್ಲಿ ಕುಂಭಗಳ ಉಬ್ಬು ಶಿಲ್ಪಗಳಿವೆ. ನವರಂಗದಲ್ಲಿ ಘನಾಕೃತಿಯ ನಾಲ್ಕು ಕಂಬಗಳಿವೆ. ದೇವಾಲಯ ಛತ್ತಿನವರೆಗೆ ಮೂರು ಕಲ್ಲಿನಲ್ಲಿ ಮುಗಿಸಲಾಗಿದೆ. ದಕ್ಷಿಣಾಭಿಮುಖ ಗರ್ಭಗೃಹದಲ್ಲಿ ನಾಗಶಿಲ್ಪವಿದ್ದರೆ, ಪಶ್ಚಿಮಾಭಿಮುಖದ ಗರ್ಭಗೃಹದಲ್ಲಿ ನಂದಿಯ ಶಿಲ್ಪವಿದೆ. ಈ ದೇವಾಲಯಕ್ಕೆ ಅಧಿಷ್ಠಾನ ಮತ್ತು ಶಿಖರ ಭಾಗಗಳಿಲ್ಲ.

ಪ್ರಸ್ತುತ ದೇವಾಲಯವು ಮಣ್ಣಿನಿಂದ ಆವೃತವಾಗಿದ್ದು, ೧೯೬೧ರಲ್ಲಿ ಮೊದಲ ಬಾರಿಗೆ ಕಂಡುಬಂದಿತ್ತು. ನಂತರ ಅಲ್ಲಿನ ಗ್ರಾಮಸ್ಥರು ಜೀರ್ಣೋದ್ಧಾರ ಮಾಡಿದ್ದಾರೆ. ಈ ಗ್ರಾಮಕ್ಕೆ ಮೊದಲ ದೇವಾಪುರ ಎಂದು ಕರೆಯುತ್ತಿದ್ದರು. ಈ ಊರಿನ ಮೊದಲನೆಯ ಹೆಸರು ಕೆಲಪತ್ರದಲ್ಲಿ ಉಲ್ಲೇಖವಾಗಿದೆ. ಊರಿನಲ್ಲಿ ಜನರು, ಕೋಟೆ ಗೋಡೆಯ ಅವಶೇಷಗಳನ್ನು ಬಳಕೆ ಮಾಡಿಕೊಂಡು ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಈ ದೇವಾಲಯದ ಸಮೀಪದಲ್ಲಿ ಅಂಜನೇಯ ಗುಡಿ ಇದೆ. ಅದರಲ್ಲಿ ಗರ್ಭಗೃಹ ಮತ್ತು ಸಭಾಮಂಟಪಗಳಿವೆ. ದೇವಾಲಯದ ಗರ್ಭಗೃಹದಲ್ಲಿ ಆಂಜನೇಯನ ಶಿಲ್ಪವಿದೆ.

**ವೀರಭದ್ರ ಗುಡಿ**

| | | | |
|---|---|---|---|
| **ಊರು** | : ಗೌಡೂರು | **ಶೈಲಿ** | : ಆಧುನಿಕ |
| **ಸ್ಮಾರಕ** | : ವೀರಭದ್ರ ಗುಡಿ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರಲ್ಲಿ | **ಸ್ಥಿತಿ** | : ಮಧ್ಯಮ |
| **ಕಾಲ** | : ಆಧುನಿಕ | | |

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ಈಶಾನ್ಯ ದಿಕ್ಕಿಗೆ ೨೪ ಕಿ.ಮೀ. ದೂರದಲ್ಲಿದೆ. ಇದು ೧೩೧೦.೧೫ ಹೆಕ್ಟೇರ್ ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಇಲ್ಲಿ ಮೊದಲು ಆದಿಮಾನವರು ವಾಸ ಮಾಡುತ್ತಿದ್ದರು. ಈ ಊರಿನಲ್ಲಿ ಆಧುನಿಕವಾಗಿ ನಿರ್ಮಿಸಿರುವ ವೀರಭದ್ರ ಗುಡಿಯಿದೆ. ಗರ್ಭಗೃಹದಲ್ಲಿ ವೀರಭದ್ರನ ಮೂರ್ತಿಶಿಲ್ಪವಿದೆ. ಊರಿನ ಬಾವಿಯ ಬಳಿ ಕಲ್ಯಾಣ ಚಾಲುಕ್ಯರ ಶಾಸನವಿದೆ. ಶಾಸನವು ತ್ರುಟಿತವಾಗಿದೆ. ಶಾಸನದಲ್ಲಿ ತೇದಿಯ ಉಲ್ಲೇಖವಿದೆ. ಅದರಲ್ಲಿ ಶಕವರ್ಷ ೯೪೭, ಕ್ರೋದನ, ಫಾಲ್ಗುಣ ಸು.೧ ಆದಿತ್ಯವಾರವೆಂದಿದ್ದು, ಇದು ಕ್ರಿ.ಶ.೨೦-೦೭-೧೦೨೬ಕ್ಕೆ ಸರಿಹೊಂದುತ್ತದೆ. ಚಾಲುಕ್ಯ ಅರಸ ಜಯಸಿಂಹನು ಜಯನ್ತಿಪುರದ ನೆಲೆವೀಡಿನಲ್ಲಿದ್ದಾಗ ಕೃಷ್ಣವೇಣಿ ನದಿಯ ತೀರದಲ್ಲಿ ೩೦ ಮತ್ತರು ಕರಿಯ ಭೂಮಿಯನ್ನು ದಾನ ಮಾಡಿದಂತೆ ಉಲ್ಲೇಖವಿದೆ.[೫]

ಶಾಸನದಲ್ಲಿ ವಿವರಗಳು ಹಾಳಾಗಿರುವುದರಿಂದ ಯಾರು ಯಾರಿಗೆ ದಾನ ನೀಡಿದ ವಿವರಗಳು ಲಭ್ಯವಿಲ್ಲ.

**ಕಲ್ಲೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಕಸಬಾ ಲಿಂಗಸೂಗೂರು | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಕಲ್ಲೇಶ್ವರ ದೇವಾಲಯ | **ಅಭಿಮುಖ** | : ಪೂರ್ವ |
| **ಸ್ಥಳ** | : ಅಗಸಿಯ ಒಳಗೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೧ನೇ ಶತಮಾನ | | |

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಲಿಂಗಸೂಗೂರು ತಾಲೂಕಿನಿಂದ ೪ ಕಿ.ಮೀ. ಅಂತರದಲ್ಲಿದೆ. ಕರಡಿಕಲ್ಲು-೪೦೦ ಆಳ್ವಿಕೆಯಲ್ಲಿ ಈ ಊರಿಗೆ ಲಿಂಗ ಎಂದು ಕರೆಯುತ್ತಿದ್ದರು. ಕ್ರಿ.ಶ.೧೧ನೇ ಶತಮಾನದ ಕಲ್ಯಾಣ ಚಾಲುಕ್ಯ ವಾಸ್ತು ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಈ ದೇವಾಲಯವು ಗರ್ಭಗೃಹ ತೆರದ ಅಂತರಾಳ ಮತ್ತು ನವರಂಗವನ್ನು ಹೊಂದಿದೆ. ಗರ್ಭಗೃಹದಲ್ಲಿ ಪ್ರಾಚೀನ ಶಿವಲಿಂಗವಿದೆ. ಗರ್ಭಗೃಹ ಸರಳವಾದ ಬಾಗಿಲುವಾಡ ಹೊಂದಿದೆ. ಇದು ನವರಂಗದೊಂದಿಗೆ ಅಂತರಾಳ ಹೊಂದಿಕೊಂಡಿದೆ. ನವರಂಗದಲ್ಲಿ ಘನಾಕೃತಿಯ ನಾಲ್ಕು ಕಂಬಗಳು ಇವೆ. ಈ ಕಂಬಗಳ ಮಧ್ಯದಲ್ಲಿ ಪೀಠದ ಮೇಲೆ ನಂದಿ ಶಿಲ್ಪವಿದೆ. ನವರಂಗದ ಒಳ ಬದಿಯ ಆಗ್ನೇಯ ಮೂಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಒಂದು ಶಾಸನವಿದೆ. ಇಟ್ಟಿಗೆ ಮತ್ತು ಕಲ್ಲುಗಳನ್ನು ಬಳಸಿ ನವರಂಗದ ಹೊರಭಿತ್ತಿಯನ್ನು ನಿರ್ಮಿಸಲಾಗಿದೆ.

ಗರ್ಭಗೃಹದ ಮೇಲೆ ಪಾಳೆಗಾರ ಶೈಲಿಯ ಗಾರೆ ತ್ರಿತಲ ಶಿಖರವಿದೆ. ಶಿಖರದ ಭಾಗವು ದುಂಡಾಗಿದ್ದು, ಅದರ ಮೇಲೆ ಕಲಶವಿದೆ. ತಲದ ನಾಲ್ಕು ಮೂಲೆಗಳಲ್ಲಿ ಗಾರೆಯ ನಂದಿ ಶಿಲ್ಪಗಳನ್ನು ಇರಿಸಲಾಗಿದೆ. ದೇವಾಲಯ ಜೀರ್ಣೋದ್ಧಾರ ಮಾಡುವ ವೇಳೆ ಈ ವಿಮಾನ ಸೇರಿಸಿದಂತೆ ಕಾಣುತ್ತದೆ. ದೇವಾಲಯದಲ್ಲಿ ಮಹಿಷಮರ್ಧಿನಿಯ ಶಿಲ್ಪವಿದೆ.[೬]

**ರಾಮಲಿಂಗೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಕೋಟಾ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ದೊಡ್ಡಹಳ್ಳದ ಬಲದಂಡೆಯಲ್ಲಿ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೦-೧೧ನೇ ಶತಮಾನ | | |

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ತಾಲ್ಲೂಕು ಕೇಂದ್ರದಿಂದ ೨೫ ಕಿ.ಮೀ. ಅಂತರದಲ್ಲಿದೆ. ಇದನ್ನು ದೇಶೀಯರು ಕ್ವಾಟಿ ಎಂದು ಕರೆಯುತ್ತಾರೆ. ಇದಕ್ಕೆ ಮೇಧಾವೀರಾಯನಕೋಟೆ, ಮದ್ದರಾಯನ ಕೋಟೆ ಎಂತಲೂ ಕರೆಯುತ್ತಾರೆ.[೬] ಈ ದೇವಾಲಯವು ಗರ್ಭಗೃಹ, ತೆರೆದ ಅಂತರಾಳ ಮತ್ತು ತೆರೆದ ನವರಂಗವನ್ನು ಹೊಂದಿದೆ. ಗ್ರಾಮದ ಹೊರವಲಯದ ಹಳ್ಳದ ಬಲದಂಡೆಯ ಎತ್ತರವಾದ ದೊಡ್ಡ ಬಂಡೆಯ ಮೇಲೆ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿದೆ. ಕ್ರಿ.ಶ.೧೧ನೇ ಶತಮಾನದಾಗಿದ್ದು, ಕಲ್ಯಾಣ ಚಾಲುಕ್ಯರ ವಾಸ್ತುಶೈಲಿ ಹೊಂದಿದೆ. ಇದು ತೀರ ಜೀರ್ಣಾವ್ಯವಸ್ಥೆಯಲ್ಲಿದೆ. ಗರ್ಭಗೃಹದಲ್ಲಿ ಲಿಂಗಪೀಠ ಮಾತ್ರವಿದೆ. ಗರ್ಭಗೃಹದ ಬಾಗಿಲ ದ್ವಾರಶಾಖೆಗಳಲ್ಲಿ ತ್ರಿಪಟ್ಟಿಕೆಗಳಿವೆ. ಇವುಗಳ ಒಂದು ಪಟ್ಟಿಕೆಯಲ್ಲಿ ವಿವಿಧ ಪ್ರಾಣಿಗಳ ಚಿತ್ರಣ ಮತ್ತು ಲತಾ ಸುರುಳಿಗಳ ಅಲಂಕರಣೆಗಳಿವೆ. ಗರ್ಭಗೃಹದ ಹೊರಭಾಗವು ಕಲ್ಲಿನಿಂದಲೇ ರಚಿತವಾಗಿದೆ. ಗರ್ಭಗೃಹದ ಎಡಭಾಗವು (ಹೊಳದಂಡೆಯ ಭಾಗ) ಬಿದ್ದಿದ್ದು, ಶಿಥಿಲಗೊಳ್ಳುತ್ತಿದೆ. ಗರ್ಭಗೃಹದ ತ್ರಿಪಟ್ಟಿಕೆಯ ಬಾಗಿಲ ವಾಡದಲ್ಲಿ ಗಣೇಶ, ನೃತ್ಯ ಶೈಲಿಯ ಸ್ತ್ರೀ ಹಾಗೂ ವಿವಿಧ ಪ್ರಾಣಿಗಳ ಉಬ್ಬುಶಿಲ್ಪಗಳು ಮತ್ತು ಲತಾ ಸುರಳಿಗಳ ಅಲಂಕರಣೆಗಳಿವೆ. ಗರ್ಭಗೃಹದ ಬಾಗಿಲ ಇಕ್ಕೆಲಗಳಲ್ಲಿ ನಾಗಶಿಲ್ಪ ಗಳಿವೆ. ಗರ್ಭಗೃಹದ ಹಳ್ಳದ ದಂಡೆ ಕಡೆಯ ಹೊರಭಾಗ ಬಿದ್ದಿದ್ದು, ಜೀರ್ಣಾವಸ್ಥೆಯಲ್ಲಿದೆ. ನವರಂಗದ ದಕ್ಷಿಣ ಭಾಗದಿಂದ ದೇವಾಲಯವನ್ನು ಪ್ರವೇಶಿಸಲು ದ್ವಾರವನ್ನು ರೂಪಿಸಲಾಗಿದೆ. ಅದರ ಸೋಪಾನಗಳ ಮೂಲಕ ಹೊಳೆಯನ್ನು ತಲುಪಬಹುದು.[೮]

ತ್ರುಟಿತ ಶಾಸನವು ಹೊಳೆಬದಿಗೆ ಬಿದ್ದಿರುವುದು ವರದಿಯಾಗಿದೆ. ಶಾಸನವು ಬಹುತೇಕ ನಾಶವಾಗಿದೆ. ವಿವರಗಳು ಸ್ಪಷ್ಟವಾಗಿಲ್ಲ. ಲಿಪಿ ದೃಷ್ಟಿಯಿಂದ ಕ್ರಿ.ಶ.ಸು.೧೧ನೆಯ ಶತಮಾನಕ್ಕೆ ಸೇರುತ್ತದೆ.[೯]

**ಶಿವಲಿಂಗೇಶ್ವರ ಗುಡಿ**

| | | | |
|---|---|---|---|
| **ಊರು** | : ಚಿಕ್ಕನಗನೂರು | **ಶೈಲಿ** | : ಆಧುನಿಕ |
| **ಸ್ಮಾರಕ** | : ಶಿವಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಮಧ್ಯೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಆಧುನಿಕ | | |

ಪ್ರಾಚೀನ ಪಾಣಿಪೀಠದ ಮೇಲೆ ಲಿಂಗವಿದೆ. ಗುಡಿಯನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ. ಗುಡಿಯಲ್ಲಿ ಗರ್ಭಗೃಹ ಮತ್ತು ಸಭಾಮಂಟಪಗಳಿವೆ. ಊರಿನಲ್ಲಿ ರಾಮಲಿಂಗೇಶ್ವರ ಗುಡಿಯಿದ್ದು, ಅದರಲ್ಲಿ ಸಣ್ಣ ಲಿಂಗವಿದೆ.

**ಗ್ಯಾನಪ್ಪಯ್ಯ ಗುಡಿ**

**ಊರು** : ಗೋನವಾರ  
**ಸ್ಮಾರಕ** : ಗ್ಯಾನಪ್ಪಯ್ಯ  
**ಸ್ಥಳ** : ಸರ್ಕಾರಿ ಶಾಲೆ ಎದುರು  
**ಕಾಲ** : ಆಧುನಿಕ  
**ಶೈಲಿ** : –  
**ಅಭಿಮುಖ** : ಪೂರ್ವ  
**ಸ್ಥಿತಿ** : –

ಇದು ತಾಲ್ಲೂಕಿನಿಂದ ದಕ್ಷಿಣ ದಿಕ್ಕಿಗೆ ಇದೆ. ಗ್ರಾಮದ ಸರ್ಕಾರ ಶಾಲೆ ಎದುರುಗಡೆ ಪೂರ್ವಾಭಿಮುಖವಾಗಿ ನಿರ್ಮಾಣಗೊಂಡಿದೆ. ಇದನ್ನು ನವೀಕರಿಸಲಾಗಿದೆ.

ಗುಡಿಯನ್ನು ಕಟ್ಟುತ್ತಿರುವಾಗ ಶಕ ೧೬೦೩ರ ಒಂದು ಶಾಸನವು ಪತ್ತೆಯಾಗಿದೆ. ಗುಡಿಯ ಪಕ್ಕದ ಗುಂಡಿಗಳಲ್ಲಿ ಪ್ರಾಚೀನ ಕಾಲದ ಕೆಲವು ಮೃತ್ಪಾತ್ರೆಯ ಚೂರುಗಳು ದೊರಕಿವೆ. ಇವುಗಳು ಕ್ರಿ.ಶ.೧೦–೧೧ನೇ ಶತಮಾನಕ್ಕೆ ಸೇರಬಹುದಾಗಿದೆ.

ಅದೇ ಊರಲ್ಲಿ ಪಶ್ಚಿಮ ದಿಕ್ಕಿನಲ್ಲಿರುವ ಬಾಲಾಜಿಸಿಂಗ್ ಅವರ ಹೊಲದಲ್ಲಿರುವ ಶಾಸನವು ಕ್ರಿ.ಶ.೧೧ನೇ ಶತಮಾನಕ್ಕೆ ಸೇರಿದ್ದಾಗಿದೆ. ಗೋನೂರು ಕಲಿದೇವರ ಸೇವೆಗೆ ಕೆಲವೂರು(ಕೇಲೂರು) ದಾರಿಯ ದಕ್ಷಿಣಕ್ಕೆ ನಾಲ್ಕು ಮತ್ತರು ೫೦೦ ಕಂಬ ಭೂಮಿಯನ್ನು ಹಿರಿಯ ಕೋಲಲ್ಲಿ ಅಳೆದು ಬಿಡಲಾಗಿದೆ. ಶಾಸನವು ಅಹುವಮಲ್ಲನ(ಆಹವಮಲ್ಲ) ಕಾಲಕ್ಕೆ ಸೇರಿದ್ದಾಗಿದೆ.[೧೦]

**ವೀರಭದ್ರೇಶ್ವರ ದೇವಾಲಯ**

**ಊರು** : ತಲೇಖಾನ  
**ಸ್ಮಾರಕ** : ವೀರಭದ್ರೇಶ್ವರ  
**ಸ್ಥಳ** : ಊರ ಮಧ್ಯೆ  
**ಕಾಲ** : ಕ್ರಿ.ಶ.೧೦–೧೧ನೇ ಶತಮಾನ  
**ಶೈಲಿ** : ಕಲ್ಯಾಣ ಚಾಲುಕ್ಯ  
**ಅಭಿಮುಖ** : ಪೂರ್ವ  
**ಸ್ಥಿತಿ** : ಮಧ್ಯಮ

ಈ ದೇವಾಲಯವು ಲಿಂಗಸೂಗೂರು ತಾಲ್ಲೂಕಿನಿಂದ ದಕ್ಷಿಣ ದಿಕ್ಕಿಗೆ ಇದೆ. ದೇವಾಲಯದ ಒಳಭಾಗವು ಮೂರು ಗರ್ಭಗೃಹಗಳ ಎರಡು ಪ್ರವೇಶದ್ವಾರ ಮತ್ತು ಎರಡು ನವರಂಗ ಭಾಗಗಳಿರುವ ವಿಶಿಷ್ಟ ದೇವಾಲಯವಾಗಿದೆ. ಪೂರ್ವಾಭಿಮುಖವಾಗಿರುವ ಎರಡು ಗರ್ಭಗೃಹಗಳಿಗೆ ಸಮಾನಾಂತರವಾಗಿ ಎರಡು ನವರಂಗ ಭಾಗಗಳು ಮತ್ತು ಪ್ರವೇಶ ದ್ವಾರಗಳಿವೆ. ಮೊದಲ ಗರ್ಭಗುಡಿಯಲ್ಲಿ ವೀರಭದ್ರನ ಮೂರ್ತಿಶಿಲ್ಪವಿದ್ದು, ಅದರ ಮುಂದೆ

ತೆರೆದ ಅಂತರಾಳ ಭಾಗವಿದೆ. ಇವುಗಳನ್ನು ಹಲವು ಬಾರಿ ಜೀರ್ಣೋದ್ಧಾರ ಮಾಡಿದ್ದಾರೆ. ಈ ದೇವಾಲಯವನ್ನು ಎತ್ತರದ ಕಟ್ಟೆಯ ಮೇಲೆ ನಿರ್ಮಿಸಲಾಗಿದೆ. ದೇವಾಲಯದ ವಿಸ್ತರಣಾ ಸಮಯದಲ್ಲಿ, ದೇವಾಲಯದ ಒಳಭಾಗಗಳನ್ನು ಅಷ್ಟಾಗಿ ಕೆಡವದೆ ವಿಸ್ತರಿಸಿರುವುದರಿಂದ ಎರಡು ಪ್ರವೇಶದ್ವಾರಗಳು ಮತ್ತು ಮೂರು ನವರಂಗ ಭಾಗಗಳು ಸೇರ್ಪಡೆಗೊಂಡಿವೆ. ನವರಂಗದ ಗೋಡೆಯಲ್ಲಿ ಒಂದು ಶಾಸನ ಕಲ್ಲಿದೆ. ಸದರಿ ದೇವಾಲಯವು ಪ್ರಾಚೀನ ದೇವಾಲಯಗಳಲ್ಲಿ ಒಂದಾಗಿದೆ. ನವರಂಗದ ಕಂಬಗಳು ಸಾಧಾರಣ ಅಲಂಕರಣೆಯೊಂದಿಗೆ ಇರುವುದು ಗಮನಾರ್ಹ. ಉತ್ತರಾಭಿಮುಖ ಗರ್ಭಗುಡಿಯ ಲಲಾಟಬಿಂಬದಲ್ಲಿ ಕುಂಭದ ಉಬ್ಬುಶಿಲ್ಪವಿದೆ. ಆದ್ದರಿಂದ ಪ್ರಾಚೀನ ಕುರುಹುಗಳು ಪ್ರಸ್ತುತ ಕಂಡುಬರುವುದಿಲ್ಲ. ಅಂತರಾಳದ ಮುಂಭಾಗದಲ್ಲಿ ನಾಲ್ಕು ಕಂಬಗಳಿರುವ ನವರಂಗಭಾಗವಿದೆ. ಇದರ ಎಡಬದಿಗೆ ಸಹ ನಾಲ್ಕು ಕಂಬಗಳಿರುವ ಮಂಟಪದಂತಿರುವ ರಚನೆಯ ಮಧ್ಯೆ ವೇದಿಕೆ ರಚಿಸಲಾಗಿದೆ. ಇದರ ಪಕ್ಕದಲ್ಲಿ ಮತ್ತೊಂದು ನವರಂಗ ಭಾಗವಿದ್ದು, ಅದರ ಎದುರು ಪೂರ್ವಾಭಿಮುಖವಾಗಿ ಗರ್ಭಗೃಹ ಮತ್ತು ತೆರೆದ ಅಂತರಾಳವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದೆ. ಮುಂಭಾಗದ ನವರಂಗದ ಮಧ್ಯದಲ್ಲಿ ವೇದಿಕೆಯ ಮೇಲೆ ನಂದಿಯ ಶಿಲ್ಪವಿದೆ. ಉತ್ತರಾಭಿಮುಖವಾಗಿರುವ ಗರ್ಭಗೃಹದಲ್ಲಿ ಅಮರಯ್ಯನ ಲಿಂಗವಿದೆ. ತೆರೆದ ಅಂತರಾಳ ಭಾಗದಲ್ಲಿ ನಂದಿಯ ಶಿಲ್ಪವನ್ನು ಇರಿಸಲಾಗಿದೆ. ಇದಕ್ಕೆ ಅಂಟಿಕೊಂಡಂತೆ ಇರುವ ನವರಂಗದ ಭಾಗದಲ್ಲಿ ಕೋಷ್ಟಗಳಿವೆ. ಸೂರ್ಯನ ಪಾಣಿಪೀಠ ಮತ್ತು ಲಿಂಗವನ್ನು ಇರಿಸಲಾಗಿದೆ. ಅಂತಯೇ ಗಣಪತಿಯ ಶಿಲ್ಪವನ್ನು ಸಹ ಅಲ್ಲಿ ಕಾಣಬಹುದು. ಇಲ್ಲಿನ ಮತ್ತೊಂದು ಕೋಷ್ಟದಲ್ಲಿ ವೀರಭದ್ರನ ಮೂರ್ತಿಶಿಲ್ಪವಿದೆ. ಈ ದೇವಾಲಯದಲ್ಲಿ ಒಟ್ಟು ೧೨ ಕಂಬಗಳಿವೆ. ನವರಂಗ ಭಾಗಗಳು ಸರಳವಾಗಿದ್ದು, ರಾಷ್ಟ್ರಕೂಟರ ಕೊನೆಯ ಘಟ್ಟ ಅಥವಾ ಆದಿಕಲ್ಯಾಣ ಚಾಲುಕ್ಯರ ಶೈಲಿಯಲ್ಲಿದೆ. ವೀರಭದ್ರನಿರುವ ಗರ್ಭಗೃಹದ ಮೇಲೆ ಆಧುನಿಕ ಶಿಖರವಿದೆ. ಉಳಿದ ಎರಡು ಗರ್ಭಗೃಹಗಳಿಗೆ ಶಿಖರಗಳಿಲ್ಲ. ಬಹುಶಃ ಈ ದೇವಾಲಯವು ದ್ವಿಕೂಟವಾಗಿದ್ದು, ನಂತರ ಕಾಲಘಟ್ಟದಲ್ಲಿ ತ್ರಿಕೂಟವಾಗಿ ವಿಸ್ತಾರ ಮಾಡಿರಬಹುದು.

ತಲೆಖಾನ್ ಗ್ರಾಮದ ಮಸೀದಿಯ ಪಕ್ಕದ ಬಂಡೆಯ ಮೇಲಿರುವ ಶಾಸನವು ಕ್ರಿ.ಶ.೧೦೩೩ರ ಕಲ್ಯಾಣ ಚಾಲುಕ್ಯ ಅರಸ ಜಗದೇಕಮಲ್ಲನ ಕಾಲಕ್ಕೆ ಸೇರಿದ್ದು, ಶಾಸನವು ತಲೆಖಾನ್ ಗ್ರಾಮವನ್ನು ತಂಕಬಾವಿ ಎಂದು ಕರೆಯಲಾಗಿದ್ದು, ಅದು ಕೆಳವಾಡಿ-೩೦೦ರಲ್ಲಿ ಪ್ರಸಿದ್ಧಿ ಪಡೆದ ಅಗ್ರಹಾರವಾಗಿತ್ತು ಎಂದು ಉಲ್ಲೇಖಿಸಿದೆ.[೧೧]

**ಗುರುಲಿಂಗೇಶ್ವರ ಗುಡಿ**

| | | | |
|---|---|---|---|
| **ಊರು** | : ಬೊಮ್ಮನಹಾಳ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಗುರುರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಮಧ್ಯೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೨-೧೩ನೇ ಶತಮಾನ | | |

ಗುಡಿಗೆ ಗರ್ಭಗೃಹ ಮತ್ತು ಉದ್ದನೆಯ ಅಂತರಾಳವಿದೆ. ನವರಂಗವು ಇಲ್ಲ. ದೇವಾಲಯಕ್ಕೆ ಸಾಧಾರಣ ಅಧಿಷ್ಠಾನವಿದ್ದು, ಶಿಖರ ಭಾಗವಿಲ್ಲ, ಅಂತರಾಳದ ಭಾಗದಲ್ಲಿ ಎರಡು ಗೋಡೆ ಗಂಬಗಳನ್ನು ಕಾಣಬಹುದು. ಗರ್ಭಗೃಹದಲ್ಲಿ ಪ್ರಾಚೀನ ಶಿವಲಿಂಗವಿದ್ದು, ದೇವಾಲಯವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಅಂತರಾಳ ಭಾಗ ತಲುಪಲು ಕೈಪಿಡಿ ಗೋಡೆಯಿರುವ ಮೆಟ್ಟಿಲುಗಳಿವೆ.

ಸದರಿ ದೇವಾಲಯವನ್ನು ಉತ್ತರದ ಅಧಿಷ್ಠಾನದ ಮೇಲೆ ನಿರ್ಮಿಸುವ ಉದ್ದೇಶವನ್ನು ಹೊಂದಿದ್ದು, ಆದರೆ ಕಾರಣಾಂತರಗಳಿಂದ ನಿರ್ಮಿಸದೆ, ಅಧಿಷ್ಠಾನದ ಮಧ್ಯೆ ಸಣ್ಣ ಪ್ರಮಾಣದಲ್ಲಿ ನಿರ್ಮಿಸಿರುವ ಸಾಧ್ಯತೆಗಳಿವೆ. ಆಲಯದ ನವರಂಗ ಭಾಗವು ಅಪೂರ್ಣ ವಾಗಿರುವುದನ್ನು ಕಾಣಬಹುದು. ದೇವಾಲಯವನ್ನು ಕೆಂಪು ಕಣಶಿಲೆಯಿಂದ ಕಟ್ಟಲಾಗಿದೆ. ಅಂತರಾಳದಲ್ಲಿ ನವರಂಗ ಭಾಗದಂತಿರುವ ಸ್ಥಳದಲ್ಲಿರುವ ಗರ್ಭಗೃಹದಲ್ಲಿನ ಶಿವಲಿಂಗಕ್ಕೆ ಅಭಿಮುಖವಾಗಿ ಬಸವನ ಶಿಲ್ಪವಿದೆ. ಗುಡಿಯ ಮುಂಭಾಗದಲ್ಲಿ ವೀರಗಲ್ಲುಗಳಿವೆ.[೧೨]

**ರಾಮಲಿಂಗೇಶ್ವರ(ಈಶ್ವರ) ದೇವಾಲಯ**

| | | | |
|---|---|---|---|
| **ಊರು** | : ಮಾವಿನಬಾವಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಸಮೀಪ | **ಸ್ಥಿತಿ** | : ಕನಿಷ್ಠ |
| **ಕಾಲ** | : ಕ್ರಿ.ಶ.೧೨-೧೩ನೇ ಶತಮಾನ | | |

ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿರುವ ಈ ದೇವಾಲಯವು ಸಂಪೂರ್ಣವಾಗಿ ಶಿಥಿಲಗೊಂಡಿದೆ. ಅದರ ವಾಸ್ತು ಅವಶೇಷಗಳು ಅಲ್ಲೇ ಬಿದ್ದಿರುವುದನ್ನು ಕಾಣಬಹುದು. ಗುಡಿಯ ಕೆಲವು ಭಾಗಗಳು ಕಂಡುಬರುತ್ತವೆ. ಗರ್ಭಗೃಹದ ಬಾಗಿಲವಾಡದ ಲಲಾಟಬಿಂಬ ಭಾಗದಲ್ಲಿ ದೇವಾಲಯದ ಶಿಖರ ಮಾದರಿಯ ೫ ಉಬ್ಬುಶಿಲ್ಪಗಳಿವೆ. ಸರಳ ಬಾಗಿಲವಾಡವನ್ನು ಹೊಂದಿದೆ. ನವರಂಗ ಭಾಗವು ನಶಿಸಿದ್ದು, ಗುಡಿಯ ಭುವನೇಶ್ವರಿ ಮತ್ತು ಮಾಡಿನ ಭಾಗಗಳು ಕೆಳಗೆ ಬಿದ್ದು ನಾಶಗೊಂಡಿವೆ. ಗರ್ಭಗೃಹದಲ್ಲಿ ಪ್ರಾಚೀನ ಶಿವಲಿಂಗವಿದೆ.[೧೩]

## ರಾಮಲಿಂಗೇಶ್ವರ ದೇವಾಲಯ

ಊರು : ಮುದಗಲ್ಲು
ಸ್ಮಾರಕ : ರಾಮಲಿಂಗೇಶ್ವರ
ಸ್ಥಳ : ಕೋಟೆ ಒಳಗೆ
ಕಾಲ : ಕ್ರಿ.ಶ.೧೨-೧೩ನೇ ಶತಮಾನ
ಶೈಲಿ : ಕಲ್ಯಾಣ ಚಾಲುಕ್ಯ
ಅಭಿಮುಖ : ಪೂರ್ವ
ಸ್ಥಿತಿ : ಉತ್ತಮ

ಈ ದೇವಾಲಯವು ಲಿಂಗಸೂಗೂರು ತಾಲ್ಲೂಕಿನಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿದೆ. ದೇವಾಲಯದ ಒಳಭಾಗವು ಮೂರು ಗರ್ಭಗೃಹಗಳು, ಒಂದು ತೆರೆದ ಅಂತರಾಳ ಮತ್ತು ನವರಂಗಗಳನ್ನು ಹೊಂದಿದೆ. ಇದೊಂದು ತ್ರಿಕೂಟ ದೇವಾಲಯ, ಮುಖ್ಯ ಗರ್ಭಗೃಹವು ಪೂರ್ವಾಭಿಮುಖವಾಗಿದ್ದು, ಇದರಲ್ಲಿ ಹೊಸಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದ್ದು, ದ್ವಾರಬಂಧದ ಮೇಲೆ ಶಿಖರಗಳ ಉಬ್ಬು ಕೆತ್ತನೆಯಿದೆ. ದೇವಾಲಯಕ್ಕೆ ಅಧಿಷ್ಠಾನವಿದ್ದು, ಶಿಖರವಿಲ್ಲ, ನವರಂಗದ ಮುಂಭಾಗದಲ್ಲಿ ಎಡಬದಿಗೆ ದೇವಗಿರಿ ಯಾದವರ ಕಾಲದ ಶಾಸನವಿದೆ. ಗುಡಿಯನ್ನು ಜೀರ್ಣೋದ್ಧಾರ ಮಾಡಿ ಸಂರಕ್ಷಿಸಲಾಗಿದೆ. ಕಣಶಿಲೆಯಿಂದ ಗುಡಿಯನ್ನು ನಿರ್ಮಿಸಲಾಗಿದೆ. ಬಾಗಿಲವಾಡವು ತ್ರಿಶಾಖೆಗಳಿವೆ. ದ್ವಾರಪಾಲಕರ ಉಬ್ಬುಶಿಲ್ಪಗಳನ್ನು ಒಳಗೊಂಡಿದೆ. ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿ ಹನುಮಂತನ ಹಾಗೂ ಉತ್ತರಾಭಿಮುಖ ಗರ್ಭಗುಡಿಯಲ್ಲಿ ಗಣೇಶನ ಶಿಲ್ಪವಿದೆ. ನವರಂಗದ ಮಧ್ಯದಲ್ಲಿ ವೇದಿಕೆಯಿದ್ದು ಅದರ ಸುತ್ತಲಿರುವ ಕಂಬಗಳು ಘನಾಕೃತಿಯಲ್ಲಿವೆ. ಎರಡು ದೇವಕೋಷ್ಟಗಳನ್ನು ಪೂರ್ವಾಭಿಮುಖ ಭಿತ್ತಿಯಲ್ಲಿ ಕಾಣಬಹುದು. ನವರಂಗದ ಭಾಗವು ಅಪೂರ್ಣವಾಗಿದ್ದು, ಅದರ ಮುಂಭಾಗವನ್ನು ತೆರೆದು ಬಿಡಲಾಗಿದೆ. ವಿಸ್ತಾರವಾದ ಪ್ರಾಂಗಣವನ್ನು ಕಟ್ಟೆಯ ಮೇಲೆ ನಿರ್ಮಿಸಲಾಗಿದೆ. ನಾಲ್ಕು ಪಾವಟಿಗೆಗಳ ಮೂಲಕ ದೇವಾಲಯವನ್ನು ಪ್ರಾಂಗಣದಿಂದ ಪ್ರವೇಶಿಸಬಹುದು.

ದೇವಾಲಯದಲ್ಲಿರುವ ಶಾಸನವು ಶಕವರ್ಷ ೧೧೮೮ ಎಂದಿದ್ದು ಅದು ೯-೯-೧೯೧೩ಕ್ಕೆ ಸರಿ ಹೊಂದುತ್ತದೆ. ದೇವಗಿರಿಯ ಯಾದವ ವಂಶದ ಸಿಂಘಣನ ಆಳ್ವಿಕೆಯಲ್ಲಿ ಅವನ ದಂಡನಾಥನಾದ ದಾಮೋದರನನ್ನು ಹೆಸರಿಸಿದೆ. ಎಡದೋರೆ, ಕರಡಿಕಲ್ಲು-೩೦೦, ಮುದಗಲ್ಲನ್ನು ವರ್ಣಿಸಿದೆ. ಈ ಪ್ರದೇಶವನ್ನು ಸಾಮಂತರಾದ ಕದಂಬ ವಶಂದ ಬಿಜ್ಜರಸ ಆಳುತ್ತಿದ್ದ. ಮುದಗಲ್ಲಿನ ಸಮಸ್ತ ಊರೊಡೆಯರು, ವರ್ತಕ(ಐಯ್ಯಾವೊಳೆ) ವೈಶ್ಯ ಕುಲದ ಸಮಸ್ತ ನಖರಗಳು, ಪ್ರಮುಖರು ಒಂದೇ ಮನಸ್ಸಿನಿಂದ ಚಂದ್ರಗ್ರಹಣದ ದಿನ ನಖರೇಶ್ವರ ಮತ್ತು ಪ್ರಸನ್ನ ಚನ್ನಕೇಶದ ದೇವರ ಸೇವೆಗಾಗಿ ಸರ್ವಬಾಧಾ ಪರಿಹಾರವಾಗಿ ನಾನಾ

ಕಡೆ ಕೆಲವು ಭೂಮಿಯನ್ನು, ದೇವರ ನಂದಾದೀಪಕ್ಕೆ ಒಂದು ಗಾಣವನ್ನು ದಾನ ಮಾಡಲಾಗಿದೆ. ಅಲ್ಲದೆ ವೈಶ್ಯರ ಮನೆ-ಮದುವೆಯಲ್ಲಿ, ಚಾಲದಲ್ಲಿ, ಮೈನೆರದಲ್ಲಿ ಇನ್ನೂ ಮುಂತಾದ ಸಮಯಗಳಲ್ಲಿ ಇಂತಿಷ್ಟು ಕೂಡಬೇಕೆಂದು ನಿಯಮ ಮಾಡಿ ದಾನ ಬಿಡಲಾಗಿದೆ.[೧೪]

ಈ ದೇವಾಲಯದಲ್ಲಿದ್ದ ಮೂಲ ಶಿಲ್ಪವು ಲಿಂಗ ರೂಪದಲ್ಲಿ ಇತ್ತು. ಆದರೆ ಯುದ್ಧ ಕಾಲದಲ್ಲಿ ರಾಮಲಿಂಗಕ್ಕೆ ಆಕಸ್ಮಿಕವಾಗಿ ಬೆಂಕಿ ತಗಲಿ ಭಿನ್ನಗೊಂಡಿತು. ಮುದಗಲ್ಲು ಪಟ್ಟಣದ ಮೂರು ವ್ಯಕ್ತಿಗಳು ಹೊಸ ಲಿಂಗವನ್ನು ಮಾಡಿಸಿ, ಅದರ ಪ್ರತಿಷ್ಠಾನದ ಕಾರ್ಯವನ್ನು, ಮೈಸೂರು ವಿಭಾಗದ ಪಟ್ಟಾಧ್ಯಕ್ಷರಾದ ಶ್ರೀ ವೇ.ಮೂ.ಬಸವರಾಜ ಮಹಾಸ್ವಾಮಿಗಳವರು ೧೯೫೯ರಲ್ಲಿ ನೆರವೇರಿಸಿದರೆಂದು ತಿಳಿದುಬರುತ್ತದೆ.[೧೫]

ಪಟ್ಟಣದ ಅರಬಾವಿ ಪ್ರವೇಶದ್ವಾರದ ಮೊದಲ ಕಂಬದಲ್ಲಿರುವ ಕ್ರಿ.ಶ.೧೦೬೫ರ ಕಲ್ಯಾಣ ಚಾಲುಕ್ಯರ ಕಾಲದ ಶಾಸನದಲ್ಲಿ ಕರ್ಣ ಚಾಮುಂಡಯ್ಯ ಮತ್ತು ದಾನಪ್ಪಯ್ಯರು ೩೦೦ ಮಹಾಜನಗಳಿಗೆ ಭೂಮಿಯನ್ನು ನೀಡುವುದರೊಂದಿಗೆ ಮುದಗಲ್ಲು ಅಗ್ರಹಾರಕ್ಕೆ ಅರವತ್ತು ಕುಳ ಭೂಮಿಯನ್ನು ನೀಡುತ್ತಾರೆ. ಇದರಿಂದ ಮುದಗಲ್ಲು ಒಂದು ಅಗ್ರಹಾರ ವಾಗಿತ್ತೆಂದು ತಿಳಿಯಬಹುದು.[೧೬]

**ಎಮ್ಮೆ ಬಸವ ದೇವಾಲಯ**

| | |
|---|---|
| **ಊರು** : ಮುದಗಲ್ಲು | **ಶೈಲಿ** : ಕಲ್ಯಾಣ ಚಾಲುಕ್ಯ |
| **ಸ್ಮಾರಕ** : ಎಮ್ಮೆ ಬಸವ | **ಅಭಿಮುಖ** : ಪೂರ್ವ |
| **ಸ್ಥಳ** : ಕೋಟೆ ಒಳಗೆ | **ಸ್ಥಿತಿ** : ಮಧ್ಯಮ |
| **ಕಾಲ** : ಕ್ರಿ.ಶ.೧೨-೧೩ನೇ ಶತಮಾನ | |

ಈ ದೇವಾಲಯ ಪೂರ್ವಾಭಿಮುಖವಾಗಿದ್ದು, ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿದೆ. ಈ ದೇವಾಲಯದ ಒಳಭಾಗವು ಗರ್ಭಗೃಹ ಮತ್ತು ತೆರೆದ ಪ್ರಾಂಗಣ ಶಿಥಿಲವಾಗಿದೆ.

ಈ ದೇವಾಲಯಕ್ಕೆ ಬಿಡಿಕಲ್ಲುಗಳನ್ನು ಇರಿಸಿ ಕಟ್ಟಲಾಗಿದೆ. ಈ ಗುಡಿಯ ಮುಂಭಾಗ ದಲ್ಲಿ ದೊಡ್ಡ ಬಸವನ ಶಿಲ್ಪವು ನೆಲದಲ್ಲಿ ಹೂತಿದೆ. ಬಿಜಾಪುರದ ಅಲಿ ಆದಿಲ್‌ಶಾಹನು ಮುದುಗಲ್ಲು ಕೋಟೆಯನ್ನು ವಶಪಡಿಸಿಕೊಂಡ ತರುವಾಯ, ತನ್ನೊಂದಿಗೆ ತಂದಿದ್ದ ಎರಡು ಆಲಂಗಗಳಲ್ಲಿ ಒಂದನ್ನು ಬಾರುದ್ ಕೋಟದಲ್ಲಿ ಇರಿಸಿದನು. ನಂತರ ಅವುಗಳನ್ನು ಕೋಟೆಯ ಒಳಗಿದ್ದ ರಂಗನಾಥ ದೇವಾಲಯದ ಪಕ್ಕದಲ್ಲಿ ಇರಿಸಿದನು. ಅದಕ್ಕೆ ಹುಸೇನಿ

ಆಲಂದರ್ಗಾ ಎಂದು ಹೆಸರಿಸಲಾಯಿತು. ನಿಜಾಮಶಾಹಿಗಳ ಗೆಜೆಟಿಯರ್‌ನಲ್ಲಿರುವ ಉಲ್ಲೇಖದಂತೆ, ಈ ದರ್ಗಾದಲ್ಲಿ ಮೊಹರಂ ಹಬ್ಬವನ್ನು ಆಚರಿಸಲು ಪ್ರಾರಂಭಿಸಿದರು. ಇಂದಿಗೂ ಮೊಹರಂ ಅನ್ನು ಇಲ್ಲಿ ಆಚರಿಸಲಾಗುತ್ತದೆ.[೧೭]

**ರಾಮಲಿಂಗೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಯರಡೋಣಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಘುಲಬಾವಿ ರಸ್ತೆಯಲ್ಲಿನ ಬೆಟ್ಟದಲ್ಲಿ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೩-೧೪ನೇ ಶತಮಾನ | | |

ಗರ್ಭಗೃಹ ಮಾತ್ರ ಹೊಂದಿರುವ ಈ ದೇವಾಲಯದಲ್ಲಿ ಲಿಂಗವಿದೆ. ಹೊರಭಾಗದ ಗೂಡುಗಳಲ್ಲಿ ಸೂರ್ಯನ ಪಾಣಿಪೀಠವಿದೆ. ಎರಡು ಭಾಗವಾಗಿ ಒಡೆದಿರುವ ಪೀಠಗಳಲ್ಲಿ ಲಿಂಗವನ್ನು ಸ್ಥಾಪಿಸಲಾಗಿದೆ. ಭಗ್ನ ಸೂರ್ಯನ ಶಿಲ್ಪವನ್ನು ಪಕ್ಕದಲ್ಲಿರುವ ಬೇವಿನಮರದ ಕಟ್ಟೆಯಲ್ಲಿ ಸ್ಥಾಪಿಸಲಾಗಿದೆ. ಬಳಪದ ಕಲ್ಲಿನ ಸಪ್ತಮಾತೃಕೆ ಫಲಕ ಮತ್ತು ಭಗ್ನ ಮೂರ್ತಿ ಶಿಲ್ಪಗಳ ಅವಶೇಷಗಳಿವೆ. ಊರಿನಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪಕ್ಕೆ ಗುಡಿಯನ್ನು ರಚಿಸಲಾಗಿದೆ. ಈ ಗ್ರಾಮವು ಹಾಳುಮಣ್ಣಿನ ಮೇಲಿದ್ದು, ಆದಿ ಇತಿಹಾಸ ಕಾಲಕ್ಕೆ ಸೇರಿದ ಮೃತ್ಪಾತ್ರೆಗಳ ಚೂರುಗಳು ಎಲ್ಲೆಡೆ ದೊರಕುತ್ತವೆ. ಬಳಪದ ಕಲ್ಲಿನ ಗುಡ್ಡವು ರಾಮಲಿಂಗೇಶ್ವರ ದೇವಾಲಯದ ಹಿಂದಿದೆ.

ಊರಿನ ಅಮರೇಗೌಡರ ಹೊಲದ ಬದುವಿನಲ್ಲಿ ತ್ರುಟಿತ ಶಾಸನವೊಂದು ದೊರಕಿದೆ. ರಾಷ್ಟ್ರಕೂಟರ ಕಾಲದ ಈ ಶಾಸನದಲ್ಲಿನ ಕಾಲದ ಕಾಲಾತೀತ ಸಂವತ್ಸರ ಸತಂಗಳೆಂಟುನೂರು ನಾಲ್ವತ್ತೊಂಬತ್ತನೆಯ ಸರ್ವಜಿತ್ ಸಂವತ್ಸರ ಎಂದು ಹೇಳಿದೆ. ಇದು ಕ್ರಿ.ಶ.೯೨೮ಕ್ಕೆ ಸರಿ ಹೊಂದುತ್ತದೆ. ಶಾಸನದ ಮುಖ್ಯಭಾಗ ಅಲ್ಲಲ್ಲಿ ಸವೆದಿದೆ. ರಾಷ್ಟ್ರಕೂಟ ದೊರೆ ಹಿರಣ್ಯವರ್ಷನ ಆಳ್ವಿಕೆಯ ಕಾಲದ ಈ ಶಾಸನದಲ್ಲಿ ಕರಡಿಕಲ್ಲ ನಾಡಿನ ಮೊಗಲೂರಿನ ಕನಕಭಟ್ಟ ಎಂಬುವವನಿಗೆ ೪೦ ಮತ್ತರು ಭೂಮಿಯನ್ನು ದಾನ ಕೊಟ್ಟ ಉಲ್ಲೇಖವಿದೆ.[೧೮]

**ಈಶ್ವರ ದೇವಾಲಯ**

| | | | |
|---|---|---|---|
| **ಊರು** | : ಕೌಡಲಬಂಡ(ತವಗ) | **ಶೈಲಿ** | : ಪಾಳೆಯಗಾರ |
| **ಸ್ಮಾರಕ** | : ಈಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಈಶಾನ್ಯದ ಹೊಲದಲ್ಲಿ | **ಸ್ಥಿತಿ** | : ಕನಿಷ್ಠ |
| **ಕಾಲ** | : ಕ್ರಿ.ಶ.೧೮ನೇ ಶತಮಾನ | | |

ಅಪೂರ್ಣವಾಗಿ ನಿರ್ಮಿಸಿರುವ ದೇವಾಲಯದಲ್ಲಿ ಗರ್ಭಗೃಹ ಮಾತ್ರವಿದ್ದು, ಅದರಲ್ಲಿ ಶಿವಲಿಂಗವಿದೆ. ದೇವಾಲಯಕ್ಕೆ ಸಂಬಂಧಿಸಿದ ಕೆಲವು ಕಂಬಗಳನ್ನು ನಿಲ್ಲಿಸಲಾಗಿದೆ. ಕಣಶಿಲೆಯನ್ನು ಕಟ್ಟಡಕ್ಕೆ ಬಳಸಲಾಗಿದೆ. ಊರಿನಿಂದ ಗುಡಿಗೆ ಹೋಗುವ ಮಾರ್ಗದಲ್ಲಿ ಮಧ್ಯ ಹಳೇಶಿಲಾಯುಗದ ಆಯುಧಗಳು ಹೇರಳವಾಗಿ ದೊರಕುತ್ತವೆ.[೧೯]

**ರಾಮಲಿಂಗೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಸಂತೆಕೆಲ್ಲೂರು | **ಶೈಲಿ** | : – |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : – |
| **ಸ್ಥಳ** | : ಊರ ಹೊರಗಿನ ಹೊಲದಲ್ಲಿ | **ಸ್ಥಿತಿ** | : – |
| **ಕಾಲ** | : ಕ್ರಿ.ಶ.೧೨–೧೩ನೇ ಶತಮಾನ | | |

ಊರಿನಿಂದ ಎರಡು ಕಿ.ಮೀ. ದೂರದ ಅಮರೇಶ ಅವರ ಹೊಲದಲ್ಲಿರುವ ದೇವಾಲಯದಲ್ಲಿ ಗರ್ಭಗುಡಿ ಮಾತ್ರವಿದ್ದು, ಅಂತರಾಳ ಭಾಗ ಹಾಳಾಗಿದೆ. ನವರಂಗದ ಅಧಿಷ್ಠಾನ ಭಾಗಗಳನ್ನು ಅಸ್ಪಷ್ಟವಾಗಿ ಗುರುತಿಸಬಹುದು. ಗರ್ಭಗೃಹದಲ್ಲಿ ಪ್ರಾಚೀನ ಲಿಂಗವಿದೆ. ಹಾಗೂ ಗರ್ಭಗೃಹದ ಒಳಭಾಗದ ಭಿತ್ತಿಯಲ್ಲಿ ಕಟ್ಟೆಯಿದೆ. ಬಹುತೇಕ ಶಿಥಿಲವಾಗಿರುವ ಈ ದೇವಾಲಯಕ್ಕೆ ಶಿಖರವಿಲ್ಲ. ಆದರೆ ಅಧಿಷ್ಠಾನವಿದೆ. ಗಡಿಯ ಮುಂದೆ ಎರಡು ವೀರಗಲ್ಲುಗಳಿವೆ ನಾಗಶಿಲ್ಪ ಮತ್ತು ವಾಸ್ತು ಅವಶೇಷಗಳನ್ನು ಗುಡಿಯ ಮುಂದೆ ಕಾಣಬಹುದು.[೨೦]

**ರಾಮಲಿಂಗ ದೇವಾಲಯ**

| | | | |
|---|---|---|---|
| **ಊರು** | : ರಾಮತ್‌ನಾಳ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗ | **ಅಭಿಮುಖ** | : ಪೂರ್ವ |
| **ಸ್ಥಳ** | : ಹಿರೇಹಳ್ಳ ದಂಡೆಯ ಮೇಲೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೨–೧೩ನೇ ಶತಮಾನ | | |

ಈ ದೇವಾಲಯಕ್ಕೆ ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗಗಳಿವೆ. ದೇವಾಲಯದ ಹೊರ ಭಿತ್ತಿಯನ್ನು ಬಿಡಿಕಲ್ಲುಗಳನ್ನು ಇರಿಸಿ ಕಟ್ಟಲಾಗಿದೆ. ಗರ್ಭಗೃಹ ಮತ್ತು ಅಂತರಾಳ ಭಾಗಗಳನ್ನು ದೊಡ್ಡ ಕಲ್ಲುಗಳನ್ನು ಬಳಸಿ ಕಟ್ಟಿರುವುದು ಕಂಡುಬರುತ್ತದೆ. ಗರ್ಭಗುಡಿಯ ಬಾಗಿಲವಾಡವು ಸರಳವಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಗರ್ಭಗೃಹದಲ್ಲಿ ಪ್ರಾಚೀನ ಲಿಂಗವಿದೆ. ನವರಂಗದಲ್ಲಿ ಪೂರ್ವಾಭಿಮುಖವಾಗಿ ಎರಡು

ದೇವಕೋಷ್ಠಗಳಿವೆ. ನವರಂಗದ ನಾಲ್ಕು ಕಂಬಗಳು ಭುವನೇಶ್ವರಿ ಭಾಗವನ್ನು ಆಧರಿಸಿದೆ. ಇಲ್ಲಿಯ ಕೆಳಗೆ ವೇದಿಕೆಯಿದೆ. ನವರಂಗದ ಮಧ್ಯಭಾಗದಲ್ಲಿ ನಾಲ್ಕು ಕಂಬಗಳು ಘನಾಕೃತಿಯಲ್ಲಿದ್ದು, ಅವು ಕಲ್ಯಾಣ ಚಾಲುಕ್ಯ ಶೈಲಿಯಲ್ಲಿದೆ. ದೇವಾಲಯದ ಪ್ರವೇಶದ್ವಾರವು ಸರಳವಾಗಿದ್ದು ಶಿಖರ ಮತ್ತು ಅಧಿಷ್ಠಾನಗಳಿಲ್ಲ. ಗುಡಿಯ ಮುಂದೆ ಕಲ್ಲಿನ ಪ್ರಾಂಗಣವಿದೆ. ಬಹುಶಃ ಇದನ್ನು ಇತ್ತೀಚೆಗೆ ನಿರ್ಮಿಸಲಾಗಿದೆ. ದೇವಾಲಯವನ್ನು ಕಣಶಿಲೆಯಿಂದ ಕಟ್ಟಲಾಗಿದೆ.[೨೧]

**ರಾಮಲಿಂಗೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಆನೆಹೊಸೂರು | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಆರೋಗ್ಯ ಕೇಂದ್ರದ ಹಿಂಭಾಗ | **ಸ್ಥಿತಿ** | : ಉತ್ತಮ |
| **ಕಾಲ** | : – | | |

ರಾಮಲಿಂಗೇಶ್ವರ ದೇವಾಲಯವು ಪೂರ್ವಭಿಮುಖವಾಗಿದ್ದು, ಲಿಂಗಸೂಗೂರು ತಾಲ್ಲೂಕಿನಿಂದ ೧೩ ಕಿ.ಮೀ. ಅಂತರದಲ್ಲಿದೆ. ಗರ್ಭಗೃಹ, ಅಂತರಾಳ ಹಾಗೂ ನವರಂಗ ಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಪ್ರಾಚೀನ ಕಾಲದ ಶಿವಲಿಂಗವಿದೆ. ಲಕ್ಷ್ಮೀ ಕಮಲಪೀಠದ ಮೇಲೆ ಪದ್ಮಾಸನವಾಗಿ ಕುಳಿತಿದ್ದು, ತನ್ನೆರಡು ಕೈಗಳಲ್ಲಿ ಕಮಲ ಪುಷ್ಪದ ನೀಳದೇಟುಗಳನ್ನು ಹಿಡಿದಿದ್ದಾಳೆ. ನವರಂಗದ ಭಾಗದಲ್ಲಿ ಕಕ್ಷಾಸನವಿದೆ. ಆದರೆ ಅದಕ್ಕೆ ಭಿತ್ತಿಯಿಲ್ಲ, ಇದರ ಮಧ್ಯೆದಲ್ಲಿ ವೇದಿಕೆಯಿದ್ದು, ಅದರಲ್ಲಿ ಆರ್ವಾಚೀನ ಕಾಲದ ನಂದಿಯ ಶಿಲ್ಪವಿದೆ.

ನವರಂಗಕ್ಕೆ ಹೊಂದಿಕೊಂಡು ಭಿತ್ತಿಯಲ್ಲಿ ಎರಡು ದೇವಕೋಷ್ಠಗಳಿದ್ದು, ಒಂದರಲ್ಲಿ ಅಸ್ಪಷ್ಟ ಕೆತ್ತನೆಯಿಂದ ಕೂಡಿ ಮೂರ್ತಿಶಿಲ್ಪವಿದೆ. ಗರ್ಭಗುಡಿಯ ದ್ವಾರ ಬಾಗಿಲು ಚಿಕ್ಕದಾಗಿ ನಿರ್ಮಿಸಿದ್ದಾರೆ. ದೇವಾಲಯದ ಕಂಬಗಳು ವೃತ್ತಾಕಾರದಲ್ಲಿ ಕೆತ್ತನೆ ಮಾಡಿದ್ದಾರೆ. ಗುಡಿಯ ಮುಂದೆ ಎರಡು ಭಗ್ನ ಆನೆಗಳ ಶಿಲ್ಪಗಳಿವೆ. ದೇವಾಲಯದ ಮುಂದೆ ಭಿತ್ತಿ ಮತ್ತು ಅಧಿಷ್ಠಾನ ಭಾಗದಲ್ಲಿರುವ ಆನೆಗಳ ಶಿಲ್ಪಗಳಿಂದಾಗಿ ಸ್ಥಳೀಯರು ಇದನ್ನು ಆನೆಗುಡಿ ಎಂದು ಕರೆಯುತ್ತಾರೆ.[೨೨]

ಗುಡಿ ಮುಂದಿರುವ ಜಾಗದಲ್ಲಿ ೨ ಅಂಡೆಕೊಡ ಇದ್ದವು. ಹುಗ್ಗಿ ಗಡಿಗಿ ತಂದು ಆನಿಗಳು ಇರುವ ಜಾಗದಲ್ಲಿ ತೊಡಿದರು. ಅಲ್ಲಿ ಅಂಡೆ ಸಿಕ್ಕಿರುವ ಜಾಗದಲ್ಲಿ ಹುಗ್ಗಿ ಗಡಗಿ ಇಟ್ಟು ೨ ಅಂಡೆಗಳನ್ನು ಎತ್ತುಕೊಂಡು ಹೋಗಿದ್ದಾರೆ. ತೆಗೆದುಕೊಂಡು ಹೋದವರ ಗತಿ ಅವರ ಮನೆ ಸರ್ವನಾಶವಾಯಿತು ಎಂದು ಗುಡಿಪೂಜಾರಿ ನುಡಿದರು.[೨೩]

**ರಾಮಲಿಂಗೇಶ್ವರ ದೇವಾಲಯ**

**ಊರು** : ಅಮದಿಹಾಳ
**ಸ್ಮಾರಕ** : ರಾಮಲಿಂಗೇಶ್ವರ
**ಸ್ಥಳ** : ಊರ ವಾಯುವ್ಯಕ್ಕೆ
**ಕಾಲ** : ಕ್ರಿ.ಶ.೧೨-೧೩ನೇ ಶತಮಾನ
**ಶೈಲಿ** : ಕಲ್ಯಾಣ ಚಾಲುಕ್ಯ
**ಅಭಿಮುಖ** : ಪೂರ್ವ
**ಸ್ಥಿತಿ** : ಮಧ್ಯಮ

ಈ ದೇವಾಲಯವು ಆಮದಿಹಾಳ ಗ್ರಾಮದಲ್ಲಿದೆ. ಇದು ಲಿಂಗಸೂಗೂರು ತಾಲೂಕಿನ ಮುದಗಲ್ ಹೋಬಳಿಗೆ ಸೇರಿದೆ. ತಾಲೂಕು ಸ್ಥಳದಿಂದ ವಾಯುವ್ಯ ದಿಕ್ಕಿಗೆ ೨೬ ಕಿ.ಮೀ. ಅಂತರದಲ್ಲಿದೆ. ಇದು ೯೮೫-೪೫ ಭೌಗೋಳಿಕ ವಿಸ್ತೀರ್ಣ ಹೊಂದಿದೆ. ದೇವಾಲಯದ ಒಳಭಗವು ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗದಿಂದ ಕೂಡಿದ್ದು, ಪೂರ್ವ ಅಭಿಮುಖದಲ್ಲಿದೆ. ಗರ್ಭಗೃಹದಲ್ಲಿ ಹಳೆಯ ಕಾಲದ ಈಶ್ವರಲಿಂಗವಿದೆ. ಗರ್ಭಗೃಹ ಮತ್ತು ಅಂತರಾಳದವರೆಗೆ ಗುಡಿಯನ್ನು ಕಣಶಿಲೆಯಲ್ಲಿ ಕಟ್ಟಲಾಗಿದೆ. ನವರಂಗ ಭಾಗದಲ್ಲಿ ಕಂಬಗಳು ಉಳಿದಿದ್ದು, ಭಿತ್ತಿ ಮತ್ತು ಭಾವಣಿಗಳು ಇಲ್ಲ. ಕಂಬಗಳ ಮೇಲ್ಭಾಗದಲ್ಲಿ ಭಾವಣಿಯ ಕೆಲವು ಹಾಸುಗಲ್ಲುಗಳಿವೆ. ದೇವಾಲಯಕ್ಕೆ ಅಧಿಷ್ಠಾನವಿದ್ದು, ಶಿಖರವಿಲ್ಲ, ಈ ದೇವಾಲಯದಲ್ಲಿ ನವರಂಗದ ಭುವನೇಶ್ವರಿ ಭಾಗವನ್ನು ಹೊರತುಪಡಿಸಿ ಭಾವಣಿಯ ಭಾಗ ಅಪೂರ್ಣವಾಗಿದೆ.[೨೪]

**ರಾಮಲಿಂಗೇಶ್ವರ ದೇವಾಲಯ**

**ಊರು** : ಕನಸಾವಿ
**ಸ್ಮಾರಕ** : ರಾಮಲಿಂಗೇಶ್ವರ
**ಸ್ಥಳ** : ಊರ ಹಿಂದಿರುವ ಕೋಟೆ ಬಳಿ
**ಕಾಲ** : ಕ್ರಿ.ಶ.೧೨-೧೩ನೇ ಶತಮಾನ
**ಶೈಲಿ** : ಕಲ್ಯಾಣ ಚಾಲುಕ್ಯ
**ಅಭಿಮುಖ** : ಪೂರ್ವ
**ಸ್ಥಿತಿ** : -

ಈ ದೇವಾಲಯ ಲಿಂಗಸೂಗೂರು ತಾಲೂಕಿನ ಮುದಗಲ್ ಹೋಬಳಿಗೆ ಸೇರಿದೆ. ತಾಲ್ಲೂಕಿನಿಂದ ಪಶ್ಚಿಮಕ್ಕೆ ೪೦ ಕಿ.ಮೀ. ದೂರದಲ್ಲಿದೆ. ಇದರ ಭೌಗೋಳಿಕ ವಿಸ್ತೀರ್ಣ ೧೫೧೬.೧೭ ಹೆಕ್ಟೇರ್‌ನಷ್ಟು ಇದೆ. ಗ್ರಾಮದ ಅಗಸಿಯಿಂದ ದಕ್ಷಿಣ ಕೋಟೆ ಗೋಡೆಗೆ ಅಂಟಿದಂತೆ ಇರುವ ಅಪೂರ್ವ ದೇವಾಲಯವಾಗಿದೆ. ಕಣಶಿಲೆಗಳಿಂದ ಕಟ್ಟಲಾದ ಈ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಗರ್ಭಗೃಹದಲ್ಲಿ ಪ್ರಾಚೀನ ಕಾಲದ ಈಶ್ವರಲಿಂಗವಿದೆ. ಇದರ ಮುಂದೆ ನಂದಿ ಇದೆ.

ನವರಂಗ ಭಾಗದಲ್ಲಿ ಕಂಬಗಳು ಉಳಿದಿದ್ದು, ಭಿತ್ತಿ ಮತ್ತು ಛಾವಣಿಗಳು ಇರುವುದಿಲ್ಲ. ದೇವಾಲಯದ ನವರಂಗದಲ್ಲಿ ನಾಲ್ಕು ಕಂಬಗಳೊಂದಿಗೆ ಮುಂಭಾಗದಲ್ಲಿಯೂ ಇನ್ನೂ ಎರಡು ಕಂಬಗಳಿವೆ. ನವರಂಗದ ಭೂವನೇಶ್ವರಿ ಭಾಗವನ್ನು ಹೊರತುಪಡಿಸಿ ಛಾವಣಿಯ ಭಾಗವು ಅಪೂರ್ಣವಾಗಿದೆ.[೨೫] ದೇವಾಲಯಕ್ಕೆ ಅಧಿಷ್ಠಾನವಿದೆ. ಆದರೆ ಶಿಖರವಿಲ್ಲ. ಕಣಶಿಲೆಯಿಂದ ದೇವಾಲಯವನ್ನು ನಿರ್ಮಿಸಿದೆ.

**ವೀರಭದ್ರೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಅಯದನಾಳ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ವೀರಭದ್ರೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಮಧ್ಯೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೭-೧೮ನೇ ಶತಮಾನ | | |

ಗರ್ಭಗುಡಿ ಮತ್ತು ಸಭಾಮಂಟಪವಿರುವ ಈ ದೇವಾಲಯದ ಗರ್ಭಗೃಹದಲ್ಲಿ ವೀರಭದ್ರನ ಮೂರ್ತಿಶಿಲ್ಪವಿದೆ. ಇಲ್ಲಿನ ಸಭಾಮಂಟಪವನ್ನು ನಂತರ ಕಾಲದಲ್ಲಿ ಅಂದರೆ ಕ್ರಿ.ಶ.೧೮-೧೯ನೇ ಶತಮಾನದಲ್ಲಿ ನಿರ್ಮಿಸಿರಬಹುದು. ಸಭಾ ಮಂಟಪದಲ್ಲಿ ಕಮಾನುಗಳುಳ್ಳ ಕಂಬಗಳು ಸೂರನ್ನು ಹೊತ್ತಿವೆ. ದೇವಾಲಯವನ್ನು ಕಲ್ಲಿನಿಂದ ನಿರ್ಮಿಸಿದ್ದು, ಗರ್ಭಗೃಹದ ಹೊರಭಿತ್ತಿಗಳಲ್ಲಿ ಹಾವು, ಪ್ರಾಣಿ ಮತ್ತು ಭಕ್ತರ ಉಬ್ಬುಶಿಲ್ಪಗಳಿವೆ. ಶಿಖರ ಭಾಗವನ್ನು ಕಳೆದ ಶತಮಾನದಲ್ಲಿ ನಿರ್ಮಿಸಿರುವ ಸಾಧ್ಯತೆಗಳಿವೆ. ಈ ದೇವಾಲಯದ ಆವರಣದಲ್ಲಿ ಕಲ್ಯಾಣ, ಚಾಲುಕ್ಯರ ಕಾಲಕ್ಕೆ ಸೇರಿದ ವಾಸ್ತು ಅವಶೇಷಗಳಿವೆ. ಇದರ ಗರ್ಭಗೃಹವನ್ನು ಗಣಶಿಲೆಯಿಂದ ನಿರ್ಮಿಸಲಾಗಿದೆ. ಗರ್ಭಗೃಹದ ಇಕ್ಕೆಲಗಳಲ್ಲಿ, ಸಭಾ ಮಂಟಪಕ್ಕೆ ಅಭಿಮುಖವಾಗಿ ಎರಡು ಗೂಡುಗಳಿವೆ.[೨೬]

**ಕಾಳಮುತ್ತಪ್ಪ ದೇವಾಲಯ**

| | | | |
|---|---|---|---|
| **ಊರು** | : ಸೀಲಹಳ್ಳಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಕಾಳಮುತ್ತಪ್ಪ | **ಅಭಿಮುಖ** | : ಪೂರ್ವ |
| **ಸ್ಥಳ** | : ಊರ ಪ್ರವೇಶಕ್ಕೆ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೨-೧೩ನೇ ಶತಮಾನ | | |

ಗರ್ಭಗೃಹ ಮಾತ್ರ ಹೊಂದಿರುವ ಈ ದೇವಾಲಯದ ಬಾಗಿಲಲ್ಲಿ ಮೂರು ಶಾಖೆಗಳಿವೆ. ಈ ಗರ್ಭಗೃಹದಲ್ಲಿ ೮ ವರ್ಷದಗಳ ಹಿಂದೆ ಸ್ಥಾಪಿಸಿದ ಲಿಂಗವಿದೆ. ಗುಡಿಯ ಹೊರಭಾಗದ ಕಲ್ಲುಗಳು ಒರಟಾಗಿವೆ. ಒಳಭಾಗವನ್ನು ನವಿರಾಗಿ ಡ್ರೆಸ್ ಮಾಡಲಾಗಿದೆ. ಗುಡಿಯ ಶಿಖರ ಮತ್ತು ಅಧಿಷ್ಠಾನ ಭಾಗಗಳಲ್ಲಿ ಹಾಗೂ ಬಾಗಿಲಿಗೆ ವರ್ಣಗಳನ್ನು ಹಚ್ಚಲಾಗಿದೆ. ಊರಿನಲ್ಲಿ ವಾಸ್ತು ಅವಶೇಷಗಳು ಕಂಡುಬರುತ್ತವೆ. ಪ್ರಾಚೀನ ಗ್ರಾಮವಾದ ಇದು ಅನೇಕ ಅಗೇವು ಮತ್ತು ಉಡೇವುಗಳನ್ನು ಹೊಂದಿದೆ. ಸೂರ್ಯನ ಶಿಲ್ಪ ಹಾಗೂ ವೀರಗಲ್ಲುಗಳನ್ನು ಆಂಜನೇಯನ ಗುಡಿಯಲ್ಲಿರಿಸಲಾಗಿದೆ.[೨೭]

### ೫.೨. ವೈಷ್ಣವ ದೇವಾಲಯಗಳು

ವಿಷ್ಣುವಿನ ಆರಾಧನೆಯು ವೇದಗಳ ಕಾಲದಿಂದ ನಡೆದು ಬಂದಿದ್ದರು. ಆಗ ವಿಷ್ಣು ಪ್ರಮುಖ ದೇವತೆಯೆನಿಸಲಿಲ್ಲ. ಭಾಗವತ ಧರ್ಮವು ಈ ಆರಾಧನೆಯನ್ನು ಪ್ರಚಾರ ಮಾಡಿರುವುದು ಕಂಡುಬರುತ್ತದೆ. ಕ್ರಿಸ್ತಶಕದ ಆರಂಭದ ವೇಳೆಯಲ್ಲಿ ಕೃಷ್ಣನ ಪೂಜೆಯನ್ನು ಪ್ರಮುಖ ಲಕ್ಷಣಗಳುಳ್ಳ ಭಾಗವತ ಧರ್ಮವು ಸಾಕಷ್ಟು ಪ್ರಚಾರದಲ್ಲಿತ್ತು. ಪ್ರಮುಖ ದೈವವಾದ ವಾಸುದೇವನಲ್ಲಿ ವೇದಗಳಲ್ಲಿನ ವಿಷ್ಣುವು ಬ್ರಾಹ್ಮಣಗಳ ನಾರಾಯಣನೂ ಆ ಹೊತ್ತಿಗಾಗಲೇ ಸಮೀಕೃತವಾಗಿದ್ದುದು ಶಾಸನಗಳಿಂದ ವ್ಯಕ್ತವಾಗುತ್ತದೆ. ಈ ಭಾಗವತ ಧರ್ಮವೇ ಮುಂದೆ ವೈಷ್ಣವ ಧರ್ಮವೆಂದು ಪ್ರಸಿದ್ಧವಾದುದ್ದು. ಕನ್ನಡ ಭಾಷೆಯ ಅತಿ ಪ್ರಾಚೀನ ಹಲ್ಮಿಡಿ ಶಾಸನವು (ಕ್ರಿ.ಶ.೪೫೦) ವಿಷ್ಣುವಿನ ಪ್ರಾರ್ಥನೆಯೊಂದಿಗೆ ಪ್ರಾರಂಭವಾಗುತ್ತದೆ. ಮೃಗೇಶವರ್ಮನು ಬನವಾಸಿ ಶಾಸನದಲ್ಲಿ ವರಾಹನನ್ನು ಇಮ್ಮಡಿ ಕೃಷ್ಣವರ್ಮನ ಬನಹಳ್ಳಿ ಶಾಸನದಲ್ಲಿ ನರಸಿಂಹನನ್ನು ಪ್ರಾರ್ಥಿಸುವ ಮಂಗಳಶ್ಲೋಕವಿದೆ. ಬಾದಾಮಿ ಚಾಲುಕ್ಯರ ಶಾಸನಗಳ ಮಂಗಳಶ್ಲೋಕದಲ್ಲಿ ವರಾಹ ಅವತಾರದ ವಿಷ್ಣುವಿನ ಸ್ತುತಿಯಿದೆ. ವರಾಹ ಅವರ ಲಾಂಛನವಾಗಿತ್ತು. ಪರಮ ಭಾಗವತ, ಶ್ರೀ ಪೃಥ್ವೀ ವಲ್ಲಭ, ಶ್ರೀ ವಲ್ಲಬ ಎಂಬುವರು ಚಾಳುಕ್ಯರ ಆರಂಭದ ಚಕ್ರವರ್ತಿಗಳ ಶಾಸನಗಳಲ್ಲಿ ಉಪನಾಮಗಳಾಗಿಯೇ ಕಾಣಿಸಿಕೊಳ್ಳುತ್ತವೆ.

ಲಿಂಗಸೂಗೂರು ತಾಲ್ಲೂಕಿನ ಪ್ರಮುಖ ವೈಷ್ಣವ ಕೇಂದ್ರಗಳಲ್ಲಿ, ಬಳಗಾನೂರು, ಮಸ್ಕಿ, ಕಿಲಾರಹಟ್ಟಿ, ಮುದಗಲ್, ತಾಲೇಖಾನ್, ಮೇದಿನಾಪುರ, ಕರಡಿಕಲ್ಲು ಮೊದಲಾದವುಗಳು ಬರುತ್ತವೆ. ಇವುಗಳಲ್ಲಿ ಕೆಲವು ಗ್ರಾಮಗಳಲ್ಲಿ ವೈಷ್ಣವರು ಮತ್ತು ದೇವಾಲಯಗಳಿಗೆ ಸಂಬಂಧಿಸಿದವುಗಳಾಗಿದ್ದು, ಉಳಿದ ಎಲ್ಲಾ ಗ್ರಾಮಗಳು ಅಗ್ರಹಾರ, ಬ್ರಹ್ಮಪುರಿಗಳಾಗಿದ್ದು, ಬ್ರಾಹ್ಮಣರಿಗೆ ದತ್ತಿ ಕೊಟ್ಟ ವಿಷಯಗಳನ್ನು ತಿಳಿಸುತ್ತವೆ.

**ಅನಂತಶಯನ ದೇವಾಲಯ**

| | | | |
|---|---|---|---|
| **ಊರು** | : ನವಲಿ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ರಾಮಲಿಂಗೇಶ್ವರ | **ಅಭಿಮುಖ** | : ಪೂರ್ವ |
| **ಸ್ಥಳ** | : ಕೃಷ್ಣನದಿ ದಂಡೆಯಲ್ಲಿ | **ಸ್ಥಿತಿ** | : ಮಧ್ಯಮ |
| **ಕಾಲ** | : ಕ್ರಿ.ಶ.೧೨-೧೩ನೇ ಶತಮಾನ | **ಸಂರಕ್ಷಣೆ** | : ಹಿನ್ನೀರಿನಲ್ಲಿ ಮುಳುಗಿದೆ |

ಈ ದೇವಾಲಯವು ನವಲಿ ಗ್ರಾಮದಲ್ಲಿದೆ. ಇಲ್ಲಿನ ದೇವಾಲಯವು ಮೂರು ಗರ್ಭ ಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದೆ. ಇದು ತ್ರಿಕೂಟ ದೇವಾಲಯವಾಗಿದೆ. ಆದರೆ ಕಾಲಕ್ರಮದಲ್ಲಿ ಬದಲಾವಣೆ ಕಂಡಿದೆ. ಇಲ್ಲಿ ಮೂರು ಗರ್ಭಗುಡಿಗಳು ಒಂದರ ಪಕ್ಕ ಇನ್ನೊಂದರಂತೆ ಸಮಾನಂತರದಲ್ಲಿ ಇವೆ. ಇದರ ಮುಖ್ಯ ಗರ್ಭಗೃಹವು ಮಧ್ಯದಲ್ಲಿದ್ದು ಆಯತಾಕಾರವಾಗಿದೆ. ಅದರಲ್ಲಿ ಭುವನೇಶ್ವರಿಯಿದ್ದು, ಆಯತ ಪೀಠದ ಮೇಲೆ ಅನಂತಶಯನನ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಈ ಪೀಠವು ಮೂರ್ತಿಗಿಂತ ಹಿರಿದಾಗಿದೆ. ಶೇಷನ ಮೇಲೆ ಮಲಗಿರುವ ವಿಷ್ಣುವಿನ ಕಾಲುಗಳನ್ನು ಭೂದೇವಿಯು ಒತ್ತುತ್ತಿರುವಂತೆ ರಚಿಸಲಾಗಿದೆ. ನಾಭಿಯ ಕಮಲದಲ್ಲಿ ತೋರಿರುವ ಬ್ರಹ್ಮನ ಶಿಲ್ಪವು ಭಗ್ನವಾಗಿದೆ. ಮಕರತೋರಣದಲ್ಲಿ ವಿಷ್ಣುವಿನ ದಶಾವತಾರಗಳನ್ನು ತೋರಲಾಗಿದೆ. ಹಾಗೂ ಪೀಠದ ಕೆಳಭಾಗದಲ್ಲಿ ಶಂಖ ಮತ್ತು ಚಕ್ರಗಳನ್ನು ಬಿಡಿಸಲಾಗಿದೆ. ಮಕರತೋರಣದ ಮೇಲೆ ಕೀರ್ತಿಮುಖವಿದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದ್ದು, ಪತ್ರಶಾಖೆಗಳನ್ನು ಹೊಂದಿದೆ. ಶಾಖೆಗಳು ಮೇಲಿನ ಪ್ರಸ್ತರದವರೆಗೆ ತೋರಲಾಗಿದ್ದು, ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಉಳಿದ ಎರಡು ಗರ್ಭಗೃಹಗಳು ಅಳತೆಯಲ್ಲಿ ಕಿರಿದಾಗಿದ್ದು, ಸರಳ ಸೂರು ಹಾಗೂ ಬಾಗಿಲವಾಡಗಳನ್ನು ಹೊಂದಿದೆ. ಇವುಗಳು ಮುಖ್ಯ ಗರ್ಭಗೃಹದ ಬಾಗಿಲವಾಡವನ್ನು ಹೋಲುತ್ತವೆ.

ಸಭಾಮಂಟಪದಲ್ಲಿ ೧೬ ಕಂಬಗಳಿವೆ. ಅವುಗಳು ಕೆಳಗ ಚತುರಸ್ರವಾಗಿದ್ದು, ಮಧ್ಯೆ ೧೬-೮-೧೬ ಮೂಲೆಗಳನ್ನು ಹೊಂದಿವೆ. ಇಂತಹ ಕಂಬಗಳು ಕಲ್ಯಾಣ ಚಾಲುಕ್ಯ ಶೈಲಿಯ ಪ್ರಮುಖ ಲಕ್ಷಣಗಳಾಗಿವೆ. ಸಭಾಮಂಟಪದಲ್ಲಿನ ಎರಡು ಗೋಡೆಗಂಬಗಳ ನಡುವೆ ಕಿಟಕಿಗಳಿವೆ. ಸ್ವಲ್ಪಮಟ್ಟಿಗೆ ಶಿಥಿಲವಾಗಿರುವ ಅಧಿಷ್ಠಾನದಲ್ಲಿ ಉಪಾನ, ಜಗತಿ, ಕಂಠ ಮತ್ತು ಕುಮುದ ಭಾಗಗಳಿವೆ. ಅಲಯದ ಹೊರ ಭಿತ್ತಿಯು ಶಿಥಿಲವಾಗಿದೆ. ಗ್ರಾನೈಟ್ ಶಿಲೆಯಿಂದ ಗುಡಿಯನ್ನು ನಿರ್ಮಿಸಲಾಗಿದೆ.[೨೮]

**ನಾರಾಯಣ ದೇವರು**

| | | | |
|---|---|---|---|
| **ಊರು** | : ನಿಲೋಗಲ್ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ನಾರಾಯಣ ದೇವರು | **ಅಭಿಮುಖ** | : ಉತ್ತರ |

| | |
|---|---|
| **ಸ್ಥಳ** : ಊರ ಹೊರಗೆ(ನೈರುತ್ಯಕ್ಕೆ) | **ಸ್ಥಿತಿ** : ಉತ್ತಮ |
| **ಕಾಲ** : ಕ್ರಿ.ಶ.೧೨–೧೩ನೇ ಶತಮಾನ | |

ಈ ದೇವಾಲಯವು ನಿಲೋಗಲ್ ಗ್ರಾಮದಲ್ಲಿದೆ. ಇಲ್ಲಿ ಈ ದೇವಾಲಯವನ್ನು ಸಂಪೂರ್ಣವಾಗಿ ನವೀಕರಿಸಲಾಗಿದೆ. ಗರ್ಭಗೃಹದಲ್ಲಿ ಪ್ರಾಚೀನ ಶ್ರೀನಿವಾಸ/ನಾರಾಯಣ ಮೂರ್ತಿಶಿಲ್ಪವಿದೆ. ಶಿಲ್ಪವು ಪಾಳೆಯಗಾರರ ಕಾಲದಲ್ಲಿ ರಚಿಸಲ್ಪಟ್ಟಿದೆ. ಅದಕ್ಕೆ ಪ್ರಸ್ತುತ ಪೂಜೆ ಸಲ್ಲಿಸಲಾಗುತ್ತಿದೆ. ಗುಡಿಯ ಹೊರಭಾಗದಲ್ಲಿ ಪ್ರಾಚೀನ ಗುಡಿಯ ದ್ವಾರದ ಬಾಗಿಲವಾಡಗಳು ಬಿದ್ದಿವೆ. ಅಲ್ಲಿಯೇ ಕೆಲವು ವಾಸ್ತು ಅವಶೇಷಗಳನ್ನು ಸಹ ನೋಡಬಹುದು. ಊರಿನಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ತ್ರುಟಿತ ಶಾಸನವಿದೆ. ಅಗಸಿಯ ಬಳಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ.[೨೯] ಆ ಊರಿನ ಹೊರಭಾಗದಲ್ಲಿರುವ ಹೊಲದಲ್ಲಿ ಸೂಕ್ಷ್ಮಶಿಲಾಯುಧಗಳು, ಬೂದಿಮಣ್ಣು ಹಾಗೂ ಮೃತ್ಪಾತ್ರೆಯ ಚೂರುಗಳು ಹುಡುಕಿದಷ್ಟು ಸಿಗುತ್ತಲಿವೆ.

**ಶ್ರೀನಿವಾಸ ದೇವಾಲಯ**

| | |
|---|---|
| **ಊರು** : ಗುರುಗುಂಟ | **ಶೈಲಿ** : ಕಲ್ಯಾಣ ಚಾಲುಕ್ಯ |
| **ಸ್ಮಾರಕ** : ಶ್ರೀನಿವಾಸ | **ಅಭಿಮುಖ** : ಪೂರ್ವ |
| **ಸ್ಥಳ** : ಊರ ಒಳಗೆ ಈಶಾನ್ಯಕ್ಕೆ | **ಸ್ಥಿತಿ** : ಮಧ್ಯಮ |
| **ಕಾಲ** : ಕ್ರಿ.ಶ.೧೭–೧೮ನೇ ಶತಮಾನ | |

ಈ ದೇವಾಲಯವು ಗುರಗುಂಟ ಗ್ರಾಮದ ಪೂರ್ವದಿಕ್ಕಿನಲ್ಲಿದೆ. ಇದು ಗರ್ಭಗೃಹ ಮತ್ತು ತೆರೆದ ಸಭಾಮಂಟಪ ಹೊಂದಿದೆ. ಗರ್ಭಗೃಹದ ಬಾಗಿಲವಾಡವು ಸರಳವಾಗಿದೆ. ಇಲ್ಲಿನ ಗರ್ಭಗೃಹದ ಮೇಲೆ ಶಿಖರವಿದೆ. ಪಾಳೆಯಗಾರರ ಶೈಲಿಯನ್ನು ಹೊಂದಿದೆ. ಇಲ್ಲಿನ ಗರ್ಭಗೃಹದಲ್ಲಿ ಶ್ರೀನಿವಾಸನ ಚಿಕ್ಕ ಮೂರ್ತಿಯಿದೆ. ಆಲಯಕ್ಕೆ ಎತ್ತರದ ಪ್ರಾಕಾರದ ಗೋಡೆಯಿದೆ. ಪ್ರಸ್ತುತ ಈ ಊರಿನಲ್ಲಿ ಹಲವು ದೇವಾಲಯಗಳು ಸಿಗುತ್ತವೆ. ಅವುಗಳು ಪಾಳೆಗಾರರ ಕಾಲಕ್ಕೆ ಸೇರಿದುದ್ದಾಗಿದೆ.[೩೦]

**ವೆಂಕಟೇಶ್ವರ ದೇವಾಲಯ**

| | |
|---|---|
| **ಊರು** : ಮುದಗಲ್ | **ಶೈಲಿ** : ವಿಜಯನಗರ ವಾಸ್ತುಶೈಲಿ |
| **ಸ್ಮಾರಕ** : ವೆಂಕಟೇಶ್ವರ ದೇವಾಲಯ | **ಅಭಿಮುಖ** : – |
| **ಸ್ಥಳ** : ಕಿಲ್ಲಾ(ಕೋಟೆಯ ಒಳಗೆ | **ಸ್ಥಿತಿ** : – |
| **ಕಾಲ** : ಕ್ರಿ.ಶ.೧೫–೧೬ನೇ ಶತಮಾನ | |

ಇದು ೧೫-೧೬ನೇ ಶತಮಾನದಲ್ಲಿ ವಿಜಯನಗರ ಅರಸರ ವಾಸ್ತುಶೈಲಿಯಲ್ಲಿ ಕಿಲ್ಲಾದಲ್ಲಿ ನಿರ್ಮಾಣಗೊಂಡ ದೇವಾಲಯವಾಗಿದೆ. ಗರ್ಭಗುಡಿ, ನವರಂಗಗಳು ಸಾಮಾನ್ಯವಾಗಿವೆ. ಗರ್ಭಗುಡಿಯಲ್ಲಿದ್ದ ಮೂಲ ವೈಷ್ಣವಮೂರ್ತಿ ವಿರೂಪಗೊಂಡಿದ್ದು ಕಂಡುಬರುತ್ತದೆ. ಅದನ್ನು ತೆಗೆದು ಅದೇ ಸ್ಥಳದಲ್ಲಿ ಬೇರೊಂದು ವೆಂಕಟೇಶ್ವರ ಮೂರ್ತಿಶಿಲ್ಪವನ್ನು ಪ್ರತಿಷ್ಠಾಪನೆ ಮಾಡಿರುವುದು ಕಂಡುಬರುತ್ತದೆ. ಈ ವೈಷ್ಣವ ಮೂರ್ತಿ ನಿಂತ ಭಂಗಿಯಲ್ಲಿದ್ದು, ಕೈಯಲ್ಲಿ ಚಕ್ರ, ವರದಾ ಮುದ್ರೆ, ಶಂಖಗಳನ್ನು ಹಿಡಿದಾಗಿದೆ. ತನ್ನ ಕೈ ಸೊಂಟಕ್ಕೆ ಅನಿಸಿಕೊಂಡಿದೆ. ತಲೆಯ ಮೇಲೆ ಉದ್ದನೆ ಕಿರೀಟ ಇದ್ದು, ಕೊರಳಲ್ಲಿ ಸರ, ಕಣ, ಕಾಲುಗಳಲ್ಲಿ ಗೆಜ್ಜೆ ಹಾಗೂ ಕೈಗಳಲ್ಲಿ ಕಡಗ ಧರಿಸಿದ್ದಾನೆ.

**ವೆಂಕಟೇಶ್ವರ ದೇವಾಲಯ**

| | | | |
|---|---|---|---|
| **ಊರು** | : ಮುದಗಲ್ | **ಶೈಲಿ** | : ವಿಜಯನಗರ ವಾಸ್ತುಶೈಲಿ |
| **ಸ್ಮಾರಕ** | : ವೈಷ್ಣವಿ ಶಿಲ್ಪ | **ಅಭಿಮುಖ** | : – |
| **ಸ್ಥಳ** | : ಕಿಲ್ಲಾ(ಕೋಟೆಯ ಒಳಗೆ | **ಸ್ಥಿತಿ** | : – |
| **ಕಾಲ** | : ಕ್ರಿ.ಶ.೧೫-೧೬ನೇ ಶತಮಾನ | | |

ಇದು ವೆಂಕಟೇಶ್ವರ ದೇವಾಲಯದಲ್ಲಿದೆ. ಗರ್ಭಗುಡಿಯ ಬಲ ಬದಿಗೆ ಕುಳಿತ ಭಂಗಿಯ ವೈಷ್ಣವಿ ಶಿಲ್ಪವಿದೆ. ಕಿರೀಟ, ಕಿವಿಯೋಲೆ, ಕೊರಳಲ್ಲಿ ಸರ ಧರಿಸಿಕೊಂಡಿದ್ದಾಳೆ. ನಾಲ್ಕು ಕೈಯಲ್ಲಿ ಕಮಲ, ಅಭಯ ಮುದ್ರೆ, ವರದಾಮುದ್ರೆ ದರಿಸಿದ್ದಾಳೆ. ಇಲ್ಲಿನ ಎಡಬದಿಯ ದೇವಕೋಷ್ಠಕದಲ್ಲಿ ಕ್ರಿ.ಶ.೧೨-೧೩ನೇ ಶತಮಾನಕ್ಕೆ ಸೇರಿದ ಈಶ್ವರ ಲಿಂಗವಿದೆ.

**ನಾರಾಯಣ ಗುಡಿ**

| | | | |
|---|---|---|---|
| **ಊರು** | : ಕಸಬಾ ಲಿಂಗಸೂಗೂರು | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ವೆಂಕಟೇಶ್ವರ ದೇವಾಲಯ | **ಅಭಿಮುಖ** | : ಉತ್ತರ |
| **ಸ್ಥಳ** | : ಊರ ಹೊರಗೆ | **ಸ್ಥಿತಿ** | : ಕನಿಷ್ಠ |
| **ಕಾಲ** | : – | | |

ಅಪಾರ ಸಂಶೋಧನೆಗೆ ಸಾಧ್ಯತೆಗಳಿರುವ ನೂರಾರು ಸ್ಮಾರಕಗಳಲ್ಲಿ ಕಸಬಾ ಲಿಂಗಸೂಗೂರಿನ ನಾರಾಯಣಗುಡಿ ಒಂದಾಗಿದ್ದು, ಹಳೆಯ ಕುಪ್ಪಿ ಗ್ರಾಮದಲ್ಲಿದೆ. ಈ ದೇವಾಲಯವು ಸಂಪೂರ್ಣವಾಗಿ ಶಿಥಿಲವಾಗಿ ಕಂಡುಬರುತ್ತದೆ. ಸೂಕ್ಷ್ಮವಾಗಿ ಈ ಸ್ಥಳದಲ್ಲಿ ಗಮನಿಸಿದಾಗ ದೇವಾಲಯದ ತಳಪಾಯ ಕಂಡುಬರುತ್ತದೆ. ಇದು ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿದೆ. ಇದರ ಗರ್ಭಗೃಹದ ಗೋಡೆಯ ಕಲ್ಲುಗಳು ನೆಲಕ್ಕೆ ಬಿದ್ದಿವೆ. ಇಲ್ಲಿ ಸೂರ್ಯನ

ಪಾಣಿಪೀಠ ಕಂಡುಬಂದಿದೆ. ಇದರ ಮೇಲೆ ನಾರಾಯಣ ಮೂರ್ತಿಶಿಲ್ಪವನ್ನು ಇಡಲಾಗಿದೆ. ನಾರಾಯಣನಿಗೆ ನಾಲ್ಕು ಕರಗಳಿದ್ದು, ಮೇಲಿನ ಎರಡು ಕರಗಳಲ್ಲಿ ಶಂಖ, ಚಕ್ರಗಳಿದ್ದು, ಕೆಳಬಲಗೈಯ ಹಸ್ತ ಕೆಳಮುಖವಾಗಿದೆ. ಎಡಗೈಯನ್ನು ಟೊಂಕದ ಮೇಲೆ ಇಟ್ಟಿರುವುದು ಕಾಣಿಸಿದೆ. ಕೊರಳಲ್ಲಿ ಹಾರವನ್ನು ಧರಿಸಿದ್ದಾನೆ. ಕಾಲುಗಳಲ್ಲಿ ಗೆಜ್ಜೆ ಹಾಕಿಕೊಂಡಿದ್ದಾನೆ.[೩೧]

### ೫.೩. ಜೈನ ಬಸದಿಗಳು

| | | | |
|---|---|---|---|
| **ಊರು** | : ಮುದಗಲ್ | **ಶೈಲಿ** | : ಕಲ್ಯಾಣ ಚಾಲುಕ್ಯ |
| **ಸ್ಮಾರಕ** | : ಪಾರ್ಶ್ವನಾಥ | **ಅಭಿಮುಖ** | : ಪೂರ್ವ |
| **ಸ್ಥಳ** | : ಪುರಸಭೆ ಮುಂಭಾಗ | **ವಸ್ತು** | : ಕಪ್ಪು |
| **ಕಾಲ** | : ಕ್ರಿ.ಶ.೧೧-೧೨ನೇ ಶತಮಾನ | | |

ಮುದಗಲ್ ಪುರಸಭೆ ಮುಂಭಾಗದ ಚರಂಡಿ ಪಕ್ಕದಲ್ಲಿ ೧೨ನೇ ಶತಮಾನಕ್ಕೆ ಸಂಬಂಧಿಸಿದ ಕಲಿಕಲ್ಲಿನ ಜೈನರ ತೀರ್ಥಂಕರನಾದ ಪಾರ್ಶ್ವನಾಥ ವಿಗ್ರಹ ಪತ್ತೆಯಾಗಿದೆ. ಪಾಶ್ವನಾಥ ವಿಗ್ರಹ ಒಂದಕ್ಕೂ ಹೆಚ್ಚು ಅಡಿ ಎತ್ತರ, ಎರಡಕ್ಕೂ ಹೆಚ್ಚು ಅಡಿ ಅಗಲವಿದೆ. ಈ ಪಾರ್ಶ್ವನಾಥ ವಿಗ್ರಹ ತೃಟಿತ ಭಾಗ ಮಾತ್ರ ಉಳಿದಿದೆ. ಕೆಳಭಾಗವನ್ನು ಯಾರೋ ದುಷ್ಕರ್ಮಿಗಳು ಭಗ್ನಗೊಳಿಸಿ ಎಲ್ಲಿಯೋ ಬಿಸಾಡಿರಬಹುದಾಗಿದೆ. ಪಾರ್ಶ್ವನಾಥನ ತಲೆಯ ಮೇಲೆ ಏಳು ಎಡೆಯ ನಾಗರಹಾವು ಕಾಣಿಸುತ್ತದೆ. ಇದರ ಮೇಲೆ ಮುಕ್ಕೊಡೆ ಇದೆ. ಪಾರ್ಶ್ವನಾಥನ ಎಡಬದಿಯಲ್ಲಿ ಭರಣೇಂದ್ರ ಯಕ್ಷ ಶಿಲ್ಪವಿದೆ.[೩೨] ಮುದಗಲ್ ವಿವಿಧ ಧರ್ಮ, ಕಲೆ, ಸಾಹಿತ್ಯ ಸಂಸ್ಕೃತಿಗಳ ಬೀಡಾಗಿದೆ. ಮುದಗಲ್‌ನಲ್ಲಿ ಹಿಂದೆ ರಾಜ ಮಹಾರಾಜರುಗಳೂ ಧರ್ಮಕ್ಕೆ ಪ್ರಾಧಾನ್ಯತೆ ನೀಡಿದ್ದರಿಂದಾಗಿ ಇಂದಿಗೂ ಪಟ್ಟಣದಲ್ಲಿ ಹಲವಾರು ಮಂದಿರ, ಚರ್ಚ್ ಮಸೀದಿಗಳು ಕಲೆಯ ಬೀಡಾಗಿ ಕಂಗೊಳಿಸುತ್ತಿದೆ.[೩೩]

ಕಲ್ಯಾಣ ಚಾಲುಕ್ಯರು, ಸೇವಣರು, ವಿಜಯನಗರ ಅರಸರು ಹಾಗೂ ಬಹುಮನಿ ಸುಲ್ತಾನರ ಕಾಲದ ಸ್ಮಾರಕಗಳು ಇಲ್ಲಿ ಕಾಣಿಸುತ್ತವೆ. ಅವುಗಳಲ್ಲಿ ಕೆಲ ಸ್ಮಾರಕಗಳ ಭಗ್ನಗೊಂಡಿದ್ದು ಅವುಗಳ ಸಂರಕ್ಷಣೆ ಆಗಬೇಕಾಗಿದೆ. ಇಲ್ಲಂದ್ರೆ ಮುಂದಿನ ಪೀಳಿಗೆಗೆ ಇವುಗಳ ಮಹತ್ವವಾದರೂ ಗೊತ್ತಾಗುವುದು ಹೇಗೆ ಎನ್ನುತ್ತಾರೆ. ಅಲ್ಲಿನ ಪ್ರಜ್ಞಾವಂತ ನಾಗರಿಕರು.[೩೪]

### ೫.೪. ಕೋಟೆಗಳು

ಭಾರತೀಯ ಇತಿಹಾಸದಲ್ಲಿ ಕೋಟೆಯ ಪ್ರಾಚೀನತೆ ಪುರಾಣದ ಕಾಲಕ್ಕೆ ಹೋಗುತ್ತದೆ. ಇಂದ್ರಪ್ರಸ್ತ ನಗರದ ಪಾಂಡವರ ಕೋಟೆಯ ಒಂದು ಭಾಗವನ್ನು ದೆಹಲಿಯ ಹುಮಾಯೂನನು

ಸರಿಪಡಿಸಿದನೆಂಬುದು ಪ್ರತೀತಿ ಇದೆ. ವಾಲ್ಮೀಕಿಯ ರಾಮಾಯಣ ಮತ್ತು ಮಹಾಭಾರತದಲ್ಲಿ ಕೋಟೆಗಳ ಉಲ್ಲೇಖವಾಗಿರುವುದನ್ನು ಕಾಣಿಸುತ್ತದೆ. ಹರಪ್ಪಾ ಮತ್ತು ಮೆಹೆಂಜೋದಾರೊಗಳಲ್ಲಿ ಕೋಟೆಗಳಿದ್ದುದು ಉತ್ಖನನ ವರದಿಗಳಿಂದ ತಿಳಿಯುತ್ತವೆ. ಮೌರ್ಯ ಸಾಮ್ರಾಜ್ಯದ ಕಾಲದಲ್ಲಿ ಗ್ರೀಕರ ರಾಯಭಾರಿಯಾಗಿ ಮೊದಲನೆ ಚಂದ್ರಗುಪ್ತನ ಆಸ್ಥಾನಕ್ಕೆ ಬಂದಿದ್ದ ಮೆಗಸ್ತಾನಿಸ್‌ನು ಪಾಟಲಿಪುತ್ರ ನಗರದ ಕೋಟೆಯನ್ನು ವರ್ಣಿಸಿದ್ದಾನೆ. ರಾಜ್ಯದ ಅತ್ಯವಶ್ಯಕ ಸಂಪ್ತಾಂಗಗಳಲ್ಲಿ ದುರ್ಗ ಅಥವ ಕೋಟೆ ಒಂದು ಎಂದು ರಾಜನೀತಿ ಹೇಳುತ್ತದೆ. "ಕೋಟೆ ಕಟ್ಟಿ ಮೆರೆದವರೆಲ್ಲ ಏನಾದರು? ಮೀಸೆ ತಿರುವಿ ಕುಣಿದವರೆಲ್ಲ ಮಣ್ಣಾದರು" ಎಂಬ ಹಾಡನ್ನು ನೆನಪಿಸಿಕೊಂಡಾಗ, ಕೋಟೆಯನ್ನು ನಿರ್ಮಿಸಿದವರ ಗತಿಯೇ ಕೋಟೆಗಳಿಗೂ ಇಂದು ಬಂದೊದಗಿರುವುದು ವಿಪರ್ಯಾಸದ ಸಂಗತಿಯಾಗಿದೆ. ಕರ್ನಾಟಕದ ಕೋಟೆಗಳು ಗತಕಾಲದ ವೈಭವದ, ಶೌರ್ಯದ, ಒಲವಿನ ತ್ಯಾಗದ, ಬಲಿದಾನದ, ಸೌಂದರ್ಯದ ಪ್ರತೀಕಗಳಾಗಿವೆ.

ರಾಜ್ಯದ ಮತ್ತು ರಾಜನ ಸಂರಕ್ಷಣೆಯ ಸಲುವಾಗಿ ಅಂದಿನ ಯುದ್ಧಕೌಶಲ್ಯಕ್ಕೆ ಅನುಗುಣವಾಗಿ, ಶತ್ರುಗಳನ್ನು ಪರಿಣಾಮಕಾರಿಯಾಗಿ ಪ್ರತಿರೋಧಿಸುವುದಕ್ಕಾಗಿ ಕೋಟೆಗಳು ನಿರ್ಮಾಣವಾದವು. ಆದರೆ ಇಂದಿನ ಸ್ಥಿತಿಗತಿ ಯುದ್ಧ ತಂತ್ರಗಳಲ್ಲಿ ಉಂಟಾದ ಬದಲಾವಣೆ ಯಿಂದ ಈ ಕೋಟೆಗಳು ಮಹತ್ವ ಕಳೆದುಕೊಂಡು ಕೇವಲ ಸ್ಮಾರಕಗಳಾಗಿ ಉಳಿದಿದ್ದನ್ನು ಗಮನಿಸಬಹುದು. ಅಂದಿನ ಕಾಲದ ರಾಜರ ಮತ್ತು ಚಿಕ್ಕ ಸಂಸ್ಥಾನದ ಮುಖ್ಯಸ್ಥರ ಅತಿ ಹೆಚ್ಚಿನ ಬಲ ಈ ಕೋಟೆಗಳೇ. ಕೋಟೆಯಿಂದ ರಕ್ಷಿತವಾಗಿಲ್ಲದ ಪಟ್ಟಣಗಳನ್ನು ಶತ್ರುಗಳು ಬಹು ಸುಲಭವಾಗಿ ಸ್ವಾಧೀನಪಡಿಸಿಕೊಳ್ಳಬಲ್ಲರು. ಆದ್ದರಿಂದ ಆಳುವವರು ಅತ್ಯವಶ್ಯಕವಾಗಿ ಕೋಟೆಯನ್ನು ಕಟ್ಟಬೇಕೆಂದು ಸಾಮ್ರಾಜ್ಯ ಲಕ್ಷ್ಮೀ ಪೀಠಿಕಾದಲ್ಲಿ ಪ್ರಸ್ತಾಪವಾಗಿದೆ.

ಕನ್ನಡಿಗರು ಶಕ್ತಿಯ ಆರಾಧಕರು. 'ದುರ್ಗ'ವಿಲ್ಲದವರಾಗದೇ, 'ದುರ್ಗ'ಗಳನ್ನು ಕಟ್ಟಿ ಅವುಗಳಿಗೆ ಶಕ್ತಿರೂಪಿಣಿ 'ದುರ್ಗಿ'ಯ ಹೆಸರಿನಿಂದಲೇ 'ದುರ್ಗ' ಎಂದು ಕರೆದರು. ಸಾಮ್ರಾಜ್ಯವನ್ನು ಕಟ್ಟುವ ಗುರುತರವಾದ ಜವಾಬ್ದಾರಿ ವಹಿಸಿದ ಕನ್ನಡಿಗರು ಸಾಮ್ರಾಜ್ಯವನ್ನು ಕಟ್ಟುವ ಗುರುತರವಾದ ಜವಾಬ್ದಾರಿ ವಹಿಸಿದ ಕನ್ನಡಿಗರು ಸಾಮ್ರಾಜ್ಯದ ಸೀಮೆಯ ಒಳ ಹಾಗೂ ಹೊರ ಪ್ರದೇಶಗಳಲ್ಲಿ ಗಟ್ಟಿಮುಟ್ಟಾದ ಕಲಾಕೌಶಲ್ಯ ಪೂರ್ಣವಾದ ಕೋಟೆಗಳನ್ನು ನಿಯಮಾನುಸಾರ ನಿರ್ಮಿಸುವ ಮೂಲಕ ತಮ್ಮ ಹೆಸರುಗಳನ್ನು ಅಜರಾಮರವಾಗಿಸಿಕೊಂಡು, ಮುಂದಿನ ಪೀಳಿಗೆಗೆ ತಮ್ಮದೇ ಆದ ಭವ್ಯ ಕಟ್ಟಡಗಳನ್ನು ಉಡುಗೊರೆಯಾಗಿ ನೀಡಿದರು.

ಕರ್ನಾಟಕದ ಉತ್ತರ ಭಾಗದಲ್ಲಿ ಮುಸ್ಲಿಮರ ರಾಜ್ಯಗಳು ಸ್ಥಾಪನೆಯಾದವು. ಇದರಲ್ಲಿ ಬಿಜಾಪುರದ ಆದಿಲ್‌ಷಾಯಿ ಅರಸರು ೧೫ನೇ ಶತಮಾನದಿಂದ ೧೭ನೇ ಶತಮಾನದವರೆಗೆ

ಆಳಿದ ಈ ವಂಶದ ಅರಸರು ಮುದಗಲ್ ಕೋಟೆಯನ್ನು ಕಟ್ಟಿಸಿದರು. ಲಿಂಗಸೂಗೂರು ತಾಲೂಕಿನಲ್ಲಿ ಎದ್ದುಕಾಣುವ ಪ್ರಮುಖ ಕೋಟೆಗಳೆಂದರೆ ಜಲದುರ್ಗ, ಮುದುಗಲ್ ಕೋಟೆಗಳಾಗಿವೆ. ಇನ್ನೂ ಈ ತಾಲೂಕಿನಲ್ಲಿ ಕೆಲವು ಕೋಟೆಗಳನ್ನು ಕಾಣುತ್ತೇವೆ. ಹೊನ್ನಳ್ಳಿ, ಗುಡಗುಂಟಿ, ಹಾಲಬಾವಿ, ಕೋಠಾ, ಗೋಲಪಲ್ಲಿ, ಆನೆಹೊಸೂರು, ಹುನಕುಂಟೆ ಮೊದಲಾದವುಗಳು ಈ ತಾಲೂಕಿನಲ್ಲಿ ಕಾಣಿಸುತ್ತವೆ. ನನ್ನ ಅಧ್ಯಯನದ ವ್ಯಾಪ್ತಿಗೆ ಸಂಬಂಧಪಟ್ಟಂತೆ ಕೋಟೆಗಳ ಬಗ್ಗೆ ಮಾಹಿತಿ ಸೆರೆ ಹಿಡಿಯುವ ಪ್ರಯತ್ನ ಮಾಡಲಾಗಿದೆ.

**ಮುದುಗಲ್ಲು ಕೋಟೆ**

ಮುದುಗಲ್ಲು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲೂಕಿನಲ್ಲಿರುವ ಒಂದು ಸಣ್ಣ ಪಟ್ಟಣವಾಗಿದೆ. ಇದು ಲಿಂಗಸೂಗೂರಿನಿಂದ ದಕ್ಷಿಣಕ್ಕೆ ಗಂಗಾವತಿಗೆ ಹೋಗುವ ರಸ್ತೆಯಲ್ಲಿ ಸುಮಾರು ೧೮ ಕಿ.ಮೀ. ದೂರದಲ್ಲಿದೆ. ಇಲ್ಲಿ ದೊಡ್ಡದಾದ ಸುಸ್ಥಿತಿಯಲ್ಲಿರುವ ಕೋಟೆಯಿದೆ. ಇಲ್ಲಿ ಕೋಟೆ ಗೋಡೆಯ ಮೇಲೆ ಅನೇಕ ಶಾಸನಗಳಿವೆ. ಇದರೊಳಗೆ ಮಸೀದಿಗಳು, ಅರಮನೆಯ ಅವಶೇಷಗಳು, ಮದ್ದುಗುಂಡಿನ ಉಗ್ರಾಣ, ದೇವಾಲಯ, ಬಾವಿಗಳು ಮುಂತಾದವುಗಳಿವೆ. ಇಂತಹ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ಕೋಟೆಯು ಒಳಾವರಣದಲ್ಲಿ ಹಲವು ದೇವಾಲಯಗಳಿವೆ. ಅವುಗಳೆಂದರೆ ಬಾಲಾಜಿ, ಆದಿಕೇಶವ, ಬೆಣ್ಣೆಕೃಷ್ಣ, ಅಶ್ವತ್ಥನಾರಾಯಣ, ದಿಡ್ಡಿರಾಯ, ರಂಗನಾಥ, ರಾಮಲಿಂಗೇಶ್ವರ, ಎಮ್ಮೆ ಬಸವಶಣ್ಣ, ಕೋಟೆ ಹನುಮಪ್ಪ ದೇವಾಲಯಗಳು. ರಾಘವೇಂದ್ರಸ್ವಾಮಿಗಳ ಮಠ, ಹಜರತ್ ಹುಸೇನ್ ಆಲಂ ದರ್ಗಾ, ಮುತ್ಯಾನ ದರ್ಗಾ, ಗಜಶಾಲೆ, ಗರಡಿಮನಿ, ಚಾರ್‌ಮಹಲ್ ಬಾವಿ, ಬಂಗಲಾ ಹಾಳುಬಾವಿ, ತಹಸೀಲು ಕಚೇರಿ, ಬಾರೋದ ಕೋಟಾಗಳೀವೆ. ಇದೊಂದು ಪ್ರಾಚೀನ ಸ್ಥಳವಾಗಿದ್ದು, ಕ್ರಿ.ಪೂ.೨ನೇ ಶತಮಾನದಲ್ಲಿ ಜೀವಿಸಿದ್ದ ಗ್ರೀಕ್ ದೇಶದ ಟಾಲಮಿಯು ತನ್ನ ಗ್ರಂಥದಲ್ಲಿ ಮುದುಗಲ್‌ನ್ನು ಉಲ್ಲೇಖಿಸಿದ್ದಾನೆ.[೩೮] ಇದರಿಂದಾಗಿ ಅಷ್ಟು ಪ್ರಾಚೀನ ಕಾಲದಲ್ಲಿಯೇ ಮುದುಗಲ್ ಒಂದು ಪ್ರಮುಖ ಸ್ಥಳವಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ.೧೩ನೇ ಶತಮಾನದ ಪ್ರಾರಂಭದಲ್ಲಿ ಮುದುಗಲ್ ಕರಡಿಕಲ್-೪೦೦ರ ರಾಜಧಾನಿಯಾಗಿತ್ತು.[೩೯] ಕದಂಬರು ಈ ಪ್ರದೇಶವನ್ನು ಆಳುತ್ತಿದ್ದರು. ಬಹುಶಃ ಆಗ ಇಲ್ಲಿ ಒಂದು ಕೋಟೆಯಿದ್ದು, ಮುಂದೆ ವಿಜಯನಗರದ ಕಾಲದಲ್ಲಿ ಅವರ ಸ್ಥಳದಲ್ಲಿಯೇ ಈಗಿರುವ ಕೋಟೆಯನ್ನು ಕಟ್ಟಲಾಗಿದೆಯೆಂದು ತೋರುತ್ತದೆ. ಕೃಷ್ಣ ಮತ್ತು ತುಂಗಭದ್ರಾ ನದಿಗಳ ಮಧ್ಯದಲ್ಲಿರುವ ಫಲವತ್ತಾದ ಪ್ರದೇಶಕ್ಕಾಗಿ ವಿಜಯನಗರ ಮತ್ತು ಬಹುಮನಿ, ನಂತರ ವಿಜಯನಗರ ಮತ್ತು ಆದಿಲ್‌ಶಾಹಿ ಅರಸರ ನಡುವೆ ಅನೇಕ ಯುದ್ಧಗಳು ನಡೆದವು.

ಈ ಯುದ್ಧಗಳ ಫಲಿತಾಂಶಗಳಿಗನುಗುಣವಾಗಿ ಈ ಭಾಗದಲ್ಲಿರುವ ಮುದುಗಲ್ ಮತ್ತು ರಾಯಚೂರು ಕೋಟೆಗಳು ವಿಜಯನಗರ ಅರಸರಿಗೆ ವಶವಾಗುತ್ತಿದ್ದವು. ಈ ಕೋಟೆಯ ಗೋಡೆಗಳಲ್ಲಿ ವಿಜಯನಗರ ಅರಸರ ವಶದಲ್ಲಿದ್ದಾಗ ಅವರು ಬರೆಸಿದ ಶಾಸನಗಳು ಕಂಡುಬಂದರೆ, ಮುಸ್ಲಿಂ ಅಸರ ವಶದಲ್ಲಿದ್ದಾಗ ಅವರು ಬರೆಸಿದ ಶಾಸನಗಳು ದೊರೆಯುತ್ತವೆ. ಇದೊಂದು ಗಿರಿದುರ್ಗದಂತೆ ಕಂಡುಬರುತ್ತದೆ. ಆಯತಾಕಾರದ ತಳವಿನ್ಯಾಸವನ್ನು ಹೊಂದಿದೆ.

ರಾಯಚೂರು ಕೋಟೆ ಬಿಟ್ಟರೆ, ಮುದಗಲ್ಲು ಕೋಟೆ ನಮ್ಮ ತಾಲ್ಲೂಕಿನಲ್ಲಿಯೇ ದೊಡ್ಡ ಗಾತ್ರದ ಕೋಟೆ ಹಾಗೂ ಕರ್ನಾಟಕದಲ್ಲಿ ಅತ್ಯಂತ ಬಲಿಷ್ಠವಾದ ಬಯಲು ಕೋಟೆಯಾಗಿದೆ. ಒಳಕೋಟೆಯು ಬಲಿಷ್ಠವಾಗಿ ಎತ್ತರವಾಗಿದ್ದು, ಹೊರಕೋಟೆ ದಪ್ಪ ಮತ್ತು ಎತ್ತರ ಎರಡಲ್ಲೂ ಚಿಕ್ಕದಾಗಿ ಕಾಣುತ್ತದೆ. ಎರಡು ಸುತ್ತಿನ ಕೋಟೆಯಾಗಿದ್ದು, ಕೋಟೆಗೋಡೆಯ ಹೊರಮೈಗಳು ತೀರಾ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಿಸಿ ಕಟ್ಟಿದ್ದಾರೆ.[೩೬] ಈ ಕೋಟೆ ಹಿಂದೂ–ಮುಸ್ಲಿಂ ಸಾಮರಸ್ಯದ ಸಂಕೇತ ಎನ್ನುವುದಕ್ಕೆ ಸಾಕ್ಷಿ ಎನ್ನುವಂತೆ ಹಲವು ಸಂಗತಿಗಳು ಇಲ್ಲಿ ಕಾಣಬಹುದು. ಒಳಗೋಡೆಗಳಲ್ಲಿ ಇಪ್ಪತ್ತನಾಲ್ಕು ಹಿಂದೂ ಶೈಲಿಯ ಚೌಕಾಕಾರದ ಕೊತ್ತಲಗಳಿದ್ದರೆ, ಇಪ್ಪತ್ತೈದು ಮುಸ್ಲಿಂ ಶೈಲಿಯ ವೃತ್ತಾಕಾರದ ಕೊತ್ತಲಗಳಿವೆ.[೩೭] ಕೋಟೆ ಮೇಲೆ ಮತ್ತು ಕೋಟೆ ಒಳಗೆ ಹಾಗೂ ಕೋಟೆಯ ಕೊತ್ತಲು, ನಿಟು ಹಾಗೂ ಕದಗಳ ಮೇಲೆ ಶಾಸನಗಳನ್ನು ಕೊರೆಯಲಾಗಿದೆ. ಒಳಕೋಟೆಯಲ್ಲಿ ಸಾಳುವ ತಿಮ್ಮಯ್ಯನ ಕೊತ್ತಳ,[೩೮] ಉದಯಗಿರಿಯ ಬಸುವರಾಜ ಕಟ್ಟಿಸಿದ ಕೊತ್ತಳ,[೩೯] ಹನುಮಂತನ ಕೊತ್ತಲ,[೪೦] ಕೊಮಾರ ಬುರುಜು,[೪೧] ಫತೆ ಜಂಗು ಬುರುಜು, ಅಲಿ ಬುರುಜು ಮುಂತಾದವುಗಳಿವೆ. ಹೊರಕೋಟೆಯಲ್ಲಿ ವೆಂಗಳಪ್ಪನಾಯಕ ಕಟ್ಟಿಸಿದ ಬಸವ ಕೊತ್ತಳ[೪೨] ಮತ್ತು ಮಲಿಕ್ ಮುರಾದ ಕಟ್ಟಿಸಿದ ಅನೇಕ ಬುರುಜುಗಳಿವೆ(ಶಾಸನ ಸಂಖ್ಯೆ ೫೬, ೫೯, ೭೨, ೭೩, ೮೯, ೯೭, ೧೦೨, ೧೦೩, ೧೦೫, ೧೦೮, ೧೦೯, ೧೧೦). ಸಾಳುವ ತಿಮ್ಮಯ್ಯನ ಮಂತ್ರಿಯಾಗಿದ್ದ ತಿಮ್ಮರಸ, ಕೊಮಾರ ಬುರುಜನ್ನು ಮತ್ತು ಹನುಮಂತನ ಕೊತ್ತಳವನ್ನು ರಾಮರಾಯನ ಮಗ ಕೃಷ್ಣರಾಜನು ಕಟ್ಟಿಸಿದನು.[೪೩] ಇಲ್ಲಿ ಒಟ್ಟು ೯೯ ಶಾಸನಗಳು ದೊರೆಯುತ್ತವೆ. ಕನ್ನಡ ಭಾಷೆಯಲ್ಲಿ ೭೭, ಸಂಸ್ಕೃತ ಕನ್ನಡ ಒಂದು, ಕನ್ನಡ–ತೆಲುಗಿನ ಒಂದು, ಪರ್ಶಿಯನ್ ಭಾಷೆಯ ಹತ್ತು, ಅರೇಬಿಕ್ ನಕ್ಷೆಯ ಒಂದು, ಗುಜರಾತಿ ಭಾಷೆಯ ಎರಡು, ಹೀಗೆ ೯೯ ಶಾಸನಗಳು ಇಲ್ಲಿವೆ.[೪೪] ಇವುಗಳು ಕಲ್ಯಾಣ ಚಾಲುಕ್ಯರ, ಯಾದವರ, ಕರಡಕಲ್ಲಿನ ಕದಂಬರ, ವಿಜಯನಗರ ಅರಸರ, ಬಹುಮನಿ ಆದಿಲ್‌ಶಾಹಿಗಳ, ಮೊಘಲರ ಹಾಗೂ ಹೈದರಾಬಾದ್ ನಿಜಾಮರ ಆಳ್ವಿಕೆಯ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಹೀಗೆ ಭವ್ಯ

ಪರಂಪರೆಯನ್ನು ಹೊಂದಿರುವ ಮುದಗಲ್ಲನ್ನು ಒಂದು ಪ್ರಮುಖ ಪ್ರವಾಸಿ ತಾಣವಾಗಿ ಅಭಿವೃದ್ಧಿಪಡಿಸಿದರೆ ಮುದಗಲ್ಲು ಮುಂದಿನ ಪೀಳಿಗೆಯರಿಗೆ ನೋಡಲು ಉಳಿದೀತು.[೪೫]

**ಜಲದುರ್ಗ ಕೋಟೆ**

ಜಲದುರ್ಗವು ಲಿಂಗಸೂಗೂರು ತಾಲೂಕಿನಿಂದ ವಾಯುವ್ಯ ದಿಕ್ಕಿನಲ್ಲಿದೆ. ಈ ಕೋಟೆಯು ಪ್ರಕೃತಿಯಿಂದ ನಿರ್ಮಿಸಿದ ರೀತಿಯಲ್ಲಿ ತೋರುತ್ತದೆ. ಇಲ್ಲಿ ಅನೇಕ ಅರಸರ ಆಡಳಿತದಲ್ಲಿ ಶ್ರೀಮಂತವಾಗಿ ಮೆರೆದ ಕೋಟೆ ಇದಾಗಿದೆ. ದೇವಗಿರಿಯ ಯಾದವರು, ವಿಜಯನಗರ ಅರಸರು, ವಿಜಯಪುರದ ಆದಿಲ್‌ಶಾಹಿಗಳು, ಮೊಘಲರ ಔರಂಗಜೇಬ್ ಮತ್ತು ಸುರಪುರದ ನಾಯಕರು ಈ ಕೋಟೆಯನ್ನು ಆಳ್ವಿಕೆ ಮಾಡಿದ್ದಾರೆ. ಇಲ್ಲಿ ಕೃಷ್ಣಾನದಿಯು ಒಡೆದು ಎರಡು ಟಸಿಲುಗಳಾಗಿದ್ದು ಒಂದು ದೊಡ್ಡ ನಡುಗಡ್ಡೆಯಾಗಿ ಏರ್ಪಟ್ಟಿದೆ. ಇದರ ಮೇಲೆಯೇ ಕೋಟೆಯು ನಿರ್ಮಾಣಗೊಂಡಿದೆ. ಅತಿ ಎತ್ತರವಾಗಿ ನಿಂತಿರುವ ಬೆಟ್ಟಗಳ ನಡುವೆ ಕೃಷ್ಣಾನದಿಯು ಹರಿಯುತ್ತದೆ. ಆದ್ದರಿಂದಲೇ ಈ ಸ್ಥಳಕ್ಕೆ 'ಜಲದುರ್ಗ' ಎಂಬ ಹೆಸರು ಬಂದಿದೆ. ಇಲ್ಲಿ ಹರಿಯುತ್ತಿರುವ ನದಿಯಿಂದ ಸುಮಾರು ೪೦೦ ಅಡಿಗಳಷ್ಟು ಎತ್ತರದ ಬೆಟ್ಟದ ಮೇಲೆ ಕೋಟೆಯನ್ನು ನಿರ್ಮಿಸಲಾಗಿದೆ. ಇದೊಂದು ಆಯಕಟ್ಟಿನ ಸ್ಥಾನವಾಗಿದ್ದು, ಸುಂದರವಾದ ಸ್ಥಳವೂ ಆಗಿದೆ. ಇದು ಏಳು ಸುತ್ತಿನ ಕೋಟೆಯಾಗಿದ್ದು, ಏಳು ದ್ವಾರಗಳನ್ನು ಹೊಂದಿದೆ ಎಂದು ಹೇಳಲಾಗಿದೆ. ಈ ಕೋಟೆಯನ್ನು ೧೨ನೇ ಶತಮಾನದಲ್ಲಿ ಕಟ್ಟಲಾಯಿತು. ದೇವಗಿರಿಯ ಯಾದವರಾಜನು ಇದನ್ನು ಕಟ್ಟಿಸಿದ್ದಾನೆ. ದೂರದಿಂದ ನೋಡಿದರೆ ಈ ಕೋಟೆಯು ಒಂದು ದಿಬ್ಬದಂತೆ ಕಾಣುವುದು. ಇದು ಸುಮಾರು ಸಾವಿರ ಎಕರೆ ಅರಣ್ಯ ಪ್ರದೇಶವನ್ನು ಹೊಂದಿದ್ದು, ಆಕರ್ಷಣೀಯ ಸ್ಥಳವಾಗಿದೆ. ಈ ಕೋಟೆಯಲ್ಲಿ ಯಾವ ರಾಜನೂ ವಾಸವಿದ್ದ ಎಂಬುದರ ಬಗ್ಗೆ ಯಾವ ಕುರುಹುಗಳು ಸಿಗುವುದಿಲ್ಲ. ದಿಬ್ಬವನ್ನು ಹತ್ತುವುದರ ಮೂಲಕ, ಸುತ್ತಲಿನ ಕಾಡು ಮತ್ತು ಹಳ್ಳಿಗಳನ್ನು ವೀಕ್ಷಿಸಬಹುದಾಗಿದೆ. ಮೆಡೊಸ್ ಟೇಲರ್‌ರವರು ತಮ್ಮ ನೋಬಲ್ ಕ್ವೀನ್ಸ್ ಕಾದಂಬರಿಯಲ್ಲಿ ಇದರ ಸೌಂದರ್ಯವನ್ನು ವರ್ಣಿಸಿದ್ದಾರೆ.[೪೬] ಇದು ಕೆಲದಿನ ವಿಜಯನಗರ ಅರಸರ ಆಡಳಿತದಲ್ಲಿತ್ತು. ಆ ಕಾಲದಲ್ಲಿಯೇ ಇದೊಂದು ಆಯಕಟ್ಟಿನ ಸೈನಿಕ ಠಾಣೆಯಾಗಿದ್ದು, ಅಪರಾಧಿಗಳನ್ನು ಬಂಧಿಸಿಡುವ ಸ್ಥಳ ಇದಾಗಿತ್ತು.[೪೭]

ಜಲದುರ್ಗದಲ್ಲಿ ಎತ್ತರವಾದ ಕಾವಲುಗೋಪುರವಿದೆ. ಇದರ ಮೇಲಿನಿಂದ ವೀಕ್ಷಿಸಿದರೆ, ನಾಲ್ಕು ದಿಕ್ಕುಗಳಲ್ಲಿ ಸುಮಾರು ೧೦-೧೨ ಕಿಲೋ ಮೀಟರುಗಳು ದೂರದಿಂದ ವೈರಿಗಳ

ಚಲನವಲನಗಳನ್ನು ತಿಳಿದುಕೊಳ್ಳಬಹುದಾಗಿತ್ತು. ಸಂಗಮನಾಥ ದೇವಾಲಯದ ಪಕ್ಕದಲ್ಲಿ ಸುಮಾರು ೪೦೦ ರಿಂದ ೬೦೦ ಅಡಿ ಎತ್ತರವಿರುವ ಗೋಲಾಕಾರದ ಗಡ್ಡೆ ಕಾಣಿಸುತ್ತದೆ. ಇದರ ಮೇಲೆ ತೊಟ್ಟಿಲು ಕಟ್ಟುತ್ತಿದ್ದರು. ಅಪರಾಧಿಯು ತಾನು ಮಾಡಿದ ತಪ್ಪಿಗಾಗಿ ಉಗ್ರವಾದ ಮರಣ ದಂಡನೆ ಶಿಕ್ಷೆ ನೀಡುತ್ತಿದ್ದರು. ಆದರೆ ಇಂದು ತೂಗುವ ತೊಟ್ಟಿಲು ಬಿದ್ದು ಹಾಳಾಗಿದೆ. ಅಲ್ಲಿರುವ ಕೋಟೆಯಲ್ಲಿ ಗಂಗಾಧರ, ನೀಲಮ್ಮ, ಎಲ್ಲಮ್ಮ, ಸಂಗಮೇಶ್ವರ, ಈಶ್ವರ ದೇವಾಲಯಗಳಿವೆ. ಇವುಗಳು ಸಾರ್ವಜನಿಕರ ಗಮನ ಸೆಳೆಯುತ್ತವೆ. ಮುಸ್ಲಿಂ ವಾಸ್ತುಶೈಲಿಯ ಸಂಗಮೇಶ್ವರ ದೇವಾಲಯ, ಬಸವಣ್ಣನ, ಹನುಮಂತನ ಕಟ್ಟೆಗಳಿವೆ. ಈ ಕೋಟೆಯನ್ನು ಸಂರಕ್ಷಿಸಬೇಕಾದ ಜವಾಬ್ದಾರಿ ಇಂದಿನ ನಾಗರೀಕರ ಮೇಲೆ ಇದೆ.

**ಹೊನ್ನಳ್ಳಿ ಕೋಟೆ**

ಲಿಂಗಸೂಗೂರಿನಿಂದ ೮ ಕಿ.ಮೀ. ದೂರದಲ್ಲಿ ಕಲಬುರ್ಗಿಗೆ ಹೋಗುವ ಮಾರ್ಗದಲ್ಲಿರುವ ಗ್ರಾಮವೇ ಹೊನ್ನಳ್ಳಿ. ಇದರ ಅಕ್ಷಾಂಶ ೧೬°-೧೩° ಉತ್ತರ ಮತ್ತು ರೇಖಾಂಶ ೭೬° ೩೪° ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಈ ಗ್ರಾಮದಲ್ಲಿ ಕೋಟೆ, ಬಾವಿ, ದೇವಾಲಯಗಳು ಇವೆ. ಈ ಕೋಟೆ ಆಯತಾಕಾರದಲ್ಲಿದೆ. ಕೋಟೆಯ ಬಾಗಿಲು ಉತ್ತರ ದಿಕ್ಕಿನ ಗೋಡೆಯ ಮಧ್ಯದಲ್ಲಿದೆ. ಬಾಗಿಲಿಗೆ ಸರಳವಾದ ಚೌಕಟ್ಟಿದೆ. ಉತ್ತರಂಗದ ಮೇಲೆ ಸೂರ್ಯ, ಚಂದ್ರರ ಚಿತ್ರಗಳು ಕಾಣುತ್ತವೆ. ಕೋಟೆಯ ವಾಯುವ್ಯ ದಿಕ್ಕಿಗೆ ಸ್ವಲ್ಪ ದೂರದಲ್ಲಿ ಒಂದು ಬಾಗಿಲು ಇದೆ. ಇದು ಹೊರಸತ್ತಿನಲ್ಲಿರುವಂತೆ ಕಾಣುತ್ತದೆ. ಬಾಗಿಲಿನ ಎದುರಿಗೆ ಸ್ವಲ್ಪ ದೂರದಲ್ಲಿ ಬಂಡೆಯ ಮೇಲೆ ವೃತ್ತಾಕಾರದ ಎತ್ತರವಾದ ಕಾವಲು ಗೋಪುರವಿದೆ. ಕೋಟೆಯ ಹೊರಗೆ ಪಶ್ಚಿಮಕ್ಕೆ ಆಂಜನೇಯ ಮತ್ತು ಬಸವಣ್ಣ ದೇವಲಯಗಳಿವೆ. ಬಸವಣ್ಣ ದೇವಾಲಯದ ಮೇಲೆ ಇಟ್ಟಿಗೆ, ಗಾರೆಯ ವಿಮಾನ ಶೈಲಿಯ ಮೇಲ್ಕಟ್ಟಡವಿದೆ. ಕೋಟೆಯನ್ನು ದಪ್ಪವಾದ ಕಪ್ಪು ಕಲ್ಲುಗಳಿಂದ ಕಟ್ಟಲಾಗಿದೆ. ಈ ಕೋಟೆ ಚೌಕ ಮತ್ತು ಆಯತಾಕಾರದಲ್ಲಿದೆ. ಚಿಕ್ಕ ಚಿಕ್ಕ ಕಪ್ಪುಕಲ್ಲುಗಳನ್ನು ಮತ್ತು ಬಳಿ ಬೆಣಚು(ಗ್ರಾನೈಟ್) ಕಲ್ಲುಗಳನ್ನು ಅಲ್ಲಲ್ಲಿ ಉಪಯೋಗಿಸಿದೆ. ಕೋಟೆಯ ಉತ್ತರ ಗೋಡೆಯ ಮಧ್ಯದಲ್ಲಿ ಒಂದು ಬಾಗಿಲು, ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಕೊತ್ತಳಗಳು ಮತ್ತು ದಕ್ಷಿಣ ಗೋಡೆಯ ಮಧ್ಯದಲ್ಲಿ ಒಂದು ವೃತ್ತಾಕಾರದ ಕೊತ್ತಳ ಇದೆ. ಸುಮಾರು ಮೂವತ್ತು ಅಡಿ ಎತ್ತರವಾದ ಕೋಟೆಯ ಕೈಪಿಡಿ ಗೋಡೆಯಲ್ಲಿ ತೆನೆಗಳಿವೆ. ಆದರೆ ತೆನೆಗಳ ಮಧ್ಯದ ಭಾಗವನ್ನು ಕಲ್ಲಿನಿಂದ ಕಟ್ಟಿ ಮುಚ್ಚಿದೆ. ಆದುದರಿಂದ ತೆನೆಗಳು ಅಲಂಕಾರಿಕವಾಗಿ ಮಾತ್ರ ಕಾಣುತ್ತವೆ. ಕೋಟೆಯ ಗೋಡೆಯಲ್ಲಿ ಕೆಲವು ಕಡೆ ಬಂದೂಕು ಕಿಂಡಿಗಳಿವೆ. ಅದರ ಸುತ್ತಲೂ ಕೊತ್ತಳಗಳೂ ಇವೆ.

ಕೋಟೆಯ ಬಾಗಿಲು ವೈರಿಯ ಕಣ್ಣಿಗೆ ಕಾಣದಂತೆ ಮಾಡಲು ಮುಂದೆ ಒಂದು ಅಡ್ಡಗೋಡೆಯನ್ನು ಕಟ್ಟಿದೆ. ಕೋಟೆಯ ಬಾಗಿಲಿಗೆ ಎರಡು ಚೌಕಟ್ಟುಗಳಿವೆ. ಗೋಡೆಯ ಕಲ್ಲುಗಳನ್ನು ಮುಂದೆ ಚಾಚುವಂತೆ ಮಾಡಿ ತೋಳುಗಳನ್ನು ನಿರ್ಮಿಸಿದೆ. ಪಶ್ಚಿಮ ಬದಿಯಿಂದ ಪ್ರಾರಂಭವಾಗುವ ಅಡ್ಡಗೋಡೆ ಲಂಬಕೋನದಲ್ಲಿ ಉತ್ತರಕ್ಕೆ ಸಾಗುತ್ತದೆ. ಅದು ಮುಂದೆ ವಕ್ರಾಕಾರವಾಗಿ ಪೂರ್ವಕ್ಕೆ ತಿರುಗಿ ಮುಂದೆ ಸಾಗುತ್ತದೆ. ಬೋದಿಗೆಗಳು ಸುರುಳಿಯಾಕಾರವಾಗಿವೆ. ಕೆಳಗಿನ ಉತ್ತರಂದ ಮೇಲೆ ಹೂ, ಸೂರ್ಯ, ಚಂದ್ರ ಮತ್ತು ಎರಡು ಮೀನುಗಳ ಶಿಲ್ಪಗಳಿವೆ. ಬಾಗಿಲಿನ ಮರದ ಕದಗಳು ಸುಸ್ಥಿತಿಯಲ್ಲಿವೆ. ಕದದ ಮೇಲಿನ ಭಾಗದಲ್ಲಿ ಕಬ್ಬಿಣದ ನಾಲ್ಕು ಮೂಲೆಯ ಚೂಪಾದ ಮತ್ತು ಉದ್ದವಾದ ಮೊಳೆಗಳಿವೆ. ಪ್ರವೇಶದ ಪಕ್ಕದಲ್ಲಿ ಎತ್ತರವಾದ ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಒಂದು ಅಂಕಣವಿದೆ. ಕೋಟೆಯ ಒಳಗಡೆ ಬಾಗಿಲಿನ ನೈರುತ್ಯ ದಿಕ್ಕಿಗೆ ರಾಮಲಿಂಗೇಶ್ವರ ದೇವಾಲಯವಿದೆ. ಇಲ್ಲಿಯ ಕೋಟೆಯ ಸ್ಥಳವನ್ನು ಅಲ್ಲಿರುವ ಜನ ಆಕ್ರಮಿಸಿದ್ದಾರೆ. ಕೆಲವು ಕಡೆ ಮನೆಗಳನ್ನು ಕಟ್ಟಿಕೊಳ್ಳಲು ಇಲ್ಲಿನ ಕಲ್ಲುಗಳನ್ನು ಬಳಕೆ ಮಾಡುತ್ತಿದ್ದಾರೆ.

**ಗುಡಗುಂಟಿ ಕೋಟೆ**

ಲಿಂಗಸೂಗೂರಿನಿಂದ ೧೯ ಕಿ.ಮೀ. ದೂರದಲ್ಲಿ ಕಲಬುರ್ಗಿ ದಾರಿಯಲಿರುವುದೇ ಗುಡಗುಂಟಿ. ಇಲ್ಲಿ ೧೭–೧೮ನೇಯ ಶತಮಾನದಲ್ಲಿ ಕಟ್ಟಿಸಿದ ಎರಡು ಸುತ್ತಿನ ಕೋಟೆ ಇದೆ. ಚೌಕಾಕಾರವಾಗಿದ್ದು ನೆಲಮಟ್ಟದಲ್ಲಿರುವ ಕೋಟೆ ಬೆಟ್ಟದ ಮೇಲೂ ಚಾಚಿಕೊಂಡಿದೆ. ಇಲ್ಲಿ ಗೋಸಲವಂಶದ ನಾಯಕ ಕ್ರಿ.ಶ.೧೬೭೯ ರಿಂದ ೧೯೨೮ ರವರೆಗೆ ಆಳ್ವಿಕೆ ಮಾಡಿದ್ದಾರೆ.[೪೮] ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಅನಿಯಮಿತಾಕಾರದ ಕಲ್ಲುಗಳನ್ನು ಬಳಸಿ ಕಟ್ಟಿದೆ. ಕಲ್ಲುಗಳ ಮಧ್ಯದಲ್ಲಿ ಅಗಲವಾಗಿರುವ ಸಂದಿಗಳಲ್ಲಿ ಅವಶ್ಯಕತೆಗೆ ತಕ್ಕಂತಹ ಗಾತ್ರದ ಕಲ್ಲಿನ ಚಿಕ್ಕೆಗಳನ್ನು ಇಲ್ಲಿ ಬಳಸಿರುವರು. ಕೋಟೆಯ ಕೈಪಿಡಿ ಗೋಡೆಯಲ್ಲಿ ಬಂದೂಕು ಕಿಂಡಿಗಳಿವೆ. ಬಾಗಿಲುಗಳಲ್ಲಿ ಗೋಡೆಗೆ ಗಾರಿ ಮಾಡಲಾಗಿದೆ. ಇದರ ಹೊರ ಕೋಟೆಯಲ್ಲಿ ಅನೇಕ ವೃತ್ತಾಕಾರದ ಕೊತ್ತಳಗಳನ್ನು ಕಾಣಬಹುದು. ಪೂರ್ವ ದಿಕ್ಕಿಗೆ ಪೂರ್ವಭಿಮುಖವಾಗಿರುವ ಬಾಗಿಲನ್ನು ಮೂಡಲಗಡೆ ಎನ್ನುವರು. ಇದೊಂದು ಸಂಕೀರ್ಣವಾಗಿದ್ದು ಇದರೊಳಗೆ ಮೂರು ಬಾಗಿಲುಗಳಿವೆ. ಉತ್ತರ ದಕ್ಷಿಣವಾಗಿರುವ ಕೋಟೆ ಗೋಡೆಯಲ್ಲಿರುವ ಒಳ ಬಾಗಿಲಿನ ಉತ್ತರ ಬದಿಯಿಂದ ಒಂದು ಗೋಡೆಯನ್ನು ಪೂರ್ವ ಪಶ್ಚಿಮವಾಗಿ ಕಟ್ಟಿದೆ. ಈ ಗೋಡೆಯ ಮಧ್ಯದಲ್ಲಿ ಒಂದು ಮತ್ತು ತುದಿಯಲ್ಲಿ ಮತ್ತೊಂದು ಇದೇ ರೀತಿ ಎರಡು ದೊಡ್ಡ ವೃತ್ತಾಕಾರದ ಕೊತ್ತಳಗಳನ್ನು ಕಟ್ಟಲಾಗಿದೆ. ಪೂರ್ವ ತುದಿಯಲ್ಲಿ

ಬರುವ ಕೊತ್ತಳದ ಪಕ್ಕದಲ್ಲಿ ಪ್ರವೇಶವನ್ನು ಬಿಟ್ಟು ಮತ್ತೊಂದು ವೃತ್ತಾಕಾರದ ಕೊತ್ತಳವನ್ನು ಕಟ್ಟಲಾಗಿದೆ. ಮತ್ತು ಅದರಿಂದ ದಕ್ಷಿಣ ದಿಕ್ಕಿಗೆ ಸ್ವಲ್ಪ ದೂರದವರೆಗೆ ಗೋಡೆಯನ್ನು ಕಟ್ಟದೆ, ಮದ್ಯದ ಪಕ್ಕದಲ್ಲಿ ಪುನಃ ಪ್ರವೇಶವನ್ನು ಬಿಟ್ಟು ಕಟ್ಟಲಾಗಿದೆ. ಪ್ರದೇಶದ ದಕ್ಷಿಣಕ್ಕೆ L ಆಕಾರದ ಗೋಡೆಯನ್ನು ಕಟ್ಟಿದೆ. ಈ ಗೋಡೆಯ ಮೇಲತ್ತಲು ಮೆಟ್ಟಿಲುಗಳನ್ನು ಬಳಸಲಾಗಿದೆ.

ಪೂರ್ವ ಮತ್ತು ಉತ್ತರ ದಿಕ್ಕುಗಳಿಂದ ಬರುವವರು ಮಾತ್ರ ಈ ಎರಡು ಬಾಗಿಲುಗಳ ಮೂಲಕವೇ ಪ್ರವೇಶಿಸಬೇಕು. ನಂತರ ಒಳ ಬಾಗಿಲನ್ನು ತಲುಪುವರು. ಆದರೆ ದಕ್ಷಿಣದಿಂದ ಬರುವವರು ನೇರವಾಗಿ ಒಳ ಬಾಗಿಲನ್ನು ತಲುಪಲು ಅವಕಾಶವಿದೆ. ಹೊರಬಾಗಿಲು ಎರಡು ವೃತ್ತಾಕಾರದ ಕೊತ್ತಳಗಳ ಮಧ್ಯದಲ್ಲಿರುವುದು. ಈ ಮಧ್ಯದಲ್ಲಿ ಇರುವ ಬಾಗಿಲು ಕೊತ್ತಳ ಮತ್ತು L ಆಕಾರದ ಗೋಡೆಯ ಮಧ್ಯದಲ್ಲಿರುವುದು ಕಂಡಬರುತ್ತದೆ.

ಕೋಟೆಯ ಗೋಡೆಯ ಕಲ್ಲುಗಳನ್ನು ಮುಂದೆ ಚಾಚಿ ತೋಳಗಳನ್ನು ನಿರ್ಮಿಸಿದೆ. ಮೇಲಿನ ಮೇದಿಗೆಗಳು ಸುರಳಿಯನ್ನು ಹೊಂದಿವೆ. ಉತ್ತರಂಗದ ಮೇಲೆ ಸೂರ್ಯ, ಚಂದ್ರ, ಹೂ, ಖಡ್ಗಧಾರಿ ವ್ಯಕ್ತಿಯ ಚಿತ್ರಗಳಿವೆ. ಪ್ರವೇಶದ ಪ್ರತಿಬದಿಯಲ್ಲಿ ಒಂದಂಕಣದ ಕಟ್ಟೆಯನ್ನು ಕಟ್ಟಲಾಗಿದೆ.[೪೯]

ಉತ್ತರ ದಿಕ್ಕಿನಲ್ಲಿ ಉತ್ತರಾಭಿಮುಖವಾಗಿರುವ ಕಕ್ಕೇರಿ ಅಗಸೆ ಇದೆ. ಈ ಬಾಗಿಲ ಪಕ್ಕದಲ್ಲಿ ಪಶ್ಚಿಮಕ್ಕೆ ಒಂದು ವೃತ್ತಾಕಾರದಲ್ಲಿರುವ ಕೊತ್ತಳವಿದೆ. ಈ ಗೋಡೆಯಲ್ಲಿ ಒಂದು ಉಪಬಾಗಿಲು ಹೊಂದಿದ್ದು ತುದಿಯಲ್ಲಿ ವೃತ್ತಾಕಾರದ ಒಂದು ಕೊತ್ತಳವಿದೆ. ಇಲ್ಲಿ ಕಾಣುವ ಮುಖ್ಯ ಬಾಗಿಲು ಸ್ವಲ್ಪ ಎತ್ತರವಾಗಿದೆ. ಗೋಡೆಯಲ್ಲಿರುವ ಕಲ್ಲುಗಳು ಮುಂದೆ ಚಾಚಿ ತೋಳಗಳನ್ನು ನಿರ್ಮಿಸಿದೆ. ಬೋದಿಗೆಗಳ ಮೇಲೆ ದೊಡ್ಡ ತೊಲೆಯಿದೆ. ಬಾಗಿಲ ಹೊರ ಭಾಗದಲ್ಲಿ ಪೂರ್ವಭಾಗದ ಗೋಡೆಯಲ್ಲಿ ಉಪಬಾಗಿಲಿದೆ. ಇಲ್ಲಿನ ಕಟ್ಟೆ, ಗಾರೆ ಮಾಡಿ ನಿರ್ಮಿಸಿದೆ.

ದಕ್ಷಿಣ ದಿಕ್ಕಿನಲ್ಲಿ ಬೆಟ್ಟದ ಮೇಲೆ ದಕ್ಷಿಣಾಭಿಮುಖವಾಗಿರುವ ಬಾಗಿಲನ್ನು ಸೋಮನಾಥನ ಅಗಸೆ ಎನ್ನುವರು. ಇದರ ಮೂಲ ಪೂರ್ವ ಬದಿಯಿಂದ ಒಂದು ಗೋಡೆಯನ್ನು L ಆಕಾರದಲ್ಲಿ ಕಟ್ಟಿದೆ. ಬಾಗಿಲ ಮುಂದೆ ಒಂದು ಆವರಣವನ್ನು ನಿರ್ಮಿಸಿದೆ. ಮುಂದೆ ಚಾಚಿದ ಗೋಡೆಯ ತುದಿಯಲ್ಲಿ ವೃತ್ತಾಕಾರದ ಕೊತ್ತಳವಿದೆ. ಈ ಬಾಗಿಲು ನೋಡುವುದಕ್ಕೆ ಪೂರ್ವದ ಬಾಗಿಲಿನಂತೆ ತೋರುತ್ತದೆ. ಬಾಗಿಲಿನ ಉತ್ತರಂಗದ ಮೇಲೆ ಹೂವು, ಸೂರ್ಯ, ಚಂದ್ರರ ಶಿಲ್ಪಗಳನ್ನು ಕೆತ್ತಲಾಗಿದೆ. ಕಕ್ಕೇರಿವಿ ಅಗಸೆಯನ್ನು ದಾಟಿ ಮುಂದೆ ಹೋದಾಗ, ಬಸವಣ್ಣನ ದೇವಾಲಯವಿದೆ. ದಕ್ಷಿಣಾಭಿಮುಖವಾಗಿರುವ ಈ ದೇವಾಲಯದ ಮಂಟಪದ ಮುಂಭಾಗದಲ್ಲಿ

ಮೂರು ಕಮಾನುಗಳಿವೆ. ಕೈಪಿಡಿ ಗೋಡೆಯಲ್ಲಿ ನಂದಿಗಳಿವೆ. ಮಂಟಪದ ಹಿಂದಿನ ಗೋಡೆಯಲ್ಲಿ ಗರ್ಭಗೃಹದ ಎರಡು ಬದಿಗೆ ಪ್ರದಕ್ಷಿಣೆಗೆ ಅನುಕೂಲವಾಗುವಂತೆ ಪ್ರವೇಶವಿದೆ. ಗರ್ಭಗೃಹದ ಮೇಲ್ಛಟ್ಟಡ ಮೆಟ್ಟಿಲುಗಳಾಕಾರದಲ್ಲಿದೆ. ಮೇಲೆ ಮೀನಿನಾಕಾರದಲ್ಲಿ ಕಂಡ ಮತ್ತು ಶಿಖರವನ್ನು ಹೊಂದಿದೆ.[೫೦]

ಬಸವಣ್ಣನ ದೇವಾಲಯವು ಕಲ್ಲು ಮತ್ತು ಗಾರೆಯಿಂದ ನಿರ್ಮಿತವಾಗಿದೆ. ಈ ದೇವಾಲಯದ ಹಿಂದು ಮತ್ತು ಮುಸ್ಲಿಮ್ ಶೈಲಿಯಲ್ಲಿ ಇರುವುದು ಕಂಡುಬರುತ್ತದೆ. ಇದರ ಸಮೀಪದಲ್ಲಿ ಪೂರ್ವಭಿಮುಖವಾಗಿ ದುರ್ಗಾ ದೇವಾಲಯವಿದೆ. ಇಲ್ಲಿಂದ ಮುಂದೆ ದಕ್ಷಿಣಕ್ಕೆ ಜಾಮೀ ಮಸೀದಿಯಿದೆ. ಇದರ ಪಕ್ಕದಲ್ಲಿ ಅಶೋರ್‌ಬಾವಿದೆ. ಇದೊಂದು ಪ್ರಾರ್ಥನಾ ಮಂದಿರವಾಗಿದೆ. ಕೋಟೆಯ ಮಧ್ಯಭಾಗದಲ್ಲಿ ಸಂಸ್ಥಾನಿಕರ ಅರಮನೆಯನ್ನು ಕಾಣಬಹುದು. ಇದನ್ನು ದರ್ಬಾರ್ ಎಂದು ಕರೆಯುವರು. ಈ ಕಟ್ಟಡದಲ್ಲಿ ನಾಯಕ ವಂಶಸ್ಥರು ಇದ್ದಾರೆ.[೫೧] ಈ ಕೋಟೆಯ ಪಶ್ಚಿಮಭಾಗ ಬೀಳುತ್ತಿದ್ದು ಅಲ್ಲಿನ ಜನ ಕಲ್ಲುಗಳನ್ನು ಮನೆಕಟ್ಟಲು ಸಾಗಿಸುತ್ತಿದ್ದಾರೆ.

**ಹಾಲಬಾವಿ ಕೋಟೆ**

ಹಾಲಬಾವಿ ಲಿಂಗಸೂಗೂರು ತಾಲೂಕಿನಲ್ಲಿದೆ. ಇದು ಲಿಂಗಸೂಗೂರಿನಿಂದ ವಾಯುವ್ಯಕ್ಕೆ ೧೫ ಕಿ.ಮೀ. ದೂರದಲ್ಲಿದೆ. ಈ ಸಣ್ಣ ಊರಿನಲ್ಲಿ ಕೋಟೆ ಮತ್ತು ದೇವಾಲಯಗಳು ಇವೆ. ಈ ಕೋಟೆಯು ಚಿಕ್ಕದಾಗಿದ್ದು ಆಯತಾಕಾರದಲ್ಲಿದೆ. ಪೂರ್ವ ಗೋಡೆಯ ಮಧ್ಯದಲ್ಲಿ ಬಾಗಿಲು ಇದೆ. ಇದು ೭ ಕೊತ್ತಳಗಳನ್ನು ಹೊಂದಿವೆ. ಅವುಗಳೆಂದರೆ ನಾಲ್ಕು ಮೂಲೆಗಳಲ್ಲಿ ಮತ್ತು ಉತ್ತರ, ದಕ್ಷಿಣ, ಪಶ್ಚಿಮ ಗೋಡೆಗಳ ಮಧ್ಯದಲ್ಲಿ ಕಂಡುಬರುತ್ತವೆ.

ಇಲ್ಲಿನ ಕೊತ್ತಳಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದಿದ್ದು, ಇಲ್ಲಿ ಬಿಳಿ ಬೆಣಚು ಕಲ್ಲಿನಿಂದ ಕೆಲವು ಕೊತ್ತಳಗಳನ್ನು ನಿರ್ಮಿಸಿದ್ದು, ಅದರ ಮೇಲ್ಭಾಗದಲ್ಲಿ ಐದು ಸಾಲು ಕಪ್ಪು ಕಲ್ಲುಗಳನ್ನು ಬಳಸಿ ಕಟ್ಟಿದ್ದಾರೆ. ದೂರದಿಂದ ನೋಡಿದರೆ ಕಪ್ಪು ಬಣ್ಣದ ಪಟ್ಟಿ ಬಳಿದಂತೆ ಕಾಣುತ್ತದೆ.

ಪೂರ್ವದಲ್ಲಿರುವ ಬಾಗಿಲನ್ನು ಇತ್ತೀಚೆಗೆ ದುರಸ್ತಿ ಮಾಡಿದ್ದಾರೆ. ಇದರ ಗೋಡೆಯ ಮೇಲ್ಭಾಗದಲ್ಲಿ ಬಂದೂಕು ಕಿಂಡಿಗಳು ಕಾಣಿಸುತ್ತವೆ. ಇಲ್ಲಿನ ಬಾಗಿಲು ಸುಸ್ಥಿತಿಯಲ್ಲಿದೆ. ಸರಳವಾದ ಚೌಕಟ್ಟು ಹೊಂದಿದ್ದು ಅದರ ಉತ್ತರಂಗದ ಮೇಲೆ ಹೂ, ಸೂರ್ಯ, ಚಂದ್ರರ ಚಿತ್ರಗಳು ಕಂಡುಬರುತ್ತವೆ. ಚೌಕಟ್ಟಿನ ಮೇಲೆ ಕುರುಡು ಕಮಾನಿದೆ. ಪ್ರವೇಶದ ಪಾರ್ಶ್ವಗಳಲ್ಲಿ

ಕಟ್ಟೆಗಳಿವೆ. ಪ್ರತಿ ಕಟ್ಟೆಯ ಮೇಲೆ ಒಂದು ಮರದ ಕಂಬದ ಅಂಕಣಗಳು ಕಂಡುಬರುತ್ತವೆ. ಕಟ್ಟೆಗಳನ್ನು ಹೆತ್ತಲು ಪ್ರವೇಶದಿಂದ ಮೆಟ್ಟಲುಗಳಿವೆ.

ಕೋಟೆಯೊಳಗೆ ಕಾವಲು ಗೋಪುರವು ಮಧ್ಯಭಾಗದಲ್ಲಿದೆ. ಇದರ ಎತ್ತರ ಸುಮಾರು ೧೫ ಅಡಿ ಇದೆ. ಕಾವಲು ಗೋಪುರದ ಆಗ್ನೇಯ ದಿಕ್ಕಿಗೆ ಒಂದು ಸೇದುವ ಬಾವಿ ಇದೆ. ಕಾವಲು ಗೋಪುರದ ವಾಯುವ್ಯಕ್ಕೆ ದ್ಯಾಮವ್ವನ ದೇವಾಲಯ ಇದೆ. ಇದು ೧೭-೧೮ನೇ ಶತಮಾನದಾಗಿದೆ.[೫೨]

**ಕೋಠಾ ಕೋಟೆ**

ಕೋಠಾ ಲಿಂಗಸೂಗೂರು ತಾಲ್ಲೂಕಿನಿಂದ ಈಶಾನ್ಯಕ್ಕೆ ೨೭ ಕಿ.ಮೀ. ದೂರದಲ್ಲಿದೆ. ಇಲ್ಲಿನ ಗ್ರಾಮದಲ್ಲಿ ಕೋಟೆ, ದೇವಾಲಯ, ಶಿಲ್ಪ, ಬಾವಿ, ಶಾಸನ ಮೊದಲಾದವುಗಳಿವೆ. ಇಲ್ಲಿನ ಕೋಟೆ ಆಯತಾಕಾರದಲ್ಲಿದೆ. ಆದರೆ ಉತ್ತರ ಮತ್ತು ಪೂರ್ವ ಗೋಡೆಗಳು ಈಶಾನ್ಯ ದಿಕ್ಕಿನಲ್ಲಿವೆ. ಇಲ್ಲಿರುವ ಕೋಟೆ ಗೋಡೆಯನ್ನು ದಪ್ಪ ಚೌಕಾಕಾರದ ಕಲ್ಲುಗಳಿಂದ ಕಟ್ಟಲಾಗಿದೆ. ಮೊದಲು ಕಟ್ಟಿದ ಭಾಗದಲ್ಲಿ ಚೌಕಾಕಾರದ ಕೊತ್ತಳಗಳು ಮತ್ತು ದುರಸ್ಥಿಯನ್ನು ಹೊಂದಿದ ಭಾಗದಲ್ಲಿ ವೃತ್ತಾಕಾರದ ಕೊತ್ತಳಗಳಿವೆ. ಊರಿನ ಕೆಲ ಭಾಗದಲ್ಲಿ ಕೋಟೆ ಗೋಡೆ ಬಿದ್ದು ಹೋಗಿದ್ದು, ಮಣ್ಣಿನ ದಿಬ್ಬ ಮಾತ್ರ ಉಳಿದಿದೆ.

ಕೋಟೆಯ ಈಶಾನ್ಯ ಮೂಲೆಯಲ್ಲಿ, ಹಿಂದೆ ಸರಿದ ಭಾಗದಲ್ಲಿ ಉತ್ತರಾಭಿಮುಖವಾದ ಬಾಗಿಲಿದೆ. ಬಾಗಿಲ ಪೂರ್ವಕ್ಕೆ ಆಯತಾಕಾರದ ದೊಡ್ಡ ಕೊತ್ತಳವಿದೆ. ಇದರ ಬಾಗಿಲಿಗೆ ಚೌಕಟ್ಟು ಮತ್ತು ಛಾವಣಿಯಿಲ್ಲ. ಪ್ರವೇಶದ ಪಕ್ಕದಲ್ಲಿ ಕಟ್ಟೆಗಳಿವೆ.

ಇಲ್ಲಿನ ಕಟ್ಟೆಯ ಅಧಿಷ್ಠಾನದ ಮೇಲೆ ಒಂದು ಗಜಲಕ್ಷ್ಮಿಯ ಶಿಲ್ಪವಿದೆ. ಬಾಗಿಲ ಒಳಗಡೆ ಹೋದಾಗ ಪ್ರವೇಶದ ಪಕ್ಕದ ಪೂರ್ವಗೋಡೆಯಲ್ಲಿ ಇನ್ನೊಂದು ಗಜಲಕ್ಷ್ಮಿ ಶಿಲ್ಪವನ್ನು ಕಾಣಬಹುದು.

ಕೋಟೆಯ ಒಳಗೆ ಈಶಾನ್ಯ ದಿಕ್ಕಿನ ಒಂದು ಮೂಲೆಯ ಹತ್ತಿರ ಚೌಕಾಕಾರದ ಕೊತ್ತಳಕ್ಕೆ ಹೊಂದಿಕೊಂಡಂತೆ ಈರಣ್ಣನ ಗುಡಿಯನ್ನು ಕಟ್ಟಲಾಗಿದೆ. ಈಶಾನ್ಯ ದಿಕ್ಕಿನ ಕಡೆಗೆ ಮತ್ತೊಂದು ಮೂಲೆಯಲ್ಲಿ ಮಸೀದಿ ಇದೆ. ಇಲ್ಲಿನ ಕೋಟೆಯ ಮಧ್ಯದಲ್ಲಿ ಬಾವಿ, ನಂದಿಕೇಶ್ವರ, ಬಸವೇಶ್ವರ, ಗುಡಿಗಳೀವೆ. ಇಲ್ಲಿನ ಚೌಕಕಾರದ ಬಾವಿಯ ಉತ್ತರ ಭಾಗ ತುಂಬಾ ಶಿಥಿಲವಾಗಿ ಕಾಣುತ್ತದೆ.

ಕೋಟೆಯ ಹೊರಗೆ ಬಾಗಿಲಿನ ಹತ್ತಿರದ ರಸ್ತೆಯ ಬದಿಗಳಲ್ಲಿ ಒಂದು ದೊಡ್ಡ ಬಾಗಿಲು ಮತ್ತು ಬಸವಣ್ಣನ ದೇವಾಲಯ ಎದುರುಬದುರಾಗಿವೆ. ರಸ್ತೆಯ ಉತ್ತರ ದಿಕ್ಕಿಗೆ ದಕ್ಷಿಣಾಭಿಮುಖವಾಗಿರುವ ದೊಡ್ಡ ಬಾಗಿಲು ಕೋಟೆಯ ಬಾಗಿಲಿನಂತೆ ದೊಡ್ಡದಾಗಿದೆ. ಚಿಕ್ಕ ಕಲ್ಲುಗಳು ಮತ್ತು ಗಾರೆಯಿಂದ ಕಟ್ಟಿ, ಗಾರೆ ಮಾಡಲಾದ ಬಾಗಿಲು ಕಮಾನಿನಾಕಾರದಲ್ಲಿದೆ. ಕಮಾನಿನ ಪ್ರತಿ ಬದಿಯಲ್ಲಿನ ಕೆಳಭಾಗದಲ್ಲಿ ಕಮಾನಿನಾಕಾರದ ದೊಡ್ಡ ಗೂಡು ಇದೆ. ಇದರ ಮೇಲ್ಭಾಗದಲ್ಲಿ ಚೌಕಾಕಾರದ ಗೂಡು ಇದೆ. ಇಲ್ಲಿರುವ ರಸ್ತೆಯ ದಕ್ಷಿಣ ಬದಿಯಲ್ಲಿರುವ ಬಸವಣ್ಣ ದೇವಾಲಯವನ್ನು ಸಣ್ಣಕಲ್ಲುಗಳಿಂದ ಕಟ್ಟಲಾಗಿದೆ ಮತ್ತು ಗಾರೆಯಿಂದ ಕಟ್ಟಲಾಗಿದೆ. ಈ ದೇವಾಲಯದ ಮುಂಭಾಗದಲ್ಲಿ ಮೂರು ಕಮಾನುಗಳಿವೆ. ಇಲ್ಲಿನ ಕೈಪಿಡಿ ಗೋಡೆಯಲ್ಲಿ ಮೂಲೆಗಳಲ್ಲಿ ನಂದಿಗಳಿವೆ, ಇದರ ಗರ್ಭಗೃಹದ ಮೇಲ್ಕಟ್ಟಡ ಗುಮ್ಮಟಾಕಾರದಲ್ಲಿದೆ. ಇಲ್ಲಿರುವ ಎರಡು ಕಟ್ಟಡಗಳ ಕಾಲ ೧೭-೧೮ನೇ ಶತಮಾನಕ್ಕೆ ಸೇರುತ್ತದೆ.

**ಗೋಲಪಲ್ಲಿ ಕೋಟೆ**

ಗೋಲಪಲ್ಲಿ ಲಿಂಗಸೂಗೂರು ತಾಲ್ಲೂಕಿನಲ್ಲಿ ಲಿಂಗಸೂಗೂರಿನಿಂದ ಈಶಾನ್ಯಕ್ಕೆ ೨೩ ಕಿ.ಮೀ. ದೂರದಲ್ಲಿದೆ. ಅಕ್ಷಾಂಶ ೧೬° ೨೧° ಉತ್ತರ ಮತ್ತು ರೇಖಾಂಶ ೭೬° ೯೦° ಪೂರ್ವದಲ್ಲಿರುವ ಚಿಕ್ಕ ಗ್ರಾಮ. ಇದರ ಹತ್ತಿರ ಶಿಥಿಲಾವಸ್ಥೆಯಲ್ಲಿರುವ ಕೋಟೆಯಿದೆ.

ಕೋಟೆಯ ಅರ್ಧಭಾಗ ನೆಲಮಟ್ಟದಲ್ಲಿದ್ದು, ಅರ್ಧಭಾಗ ಬೆಟ್ಟದ ಮೇಲೆ ಇದೆ. ಕೋಟೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಿದೆ. ಕಲ್ಲುಗಳ ಮಧ್ಯದಲ್ಲಿ ಉಂಟಾದ ದೊಡ್ಡ ಸಂಧಿಗಳಲ್ಲಿ ಕಲ್ಲಿನ ಚಕ್ಕೆಗಳಿವೆ. ಕೋಟೆ ಗೋಡೆಯಲ್ಲಿ ಪೂರ್ವದಿಕ್ಕಿಗೆ ಸುಸ್ಥಿತಿಯಲ್ಲಿರುವ ಗೋಡೆಯ ಕಲ್ಲುಗಳನ್ನು ಮುಂದೆ ಚಾಚಿ ಬಾಗಿಲ ಚೌಕಟ್ಟಿನ ತೋಳುಗಳನ್ನು ಮಾಡಿದೆ. ಮೇಲೆ ಅದೇ ರೀತಿ ಮುಂದೆ ಚಾಚಿದ ಬೋದಿಗೆಗಳು, ಅವುಗಳ ಮೇಲೆ ಉತ್ತರಂಗ ಇವೆ. ಚೌಕಟ್ಟಿನ ಮೇಲೆ ಕುರುಡು ಕಮಾನು ಇದೆ. ಕೈಪಿಡಿ ಗೋಡೆಯಲ್ಲಿ ತೆನೆಗಳು ಮತ್ತು ಬಂದೂಕು ಕಿಂಡಿಗಳಿವೆ. ಮೂಲೆಯಲ್ಲಿರುವ ಎರಡು ತೆನೆಗಳು ಮಾತ್ರ ಉಳಿದಿವೆ. ಬಾಗಿಲ ಗೋಡೆಯ ಸಂದಿಗಳಿಗೆ ಗಾರೆ ಮಾಡಿದೆ. ಬಾಗಿಲ ಪ್ರವೇಶದ ಪಕ್ಕಗಳಲ್ಲಿ ಕಟ್ಟೆಗಳಿವೆ. ಕಟ್ಟೆಗಳನ್ನು ಹತ್ತಲು ಪ್ರವೇಶದಿಂದ ಮೆಟ್ಟಿಲುಗಳಿವೆ. ಪ್ರತಿ ಕಟ್ಟೆಯ ಹಿಂಬಲಿಯ ಗೋಡೆಯಲ್ಲಿ ಮೂಗು ಗೂಡುಗಳಿವೆ. ಪ್ರವೇಶದಸ ಮುಂಭಾಗದಲ್ಲಿ ಚೌಕಟ್ಟಿದ್ದರೆ ಹಿಂಭಾಗದಲ್ಲಿ ಕಮಾನಿದೆ. ಕೋಟೆಯ ಗೋಡೆಯಲ್ಲಿ ಕೊತ್ತಳಗಳಲ್ಲಿ ಕೋಟೆಯ ಒಳ ಭಾಗದಲ್ಲಿ ಗೋಡೆಯ ಪಕ್ಕದಲ್ಲಿ ಮೂರುಮತ್ತು ಗೋಡೆಯಿಂದ ದೂರದಲ್ಲಿ ಮೂರು ಒಟ್ಟು

ಆರು ವೃತ್ತಾಕಾರದ ಒಂಟಿ ಕೊತ್ತಳಗಳಿವೆ. ಕೋಟೆಯ ಒಳಭಾಗದಲ್ಲಿ ಮೂರು ದೊಡ್ಡ ಕಟ್ಟಡಗಳು ಮತ್ತು ಕೆಲವು ಚಿಕ್ಕ ಕಟ್ಟಡಗಳ ಅವಶೇಷಗಳಿವೆ. ಕಟ್ಟಡಗಳು ಬಹಳಷ್ಟು ಹಾಳಾಗಿರುವುದರಿಂದ ಅವುಗಳ ವಿವರಗಳು ತಿಳಿಯುವುದಿಲ್ಲ. ಮಧ್ಯಮ ಮತ್ತು ಚಿಕ್ಕ ಗಾತ್ರದ ಕಲ್ಲುಗಳಿಂದ ಕಟ್ಟಡ ಈ ಕೋಟೆ ೧೭-೧೮ನೇ ಶತಮಾನಕ್ಕೆ ಸೇರಿದ್ದಾಗಿದೆ.

**ಆನೆಹೊಸೂರು ಕೋಟೆ**

ಈ ಕೋಟೆಯು ಲಿಂಗಸೂಗೂರು ತಾಲ್ಲೂಕಿನಿಂದ ೧೩ ಕಿ.ಮೀ.ಅಂತರದಲ್ಲಿರುವ ಆನೆಹೂಸೂರು ಗ್ರಾಮದಲ್ಲಿದೆ. ಈ ಕೋಟೆ ಗ್ರಾಮದ ಪೂರ್ವದಿಕ್ಕಿನಲ್ಲಿ ಬರುತ್ತದೆ. ಇಲ್ಲಿರುವ ಕೋಟೆ ಯಾವಾಗ, ಯಾರು ನಿರ್ಮಿಸಿದ್ದಾರೆ ಎನ್ನುವುದಕ್ಕೆ ಯಾವುದೇ ಅಧಿಕೃತ ಮಾಹಿತಿ ದೊರೆತಿಲ್ಲ. ಕೆಲವರು ಹೈದ್ರಾಬಾದ್ ನಿಜಾಮರ ಆಡಳಿತಕ್ಕೆ ಈ ಪ್ರದೇಶವು ಒಳಪಟ್ಟಾಗ ಕೋಟೆ ನಿರ್ಮಿಸಿರಬಹುದು ಎನ್ನುತ್ತಾರೆ. ಆದರೆ ಇವೆಲ್ಲಕ್ಕಿಂತ ಪೂರ್ವದಲ್ಲಿಯೇ ನಿರ್ಮಿಸಿರ ಬಹುದು ಎನ್ನುವ ಸಂದೇಹ ಇಂದಿಗೂ ಕಾಣುತ್ತದೆ. ಇಲ್ಲಿರುವ ಕೋಟೆ ೫೫ ರಿಂದ ೬೦ ಅಡಿ ಎತ್ತರವಿದೆ. ಗುಂಡುಕಲ್ಲು ಹಾಗೂ ಚೌಕಾಕಾರದ ಕಲ್ಲುಗಳನ್ನು ಬಳಸಿ ಈ ಕೋಟೆಯನ್ನು ನಿರ್ಮಿಸಿದ್ದಾರೆ. ಕೋಟೆ ನಾಲ್ಕು ದಿಕ್ಕಿಗೂ ನಾಲ್ಕು ಕಾವಲು ಗೋಪುರಗಳು ಇವೆ. ಇವುಗಳ ಆಧಾರದ ಮೇಲೆ ವೈರಿಗಳು ಬರುವುದನ್ನು ನೋಡುತ್ತಿದ್ದರು. ಆವತ್ತಿನ ಕಾಲದಲ್ಲಿ ಕೋಟೆ ಬಾಗಿಲು ರಾತ್ರಿ ಏಳು ಗಂಟೆಗೆ ಮುಚ್ಚಿ, ಬೆಳಗ್ಗೆಯೇ ತೆಗೆಯುತ್ತಿದ್ದರು ಎನ್ನಲಾಗಿದೆ.[೫೩] ಇಲ್ಲಿಯ ಕೋಟೆ ಸ್ಥಳವನ್ನು ಅಲ್ಲಿರುವ ಜನ ಆಕ್ರಮಿಸಿದ್ದಾರೆ. ಕೆಲವು ಕಡೆ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ.

**ಹುನಕುಂಟಿ ಕೋಟೆ**

ಈ ಕೋಟೆಯು ಲಿಂಗಸೂಗೂರು ತಾಲ್ಲೂಕಿನಿಂದ ೭ ಕಿ.ಮೀ.ಅಂತರದಲ್ಲಿರುವ ಹುನಕುಂಟಿ ಗ್ರಾಮದಲ್ಲಿದೆ. ಈ ಗ್ರಾಮಕ್ಕೆ ಪೂರ್ವದಲ್ಲಿ ಹೂನ್ನಕುಂಟಿ ಎಂದು ಕರೆಯಲಾಗು ತ್ತಿತ್ತು ಎನ್ನಲಾಗಿದೆ. ಈ ಕೋಟೆಯು ಪೂರ್ವಾಭಿಮುಖವಾಗಿದೆ. ಕೋಟೆಯ ಗೋಡೆಯನ್ನು ಮಧ್ಯಮ ಮತ್ತು ಚಿಕ್ಕ ಗಾತ್ರದ ಅನಿಯಮಿತಕಾರದ ಕಲ್ಲುಗಳಿಂದ ಕಟ್ಟಲ್ಪಟ್ಟಿದೆ. ಕಲ್ಲುಗಳ ಮಧ್ಯದ ಅಗಲವಾದ ಸಂಧಿಗಳಲ್ಲಿ ಅವಶ್ಯಕತೆಗೆ ಅನುಗುಣವಾದ ಗಾತ್ರದ ಕಲ್ಲಿನ ಚೆಕ್ಕೆಗಳನ್ನು ಬಳಸಿದೆ. ಇಲ್ಲಿರುವ ಕೋಟೆ ೫೦ ರಿಂದ ೫೫ ಅಡಿ ಎತ್ತರವಿದೆ. ಕೋಟೆಯ ನಾಲ್ಕು ದಿಕ್ಕಿಗೂ ನಾಲ್ಕು ಕಾವಲು ಗೋಪುರಗಳಿವೆ. ಗೋಡೆಯ ಕಲ್ಲುಗಳನ್ನು ಮುಂದೆ ಚಾಚುವಂತೆ ಮಾಡಿ ತೋಳುಗಳನ್ನು ನಿರ್ಮಿಸಿದೆ. ಬೋದಿಗೆಗಳು ಸುರುಳಿಯಾಕಾರವಾಗಿವೆ. ಕೆಳಗಿನ ಉತ್ತರಂಗದ ಮೇಲೆ ಹೂ, ಸೂರ್ಯ, ಚಂದ್ರರ ಶಿಲ್ಪಗಳಿವೆ. ಮರದ ಕದಗಳು ಕಾಣುವುದಿಲ್ಲ.

ಬಹಳ ವರ್ಷಗಳ ಹಿಂದೆ ಅವು ಹಾಳಾದವು ಎನ್ನುತ್ತಾರೆ ಅಲ್ಲಿನ ಊರಿನ ಗ್ರಾಮಸ್ಥರು.[೫೪] ಪ್ರವೇಶದ ಪಕ್ಕದಲ್ಲಿ ಎತ್ತರವಾದ ಕಟ್ಟೆಗಳಿವೆ. ಕೋಟೆಯ ಒಳಗೆ ಬಾಗಿಲಿನ ಉತ್ತರಕ್ಕೆ ಜೋಡು ಆಂಜನೇಯ ದೇವಾಲಯವಿದೆ. ಅದರ ಪಕ್ಕದಲ್ಲಿ ಪೂರ್ವದಿಕ್ಕಿಗೆ ದ್ಯಾಮಮ್ಮ ದೇವಸ್ಥಾನವಿದೆ. ಈ ಕೋಟೆಯ ಪಶ್ಚಿಮ ಭಾಗ ಸಂಪೂರ್ಣವಾಗಿ ಬಿದ್ದುದು ಕಲ್ಲುಗಳನ್ನು ಜನಮನೆ ಕಟ್ಟಲು ಬಳಕೆ ಮಾಡಿಕೊಂಡಿದ್ದಾರೆ.

### ೫.೫. ಸಮಾಧಿಗಳು

ಸುತ್ತಲಿದ್ದುದನ್ನು ತೆರೆದ ಕಣ್ಣಿನಿಂದ ನೋಡಬೇಕು[೫೫] ಎನ್ನುವಂತೆ ಲಿಂಗಸೂಗೂರು ತಾಲೂಕಿನ ಇತಿಹಾಸವು ನಮ್ಮ ಕಣ್ಣಮುಂದೆ ಕಾಣಿಸುತ್ತದೆ. ಈ ತಾಲೂಕಿನಲ್ಲಿ ಕ್ರಿ.ಶ.೧೭೨೪ ರಿಂದ ೧೯೪೮ ರವರೆಗೆ ಹೈದರಾಬಾದ್ ನಿಜಾಮರ ಆಳ್ವಿಕೆಗೆ ಒಳಪಟ್ಟಿತ್ತು. ಅದಕ್ಕೆ ಸಾಕ್ಷಿ ಎಂಬುವಂತೆ ಅನೇಕ ಕುರುಹುಗಳು ಅಥವಾ ಆಧಾರಗಳು ನಮಗೆ ಸಿಗುತ್ತವೆ. ವಿವಿಧ ಹುದ್ದೆಗಳಲ್ಲಿ ಸೇವೆಸಲ್ಲಿಸಿದ ಬ್ರಿಟಿಷ್ ಅಧಿಕಾರಿಗಳು ತಮ್ಮ ಅಧಿಕಾರಾವಧಿ ಮುಗಿದ ಬಳಿಕ ತಾಯ್ನಡಿಗೆ ಹಿಂದುರುಗದೆ ಇಲ್ಲಿಯೇ ಇದ್ದು ಕೊನೆಗೆ ಸಾವನ್ನಪ್ಪಿದ ಅಧಿಕಾರಿಗಳ ಸಮಾಧಿಗಳು ಲಿಂಗಸೂಗೂರು ತಾಲ್ಲೂಕಿನ ಮಸ್ಕಿ ಬೈಪಾಸ್ ರಸ್ತೆಯ ಪಕ್ಕದಲ್ಲಿ ಸಿಗುತ್ತವೆ. ಅಲ್ಲದೆ ಸೈನಿಕರುಗಳ, ಅವರ ಸಂಬಂಧಿಗಳ ಸುಮಾರು ೩೫ಕ್ಕೂ ಹೆಚ್ಚು ಸಮಾಧಿಗಳು ಈ ಪ್ರದೇಶದಲ್ಲಿ ನೋಡಬಹುದಾಗಿದೆ. ಅದೇ ರೀತಿಯೇ ವಿವಿಧ ರಾಜರುಗಳ ಸಮಾಧಿಗಳು ಈ ತಾಲ್ಲೂಕು ಪ್ರದೇಶದಲ್ಲಿ ಕಾಣಿಸುತ್ತವೆ.

#### ೧. ಲಿಯೋನಾರ್ಡ್ ಮನ್ನನ ಸಮಾಧಿ

ಇತನ ಸಮಾಧಿಯು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಕೇಂದ್ರ ಭಾಗದ ಮಸ್ಕಿ ಬೈಪಾಸ್ ರಸ್ತೆಯ ಪಕ್ಕದಲ್ಲಿದೆ. ಇತನು ಕ್ರಿ.ಶ.೧೮೭೮ರ ಮೇಲೆ ೩೧ ರಂದು ಆಸ್ಟ್ರೇಲಿಯಾದ ಬೆಲ್ಜಿಯಂನಲ್ಲಿ ಜನಿಸಿದನು. ಇತನ ತಂದೆ ರೆವೆರಂಡ್ ಜಾರ್ಜಮನ್ಸ್ ಇತನ ತಂದೆಗೆ ಅಚ್ಚುಮೆಚ್ಚಿನ ಕೊನೆಯ ಮಗನಾಗಿದ್ದ. ಅಲ್ಲದೇ ಭೂಗರ್ಭಶಾಸ್ತ್ರದ ಬಗ್ಗೆ ಬಹಳಷ್ಟು ಪಾಂಡಿತ್ಯವನ್ನು ಪಡೆದುಕೊಂಡಿದ್ದ. ಇತನು ೧೯೦೫ ರಿಂದ ೧೯೧೯ರವರೆಗೆ ಹೈದ್ರಾಬಾದ್ ನಿಜಾಮನ ಸರಕಾರದಲ್ಲಿ ಗಣಿ ಇಂಜಿನೀಯರನಾಗಿದ್ದನು. ಲಿಂಗಸೂಗೂರಿನಲ್ಲಿ ಸುಮಾರು ಏಳು ವರ್ಷಗಳ ಕಾಲ ಕಳೆದು ೨೧ನೇ ಅಕ್ಟೋಬರ್ ೧೯೩೫ರಲ್ಲಿ ಮರಣ ಹೊಂದಿದನು. ಈತನ ಸಮಾಧಿಯು ೬.೬ ಅಡಿ ಉದ್ದವಿದ್ದು, ೩.೬ ಅಡಿ ಅಗಲ ವಿಸ್ತೀರ್ಣವನ್ನು ಹೊಂದಿದ್ದು ಪೂರ್ವ ಪಶ್ಚಿಮಾಭಿಮುಖವಾಗಿದೆ.[೫೬] ಹೊಳಪು ಬೆಣಚು ಕಲ್ಲಿನಿಂದ ನಿರ್ಮಿಸಲಾಗಿದೆ. ಇದು ನೆಲಕ್ಕೆ ಹಾಸಿದಂತೆ ತೋರುತ್ತದೆ.

೨. ಕ್ಯಾಪ್ಟನ್ ಮೇಡೋಸ್ ಟೇಲರ್

ಕ್ರಿ.ಶ.೧೬೫೬ ರಿಂದ ೧೯೪೮೮ರಲ್ಲಿ ಸುರಪುರ ಸಂಸ್ಥಾನದಲ್ಲಿ ಬ್ರಿಟಿಷ್ ಪ್ರತಿನಿಧಿಯಾಗಿದ್ದ ಕ್ಯಾಪ್ಟನ್ ಮೇಡೋಸ್ ಟೈಲರ್‌ನ ಪತ್ನಿಯಾದ ಮೇರಿಯಾಳ ಸಮಾಧಿಯು ಲಿಂಗಸೂಗೂರಿನಲ್ಲಿದೆ. ಜೊತೆಗೆ ಟೇಲರನ ಮಗು ಅನಾರೋಗ್ಯದಿಂದ ಮರಣ ಹೊಂದಿದಾಗ ಮಗುವನ್ನು ಸಹ ಇಲ್ಲಿಯೇ ಸಮಾಧಿ ಮಾಡಲಾಗಿದೆ. ಸುರಪುರ ಮತ್ತು ಲಿಂಗಸೂಗೂರು ವ್ಯಾಪ್ತಿಯಲ್ಲಿ ಬರುವ ಗುಡಗುಂಟಿ ಸಂಸ್ಥಾನ ಮತ್ತು ಗುಂತಗೋಳ ಸಂಸ್ಥಾನದ ಮೇಲೆ ಅಧಿಕಾರ ಹೊಂದಿದ್ದವನಾಗಿದ್ದನು.[೫೭]

೩. ಕ್ಯಾಪ್ಟನ್ ಅಪೋದಿಯ

ಶಿಕಂದ್ರಾಬಾದ್‌ನಲ್ಲಿ ಕ್ಯಾಪ್ಟನ್‌ನಾಗಿದ್ದ ಅಪೋದಿಯ ಅಧಿಕಾರಿಯ ಪತ್ನಿ ಜನ್ನಿ ಸಮಾಧಿಯೂ ಲಿಂಗಸೂಗೂರು ತಾಲೂಕಿನ ಮಸ್ಕಿ ಬೈಪಾಸ್ ರಸ್ತೆಯ ಪಕ್ಕದಲ್ಲಿದೆ. ಈಕೆಯ ಸಮಾಧಿಯ ಮೇಲೆ ಜೂನ್ ೨೮, ೧೮೮೧ರಲ್ಲಿ ಮರಣ ಹೊಂದಿದಳು ಎಂಬ ಮಾಹಿತಿಯನ್ನು ಆ ಸಮಾಧಿಯ ಮೇಲೆ ಬರೆಯಲಾಗಿದೆ. ಒಟ್ಟಾರೆಯಾಗಿ ಇಲ್ಲಿರುವ ಬಹುತೇಕ ಸಮಾಧಿಗಳ ಮೇಲೆ ಮೃತರ ಹೆಸರು, ವಯಸ್ಸು, ಜನ್ಮ ದಿನಾಂಕ, ಸಾವಿಗೆ ಕಾರಣ, ಅವರ ಕೆಲಸಕಾರ್ಯಗಳ ಕುರಿತಾದ ವಿವರಗಳನ್ನು ನೋಡಬಹುದಾಗಿದೆ.[೫೮]

೪. ಅಮರೇಶ್ವರ ಸಮಾಧಿ

ಅಮರೇಶ್ವರರ ಸಮಾಧಿಯು ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಅಮರೇಶ್ವರ ಗ್ರಾಮದಲ್ಲಿದೆ. ಸುಂದರವಾದ ಅಡವಿಯ ಮಧ್ಯದಲ್ಲಿ ಪ್ರಶಾಂತವಾದ ಪ್ರದೇಶದಲ್ಲಿ ಈ ಕ್ಷೇತ್ರವಿದೆ. ಇಲ್ಲಿ ಸಮಾಧಿಯಾಗಿರುವ ಅಮರೇಶ್ವರ ೧೭ನೆಯ ಶತಮಾನದವರು. ಪವಾಡ ಪುರುಷ. ಈತನ ಬಗ್ಗೆ ಅಮರೇಶ್ವರ ಪುರಾಣ ವಿವರವನ್ನು ತಿಳಿಸುವ ಕೃತಿಯಾಗಿದೆ. ಈಗಾಗಿ ಅವರ ಹೆಸರು 'ಅಮರೇಶ್ವರ' ಎಂಬ ಹೆಸರಿನಿಂದಲೇ ಈ ಕ್ಷೇತ್ರವು ಗಣ್ಯವಾಗಿದೆ. ವರ್ಷಕ್ಕೊಮ್ಮೆ ಫಾಲ್ಗುಣಮಾಸದಲ್ಲಿ ಹುಣ್ಣಿಮೆ ದಿನ ಇಲ್ಲಿ ರಥೋತ್ಸವವಾಗುತ್ತದೆ. ಅಮರೇಶ್ವರರು ಮಹಿಮಾಶಾಲಿಗಳೆಂದು ಪವಾಡ ಪುರುಷರೆಂದು ಅಮರೇಶ್ವರ ಪುರಾಣ, ಅಮರೇಶ್ವರ ಶತಕ ಹಾಗೂ ಅಮರೇಶ್ವರ ಚರಿತ್ರೆಗಳಲ್ಲಿ ಹೇಳಿದೆ. ಕಲ್ಬುರಿಗೆ ಶರಣಬಸವೇಶ್ವರ, ಮಲೆಯ ಮಹದೇಶ್ವರ ಕ್ಷೇತ್ರಗಳಂತೆ ಇದು ಶಿವಯೋಗ ಸಮಾಧಿ ಕ್ಷೇತ್ರವೆನಿಸಿದೆ.

೪. ರಾಣಿ ಈಶ್ವರಮ್ಮನ ಸಮಾಧಿ

ಈ ನಾಡಿನ ಇತಿಹಾಸದ ಮಿನುಗುತಾರೆ ಸುರಪುರದ ರಾಣಿ ಈಶ್ವರಮ್ಮಳ ಸಮಾಧಿಯು ಲಿಂಗಸೂಗೂರು ತಾಲ್ಲೂಕಿನ ಸರಕಾರಿ ತೋಟದಲ್ಲಿದೆ. ಸುರಪುರ ಸಂಸ್ಥಾನದ ರಾಜಾ

ಕೃಷ್ಣಪ್ಪನಾಯಕ ಕ್ರಿ.ಶ.೧೮೨೮-೧೮೪೩ ರವರೆಗೆ ಆಳ್ವಿಕೆ ಮಾಡಿದ್ದಾನೆ. ಇತನ ಪತ್ನಿ ರಾಣಿ ಈಶ್ವರಮ್ಮ, ರಾಜಾ ಕೃಷ್ಣಪ್ಪ ನಾಯಕನು ೧೮೪೩ರ ಆಗಸ್ಟ್‌ನಲ್ಲಿ (ಅನಾರೋಗ್ಯ ಹಾಗೂ ಚಿಂತೆಯಿಂದ) ಮರಣ ಹೊಂದಿದ ಮೇಲೆ ಈ ಸಂಸ್ಥಾನದ ರಾಜ್ಯಭಾರ ಆತನ ಪತ್ನಿ ರಾಣಿ ಈಶ್ವರಮ್ಮ ವಹಿಸಿಕೊಳ್ಳುತ್ತಾಳೆ. ಈ ದೇಶ ಕಂಡ ಅಪರೂಪದ ಸ್ವಾಭಿಮಾನಿ ವೀರ ಮಹಿಳೆ. ಇಂತಹ ಮಹಿಳೆಯ ಬಗ್ಗೆ ಕ್ಯಾ-ಮೆಡೋಸ್ ಟೈಲರ್ ಹೇಳಿದ್ದೇನೆಂದರೆ "She was desolute to a degree in fact a vary messalina and hardly second to the maharani of Punjab. Her infidelities were known to hes husbend and his family but could not be checked."[೫೯] ಈ ರೀತಿಯಾಗಿ ಆಕೆಯ ಬಗ್ಗೆ ಆಧಾರಗಳಿಲ್ಲದ ಇಲ್ಲಸಲ್ಲದ ಆರೋಪವನ್ನು ಹೊರಿಸುತ್ತಾನೆ. ಜೊತೆಗೆ ಚಾರಿತ್ರ್ಯವನ್ನು ವಧೆ ಮಾಡುತ್ತಾನೆ. ಈ ರೀತಿಯ ರಾಣಿಯ ಬಗ್ಗೆ ಟೈಲರ್‌ನ ಮಾತನ್ನು ಕೆಲವು ಸಂಶೋಧಕರು ಸಂಶಯ ವ್ಯಕ್ತಪಡಿಸಿದ್ದಾರೆ. ಅವನ ಮಾತನ್ನೇ ನಂಬಿದ್ದಾರೆ ಇದು ಇತಿಹಾಸದ ದುರಂತವೆಂದು ಹೇಳಬಹುದು. ಆಕೆಯು ಎಲ್ಲರನ್ನು ಸಂಶಯ ದೃಷ್ಟಿಯಿಂದ ಕಾಣುತ್ತಿದ್ದಳು. ಹಾಗೂ ತನ್ನದೇ ಆದ ಬೆಂಬಲಿಗರನ್ನು ಸಂಪಾದಿಸುತ್ತಿದ್ದಳು. ರಾಣಿ ಈಶ್ವರಮ್ಮ ದಿನಾಂಕ ೨೭-೭-೧೮೫೨ರಲ್ಲಿ ಲಿಂಗಸೂಗೂರಿನಲ್ಲಿ ಇಹಲೋಕ ಯಾತ್ರೆಯನ್ನು ಮುಗಿಸುತ್ತಾಳೆ. ಅವಳನ್ನು ರಾಜ ಮರ್ಯಾದೆಯಿಂದ ಹೈದರಾಬಾದ್ ನಿಜಾಮನ ಸೈನಿಕರು ಸರಕಾರಿ ತೋಟದಲ್ಲಿ ಸಮಾಧಿ ಮಾಡಿದ್ದಾರೆ.

**೫. ಬಿಜ್ಜಮ್ಮನ ಸಮಾಧಿ**

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಕರಡಿಕಲ್ಲು ಲಿಂಗಸೂಗೂರು ಪುರಸಭೆಯ ಒಂದು ಬಡಾವಣೆಯಾಗಿದೆ. ತಾಲ್ಲೂಕು ಕೇಂದ್ರದಿಂದ ಪಶ್ಚಿಮ ದಿಕ್ಕಿನಲ್ಲಿದೆ. ಭಿಲ್ಲಮರಾಜ ಕಟ್ಟಿಸಿದ ದೊಡ್ಡ ಕೆರೆಯಲ್ಲಿ ಬಿಜ್ಜಯ್ಯನ ಸಮಾಧಿ ಇದೆ. ಈ ತಾಲ್ಲೂಕಿನ ಕರಡಿಕಲ್ಲು ಎಂಬುದು ಎಡೆದೊರೆ[೬೦] ನಾಡು ೨೦೦೦ ಪ್ರದೇಶದಲ್ಲಿ ಕರಡಿಕಲ್ಲು-೪೦೦ ಎಂದು ಹೆಸರನ್ನು ಹೊಂದಿತ್ತು. ಈ ಪ್ರದೇಶದಲ್ಲಿ ದೇವಗಿರಿಯ ಯಾದವರು, ಸೇವುಣರು ಸ್ವತಂತ್ರವಾಗಿ ರಾಜ್ಯಭಾರ ಮಾಡಿದರು. ಈ ಮನೆತನದ ಮುಮ್ಮಡಿ ಬಿಲ್ಲಮ್ಮನ ಅಧಿಕಾರಾವಧಿಯಲ್ಲಿ ಬಿಜ್ಜಮ್ಮ ಎಂಬ ಮಹಿಳೆಯನ್ನು ಕೆರೆಗೆ ಹಾರ ಕೊಡಲಾಯಿತು. ಒಂದು ಸಾರೆ ಕಂಡಿಕಲ್ಲಿನಲ್ಲಿ ನೀರಿನ ಆಭಾವ ಹೆಚ್ಚಾಗಿತ್ತು. ಆದ್ದರಿಂದ ಬಿಲ್ಲಮನು ದೊಡ್ಡ ಕೆರೆಯೊಂದನ್ನು ಕಟ್ಟಿಸಿದನು. ಕೆರೆಯ ಏರಿ ನಿಲ್ಲದೆ ಸದಾ ಒಡೆಯುತ್ತಿರಲು ಕನಸ್ಸಿನಲ್ಲಿ ಬ್ರಹ್ಮರಕ್ಕಸ ಬಂದು ಹೇಳಿದನಂತೆ. ಆಗ ಬಿಜ್ಜಮ್ಮಳನ್ನು ಕೆರೆಗೆ ಹಾರ ನೀಡಲು ಮುಂದಾದನು.[೬೧] ಈಕೆ ಕೆರೆಗೆ ಹಾರವಾದದ್ದು ಸತ್ಯವೆಂಬುದನ್ನು ಕೆಲವು ಐತಿಹ್ಯಗಳು ಸತ್ಯ ಎಂದು ಸಾರಿ ಹೇಳುತ್ತವೆ. ಈ ವಿಷಯಕ್ಕೆ ಸಂಬಂಧಿಸಿದ ಕೆಲವು ಪ್ರಮುಖವಾದ ಆಕಾರಗಳು ಲಭ್ಯವಾಗಿವೆ.

ಅವುಗಳೆಂದರೆ, ಕರಡಿಕಲ್ಲು ಕೆರೆ, ಕೆರೆಯಲ್ಲಿರುವ ಬಿಜ್ಜಮ್ಮನ ಸಮಾಧಿ, ಬಿಜ್ಜಮ್ಮನ ಸೆರೆಮನೆ, ನಾಗರಕಟ್ಟೆ ಪ್ರಮುಖ ಸಾಕ್ಷಿ ನೀಡುತ್ತವೆ.

**೬. ಕಾಳಭೈರವ ನಾಯಕನ ಸಮಾಧಿ**

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನಿಂದ ೧೬ ಕಿ.ಮೀ. ದೂರದಲ್ಲಿರುವುದೇ ಗುಂತಗೋಳ. ಇಲ್ಲಿ ಇತನು ಗುಂತಗೋಳ ಸಂಸ್ಥಾನದ ಮೂಲಪುರುಷ ಕಾಲಭೈರವ ನಾಯಕ. ಇತನ ಸಮಾಧಿ ಗುಂತಗೋಳದಲ್ಲಿದೆ.

ಇಲ್ಲಿ ಒಂದು ಬೇಡ ಪಾಳೇಯಗಾರರ ಮನೆತನವಿತ್ತು. ಈ ಮನೆತನದವರು ಮೂಲತಃ ಕಂಚಿಯಿಂದ ಬಂದವರು. ಆದಿಲ್‌ಶಾಹಿಗಳ ಆಡಳಿತಾವಧಿಯಲ್ಲಿ ಒಂದು ಸಂಸ್ಥಾನವನ್ನು ಸ್ಥಾಪಿಸಿದರು. ಬ್ರಿಟಿಷ ಮತ್ತು ಹೈದರಾಬಾದ್ ನಿಜಾಮನ ದಬ್ಬಾಳಿಕೆಯ ಮಧ್ಯೆ ಆಳ್ವಿಕೆ ನಡೆಸಿದ್ದು ವಿಶೇಷವಾಗಿದೆ.

**೭. ಮಾಳಗುಂಡಮ್ಮನ ಸಮಾಧಿ**

ಈಕೆಯ ಸಮಾಧಿ ಗುಂತಗೋಳದಲ್ಲಿದೆ. ಒನಕೆ ಓಬವ್ವಳಂತೆ ಹೆಸರು ಮಾಡಿದ್ದಾಳೆ. ಗುಂತಗೋಳದ ನಾಯಕ ಅರಸರ ಆಡಳಿತದಲ್ಲಿ ಕೋಟೆಯ ಕಾವಲುಗಾರನ ಹೆಂಡತಿ. ಈಕೆ ಸಂಸ್ಥಾನದ ರಕ್ಷಣೆಗಾಗಿ ಹೋರಾಡಿ ಮಡಿದಿದ್ದಾಳೆ ಎಂದು ಇತಿಹಾಸವು ಸಾರಿ ಹೇಳುತ್ತದೆ.

**೫.೬. ಬಾವಿಗಳು**

ಲಿಂಗಸೂಗೂರು ತಾಲ್ಲೂಕಿನ ಐತಿಹಾಸಿಕ ಸ್ಮಾರಕಗಳಲ್ಲಿ ಪುಷ್ಕರಣಿಗಳು ಮುಖ್ಯವಾಗಿವೆ. ಲಿಂಗಸೂಗೂರು ಪ್ರದೇಶದಲ್ಲಿ ಬರುವ ಅನೇಕ ಗ್ರಾಮಗಳಲ್ಲಿ ದೇವಾಲಯ ಹಾಗೂ ಅದಕ್ಕೆ ಸಂಬಂಧಿಸಿದಂತೆ ಇರುವ ಪುಷ್ಕರಣಿಯನ್ನು ನಾವು ನೋಡಬಹುದು.

ಲಿಂಗಸೂಗೂರು ಪ್ರದೇಶದಲ್ಲಿರುವ ಅನೇಕ ಶಾಸನಗಳನ್ನು ನೋಡಿದಾಗ ಆ ಶಾಸನಗಳಲ್ಲಿ ದೇವರಿಗೆ ಮತ್ತು ದೇವಸ್ಥಾನಗಳಿಗೆ ದಾನ ಬಿಟ್ಟ ವಿಷಯ ತಿಳಿದುಬರುತ್ತದೆ. ಅಂದರೆ ಶಾಸನಗಳಲ್ಲಿರುವ ದೇವಾಲಯದ ಉಲ್ಲೇಖಗಳ ಜೊತೆಗೆ, ಕೆರೆಯ ಉಲ್ಲೇಖ, ಕೋಟೆಯ ಉಲ್ಲೇಖವಿದೆ. ಆದರೆ ಈ ಪುಷ್ಕರಣಿಗಳ ಉಲ್ಲೇಖವಿರುವುದಿಲ್ಲ. ಅಂದರೆ ಈ ಪುಷ್ಕರಣಿ ನಿರ್ಮಾಣ ಕಾಲದ ಹೆಸರು ಇಲ್ಲದಿದ್ದರೂ ಆ ದೇವಾಲಯದ ನಿರ್ಮಾಣ ಕಾಲದ ಉಲ್ಲೇಖವಿದೆ. ಈ ಒಂದು ಆಧಾರದ ಮೇಲೆ ಈ ಪುಷ್ಕರಣಿಯ ಕಾಲ ಅವಧಿಯನ್ನು ನಿಗದಿಪಡಿಸಬಹುದಾಗಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೆ ಕರ್ನಾಟಕವನ್ನು

ಆಳ್ವಿಕೆ ಮಾಡಿದ ಅರಸರು ಮತ್ತು ಶರಣರು, ಸಂತರು, ಕರ್ನಾಟಕದಲ್ಲಿ ನೆಲೆಸಿದ್ದರಿಂದ ಇವರು ತಮ್ಮ ಆರಾಧ್ಯ ದೇವರ ಪೂಜೆಗಾಗಿ ಪುಷ್ಕರಣಿಯನ್ನು ನಿರ್ಮಿಸುವ ಪದ್ಧತಿ ಬೆಳೆಸಿಕೊಂಡು ಬಂದರು. ಪ್ರತಿಯೊಂದು ದೇವಾಲಯ ಹಾಗೂ ಮಠಮಂದಿರಗಳಲ್ಲಿ ಒಳಗೆ ಮತ್ತು ಹೊರಗಡೆಯಲ್ಲಿ ಇಂತಹ ಒಂದು ಪುಷ್ಕರಣೆಯನ್ನು ಕಾಣಬಹುದು.

ಕೇವಲ ಧರ್ಮದ ಕಾರ್ಯಗಳಿಗಾಗಿ ಅಲ್ಲದೆ, ಸಮಾಜದ ಜನರ ಜೀವನಕ್ಕಾಗಿ, ಊರುಗಳಲ್ಲಿ ಅನೇಕ ಬಾವಿಗಳನ್ನು ನಿರ್ಮಿಸಿದ್ದಾರೆ. ಕರ್ನಾಟಕವನ್ನು ಆಳಿದ ಹಲವು ಅರಸರು ಈ ಪುಷ್ಕರಣಿಯನ್ನು ನಿರ್ಮಿಸಿದ್ದರು. ಈ ಪುಷ್ಕರಣಿಗಳು ಚೌಕಾಕಾರದಲ್ಲಿ ಅಥವಾ ಗೋಲಾಕಾರದಲ್ಲಿ ನಿರ್ಮಿಸಿದ್ದು, ಕಲ್ಲುಗಳಿಂದ ಕಟ್ಟಲಾಗುತ್ತಿತ್ತು. ಕೆಲವು ಪುಷ್ಕರಣಿಗಳು ನೈಸರ್ಗಿಕವಾಗಿ ಸಿಡಿಲಿನಿಂದ ನಿರ್ಮಿತವಾದ ಪುಷ್ಕರಣಿಗಳಿವೆ. ಸಾಧಾರಣವಾಗಿ ಪುಷ್ಕರಣಿಗಳಲ್ಲಿ ನೀರನ್ನು ತರಲು ಮೆಟ್ಟಿಲು ಮತ್ತು ಗಿರಿಕಿಗಳನ್ನು ಮಾಡಲಾಗಿದೆ. ಇವು ಸುಮಾರು ೨೦ ರಿಂದ ೯೦ ಅಡಿ ಆಳದವರೆಗೆ ಇರುತ್ತವೆ. ಇಂತಹ ಪುಷ್ಕರಣಿಗಳು ಲಿಂಗಸೂಗೂರು ತಾಲ್ಲೂಕಿನ ಅನೇಕ ಗ್ರಾಮದಲ್ಲಿವೆ.

**೧. ಚಾರ್ ಮಹಲ್ ಬಾವಿ**

ಈ ಬಾವಿಯು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಇದು ಕೋಟೆ ಒಳಗಭಾಗದ ಉತ್ತರಕ್ಕೆ ಇರುವ ಚಾರ್ ಮಹಲ್ ಬಾವಿ ಕ್ರಿ.ಶ.೧೫೦೨ರಲ್ಲಿ ಕಟ್ಟಲಾಗಿದೆ. ಇದು ವಿಜಯನಗರ ಅರಸ ನರಸ ನಾಯಕನ ಕಾಲದಲ್ಲಿ ನಿರ್ಮಾಣಗೊಂಡಿದೆ. ಈ ಬಾವಿಯನ್ನು ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಮಂತ್ರಿ ತಿಮ್ಮರಸನು ನಿರ್ಮಿಸಿದ್ದಾನೆ ಎಂದು ತಿಳಿದುಬಂದಿದೆ.

**೨. ಸಜ್ಜಿ ಹೊಲದ ಬಾವಿ**

ಈ ಬಾವಿ ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ೭ ಕಿ.ಮೀ. ಅಂತರದಲ್ಲಿರುವ ಹುನಕುಂಟಿ ಊರಿನಲ್ಲಿದೆ. ಇದು ಊರಿನ ಮುಂದೆ ಇರುವ ಬಾವಿ ಆಗಿದ್ದು, ಎರಿ ಹೊಲಕ್ಕೆ ಹೋಗುವ ಮಾರ್ಗದಲ್ಲಿ ಬರುತ್ತದೆ. ಗ್ರಾಮದಿಂದ ದಕ್ಷಿಣ ದಿಕ್ಕಿಗೆ ಇದೆ. ಇದನ್ನು ಸಜ್ಜಿ ಹೊಲ ಬಾವಿ ಎಂತಲೂ ಕರೆಯುತ್ತಾರೆ. ನಮ್ಮ ಪೂರ್ವಿಕರು ಮೊಹರಂ ಆಚರಣೆಯನ್ನು ಇಂದಿಗೂ ಜಾತಿ, ಮತ, ಪಂಥವನ್ನು ಮೀರಿ ಆಚರಿಸುತ್ತಾರೆ. ಈ ಊರಿನಲ್ಲಿ ಕೂಡ ಈ ಆಚರಣೆ ಜಾರಿಯಲ್ಲಿದೆ. ಮೊಹರಂನ ಕೊನೆಯ ದಿನದಂದು ದೇವರುಗಳನ್ನು ಇದೇ ಬಾವಿಯಲ್ಲಿ ಸುಮಾರು ವರ್ಷಗಳಿಂದ ದಫನ ಮಾಡುವ ರೂಢಿ ಜಾರಿಯಲ್ಲಿದೆ. ಈ ಬಾವಿಯಲ್ಲಿ ನೀರು ಸದಾ ಇರುತ್ತದೆ. ಇಲ್ಲಿ ನೀರು ಬತ್ತಿದ ಉದಾಹರಣೆಗಳಿಲ್ಲ.

೩. ಹಲಾಲಕೋರ ಬಾವಿ

ಈ ಬಾವಿ ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಇದು ಕೋಟೆಯ ಒಳಭಾಗದಲ್ಲಿ ಬರುತ್ತದೆ. ಇದನ್ನು ಗಗನ್ ಮಹನ್ ಹತ್ತಿರದಲ್ಲಿ ಹಲಾಲಕೋರ ಬಾವಿಯನ್ನು ಬೆಟ್ಟದ ಮೇಲೆ ವಿಶಿಷ್ಟ ರೀತಿಯಲ್ಲಿ ಕಟ್ಟಲಾಗಿದೆ. ಇದನ್ನು ಕ್ರಿ.ಶ.೧೫೦೩ರಲ್ಲಿ ನಿರ್ಮಿಸಲಾಗಿದೆ. ಕುರಗೋಡ ಸೋಮಣ್ಣ ನಾಯಕನ ಪ್ರಧಾನನಾದ ಕಪಿಲಗೋತ್ರದ ರುಕ್ ಶಾಖೆಯ ಗಂಗರಸನ ಮಗ ನರಸಪ್ಪ ಬಾವಿಯನ್ನು ಕಟ್ಟಿಸಿರುವುದನ್ನು ಉಲ್ಲೇಖಿಸುತ್ತದೆ.[೨]

೪. ಖಾನ್‌ಸಾಬ್ ಬಾವಿ

ಈ ಬಾವಿ ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಇದು ಕೋಟೆಯ ಒಳಭಾಗದಲ್ಲಿದೆ. ಈ ಬಾವಿ ಬೃಹದಾಕಾರದಲ್ಲಿ ನಿರ್ಮಾಣಗೊಂಡಿದೆ. ಇಲ್ಲಿನ ಬಾವಿಯ ನೀರನ್ನು ಅಲ್ಲಿನ ಜನ ದಿನಬಳಕೆಗಾಗಿ ಮತ್ತು ನೀರಾವರಿಗಾಗಿ ಉಪಯೋಗಿಸುತ್ತಿದ್ದರು. ಈ ಬಾವಿಗೆ ಖಾನ್‌ಸಾಬ್ ಬಾವಿ ಎಂತಲೂ ಕರೆಯುತ್ತಾರೆ. ಈ ಊರಿನ ಖಾನ್‌ಸಾಬ್ ಎಂಬ ವ್ಯಕ್ತಿ ಪ್ರತಿದಿನ ಬಾವಿಯಲ್ಲಿ ಸ್ನಾನ ಮಾಡಿಕೊಂಡು ಮಸೀದಿಗೆ ಹೋಗುತ್ತಿದ್ದ. ಇದರಿಂದಾಗಿ ಈ ಬಾವಿಗೆ ಖಾನ್‌ಸಾಬ್ ಬಾವಿ ಎಂದು ನಾಮಕರಣವಾಗಿರಬಹುದು ಎಂದು ಅಲ್ಲಿನ ಜನರು ಹೇಳುತ್ತಾರೆ.

೫. ಅರಬಾವಿ

ಈ ಬಾವಿ ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಇದು ಕೋಟೆಯ ಒಳಭಾಗದಲ್ಲಿದೆ. ರಾಘವೇಂದ್ರ ಮಠದ ಹತ್ತಿರ ಇರುವ ಅರಬಾವಿ ಕಲ್ಯಾಣ ಚಾಲುಕ್ಯರು ಕ್ರಿ.ಶ.೧೦೬೫ರಲ್ಲಿ ಗ್ರಾನೈಟ್ ಕಲ್ಲಿನಿಂದ ನಿರ್ಮಾಣ ಮಾಡಿದ್ದಾರೆ. ಇದು ಚೌಕಾಕಾರದಲ್ಲಿದೆ. ಈ ಬಾವಿಗೆ ಪೂರ್ವ ಮತ್ತು ಉತ್ತರ ದಿಕ್ಕುಗಳಿಗೆ ಪ್ರವೇಶದ್ವಾರಗಳು ಇವೆ. ಪೂರ್ವದ ಪ್ರವೇಶ ದ್ವಾರದಲ್ಲಿ ಎರಡು ಕಂಬಗಳಿವೆ. ದಕ್ಷಿಣ ದಿಕ್ಕಿನಲ್ಲಿ ಕಂಬದ ಮೇಲೆ ಚಾಲುಕ್ಯ ಅರಸ ಒಂದನೇ ಸೋಮೇಶ್ವರನ ಕಾಲದ ಶಾಸನ ಇದೆ. ಕೆಲ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಇದು ಆದಿಲ್‌ಶಾಹಿ ಕಾಲದ ಗೋಡೆಕಂಬಗಳ ಮೇಲೆ ಕಮಾನುಗಳು ನಿರ್ಮಾಣಗೊಂಡಿರಬಹುದು ಎಂದು ಹೇಳುತ್ತಾರೆ. ಮೊಹರಂನ ಕೊನೆ ದಿನದಂದು ದೇವರುಗಳನ್ನು ಇದೇ ಬಾವಿಯಲ್ಲಿ ಶುಚಿಗೊಳಿಸುತ್ತಾರೆ.

### ೬. ಅಂತರಗಂಗಿ ದುರ್ಗಮ್ಮನ ಬಾವಿ

ಇದು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೪ ಕಿ.ಮೀ. ಅಂತರದಲ್ಲಿದೆ. ಕರಡಕಲ್ಲು-೪೦೦ ಆಳ್ವಿಕೆಯಲ್ಲಿ ಈ ಊರಿಗೆ ಲಿಂಗ ಎಂದು ಕರೆಯುತ್ತಿದ್ದರು. ಈ ಬಾವಿಯು ಕಸಬಾ ಲಿಂಗಸೂಗೂರಿನ ನಾಯಕರ ಓಣಿಯಲ್ಲಿದೆ. ಇದನ್ನು ಅಂತರಗಂಗಿ ಬಾವಿಯೆಂದು ಕರೆಯುತ್ತಾರೆ. ಈ ಬಾವಿಯಲ್ಲಿ ಯಾವಾಗಲೂ ನೀರು ಇರುತ್ತದೆ. ವಿಶೇಷ ಏನೆಂದರೆ ಇಲ್ಲಿ ಬಾವಿಯಲ್ಲಿ ನೀರು ಬತ್ತಿದ ಉದಾಹರಣೆಗಳು ಬಹಳಷ್ಟು ಕಡಿಮೆ.[೬೩]

### ೭. ದುರ್ಗಾದೇವಿ ಗುಡಿಯ ಹತ್ತಿರದ ಬಾವಿ

ಇದು ಲಿಂಗಸೂಗೂರು ತಾಲೂಕಿನ ಮುದಗಲ್ ಹೋಬಳಿಗೆ ಸೇರಿದ ಕನಸಾವಿ ಗ್ರಾಮದಲ್ಲಿದೆ. ತಾಲ್ಲೂಕಿನಿಂದ ೪೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿರುವ ಐತಿಹಾಸಿಕ ವಾದ ಬಾವಿ ಇದಾಗಿದೆ. ಈ ಬಾವಿಯ ಕುರಿತು ಶಾಸನದಲ್ಲಿ ಉಲ್ಲೇಖವಿದೆ. ಅದೇ ಗ್ರಾಮದ ಕುರುಬಗಟ್ಟಿಯ ದುರ್ಗಾದೇವಿ ಗುಡಿಯ ಬಲಭಾಗದ ಶಾಸನದಲ್ಲಿ ಚಾಳುಕ್ಯ ತ್ರಿಭುವನಮಲ್ಲನ ದಂಡನಾಯಕ ಬಿವಣಯ್ಯನು ಕಣ್ಣಸಾವಿಯ ಧರ್ಮದ ಏತದ ಬಾವಿಗೆ ಆರು ಮತ್ತರು ಭೂಮಿಯನ್ನು ದಾನ ಬಿಡುತ್ತಾನೆ. ಈ ದಣ್ಣನಾಯಕನನ್ನು ಶಾಸನವು ವಿಶೇಷವಾಗಿ ಹೊಗಳುತ್ತದೆ. ಶಾಸನದ ಕೊನೆಯಲ್ಲಿ ಶಾಪಾಶಯದ ಭಾಗವಿದೆ.[೬೪]

### ೮. ಹಳೇ ಪೇಟೆ ದೇವರ ಬಾವಿ

ಈ ಬಾವಿಯು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಈ ಪಟ್ಟಣದಲ್ಲಿರುವ ಐತಿಹಾಸಿಕ ಬಾವಿ ಇದಾಗಿದೆ. ಇದು ಹಳೇಪೇಟೆಯಲ್ಲಿ ಇದೆ. ಹಳೇಪೇಟೆ ಬಾವಿಗೆ ಮೊಹರಂ ಹಬ್ಬದಲ್ಲಿ ಅಲಂ ದೇವರು ಇಲ್ಲಿಗೆ ಬಂದು ದಫನ್‌ಗೊಳ್ಳುತ್ತವೆ. ಆದ್ದರಿಂದ ಇದಕ್ಕೆ ದೇವರ ಬಾವಿ ಎಂದು ಕರೆಯುತ್ತಾರೆ. ಈ ಬಾವಿಯನ್ನು ಕ್ರಿ.ಶ.೧೪೮೨ರಲ್ಲಿ ವಂಗಳಪ್ಪ ನಾಯಕ ಕಟ್ಟಿಸುತ್ತಾನೆ.

### ೯. ಕಲ್ಲುಬಾವಿ

ಲಿಂಗಸೂಗೂರು ತಾಲ್ಲೂಕಿನಿಂದ ೧೩ ಕಿ.ಮೀ. ದೂರದಲ್ಲಿರುವ ಆನೆಹೊಸೂರು ಗ್ರಾಮ, ಸುದೀರ್ಘವಾದ ಐತಿಹಾಸಿಕವಾದ ಮಹತ್ವ ಪಡೆದಿದೆ. ಈ ಗ್ರಾಮದಲ್ಲಿ ಪ್ರಾಚೀನ ಕಾಲದ ಬಾವಿಯಿದೆ. ಈ ಬಾವಿ ಊರ ಹೊರಗಿರುವ ಹೊಂಡದಲ್ಲಿದ್ದು, 'L' ಆಕಾರದಲ್ಲಿದೆ. ಬಾವಿಯ ಪೂರ್ವ ದಿಕ್ಕಿನ ಗೋಡೆಯ ದುರಸ್ತಿಯಾಗಿದೆ. ಗ್ರಾಮದಲ್ಲಿರುವ ಕೇಶವ ದೇವಾಲಯದ ಕಲ್ಲುಗಳನ್ನು ತಂದು ಬಾವಿಯನ್ನು ನಿರ್ಮಿಸಲಾಗಿದೆ ಎಂದು ಹೇಳುತ್ತಾರೆ.[೬೫]

ಇದಕ್ಕೆ ಪೂರಕವಾಗಿ ಬಾವಿಯಲ್ಲಿರುವ ಒಂದು ಕಲ್ಲಿನ ಮೇಲೆ ವಿಷ್ಣುವಿನ ಉಬ್ಬುಶಿಲ್ಪ ಇರುವುದು ಸಾಕ್ಷಿಯಾಗಿದೆ. ಆ ಊರಿನ ಜನ ಈ ಬಾವಿಯನ್ನು ಕಲ್ಲು ಬಾವಿ ಎಂದು ಕರೆಯುತ್ತಾರೆ. ಈ ಬಾವಿಯ ಒಳಭಾಗಕ್ಕೆ ತಲುಪಲು ಮೆಟ್ಟಿಲುಗಳಿವೆ. ಬಾವಿಯನ್ನು ಆ ಊರಿನ ಎಲ್ಲಾ ಧರ್ಮದ ಬಾಂಧವರು ಅವರ ಧಾರ್ಮಿಕ ಆಚರಣೆಗಳಿಗೆ ಬಳಸಿಕೊಳ್ಳುತ್ತಾರೆ.

**೧೦. ಗವಿಸಿದ್ದೇಶ್ವರ ದೇವಾಲಯದ ಹತ್ತಿರದ ಬಾವಿ**

ಇದು ಲಿಂಗಸೂಗೂರು ತಾಲೂಕಿನ ಪಶ್ಚಿಮ ದಿಕ್ಕಿಗೆ ೩೨ ಕಿ.ಮೀ. ದೂರದಲ್ಲಿದೆ. ಗುಡಿಯ ಪಶ್ಚಿಮಕ್ಕೆ ಕಲ್ಲು ಬಂಡೆಯ ಮೇಲೆ ಬಾವಿ ಇದೆ. ಈ ಬಾವಿಯಲ್ಲಿ ವರ್ಷದ ೧೨ ತಿಂಗಳು ನೀರು ತುಂಬಿರುತ್ತದೆ. ಈ ಬಾವಿಯಲ್ಲಿರುವ ನೀರು ಔಷಧಿಯ ಗುಣವನ್ನು ಹೊಂದಿದೆ. ನೀರನ್ನು ಹೊಲದ ಬೆಳೆಗಳಿಗೆ ಸಿಂಪಡಿಸಿದರೆ ಕೀಟ ಬಾಧೆಗಳು ಕಾಣದಂತಾಗುತ್ತದೆ ಎಂದು ಹೇಳುತ್ತಾರೆ.[೬೬]

**೧೧. ಗಡಗಿ ಬಾವಿ**

ಈ ಬಾವಿಯು ಲಿಂಗಸೂಗೂರಿನಿಂದ ಉತ್ತರ ದಿಕ್ಕಿಗೆ ೧೬ ಕಿ.ಮೀ. ದೂರದಲ್ಲಿದೆ. ಅಮರೇಶ್ವರ ದೇವಾಲಯದ ಬಲಭಾಗದಲ್ಲೊಂದು ಬಾವಿ ಕಂಡುಬರುತ್ತದೆ ಎಂದು ತಿಳಿದು ಬಂದಿದೆ. ಬಾವಿಗೆ ಇಂದು 'ಕುಂಭತೀರ್ಥ'ವೆಂದು 'ಗಡಗಿ ಬಾವಿ' ಎಂದು ಕರೆಯುತ್ತಾರೆ.[೬೭] ಇದರಲ್ಲಿ ಎಂಥ ಭೀಕರ ಬರಗಾಲ ಬಿದ್ದರೂ ನೀರು ಮಾತ್ರ ನಿರಂತರವಾಗಿ ಒಂದೇ ಪ್ರಮಾಣದಲ್ಲಿ ಸದಾ ಹರಿಯುತ್ತಿರುತ್ತದೆ.

**೧೨. ಕೋಟಾ ಬಾವಿ**

ಈ ಬಾವಿಯು ಲಿಂಗಸೂಗೂರಿನಿಂದ ೨೫ ಕಿ.ಮೀ. ದೂರದಲ್ಲಿದೆ. ಕೋಟೆಯ ಮಧ್ಯದಲ್ಲಿ ಈ ಬಾವಿ ಇದೆ. ಈ ಬಾವಿಯ ಸಮೀಪ ನಂದಿಕೇಶ್ವರ ಮತ್ತು ಬಸವೇಶ್ವರ ಗುಡಿಗಳು ಇವೆ. ಇದು ಚೌಕಾಕಾರದಲ್ಲಿ ಕಂಡುಬರುತ್ತದೆ. ಬಾವಿಯ ಉತ್ತರಭಾಗ ಶಿಥಿಲ ವಾಗಿರುವುದು. ದಕ್ಷಿಣ ಭಾಗದಲ್ಲಿ ಬಾವಿಯ ಅಗಲ ಹಂತ ಹಂತವಾಗಿ ಕಡಿಮೆಯಾಗುತ್ತಾ ಹೋಗುತ್ತದೆ. ಇದೇ ಭಾಗದಲ್ಲಿ ಮೆಟ್ಟಿಲುಗಳು ಕಂಡುಬರುತ್ತವೆ. ಬಾವಿಯಲ್ಲಿ ಇಳಿಯುವುದಕ್ಕೆ ಮೊದಲು ಪೂರ್ವ ಗೋಡೆಯ ಬದಿಯಲ್ಲಿ ಇವೆ. ಉತ್ತರದಿಂದ ದಕ್ಷಿಣಕ್ಕೆ ನಂತರ ಪೂರ್ವದಿಂದ ಪಶ್ಚಿಮಕ್ಕೆ, ಕೊನೆಗೆ ದಕ್ಷಿಣದಿಂದ ಉತ್ತರಕ್ಕೆ ಮೆಟ್ಟಿಲುಗಳಿವೆ. ಬಾವಿಯನ್ನು ಚೆನ್ನಾಗಿ ನಯ ಮಾಡಿದ ಉದ್ದವಾದ ಕಲ್ಲುಗಳಿಂದ ಕಟ್ಟಲಾಗಿದೆ. ಇಲ್ಲಿ ವಿಶೇಷವಾಗಿ ಕಲ್ಲುಗಳ ಪ್ರತಿ ಸಾಲು ಗಮನಿಸಿದರೆ ಕೆಳಗಿನ ಸಾಲಿಗಿಂತ ಸ್ವಲ್ಪ ಹಿಂದೆ ಸರಿಯುವಂತೆ

ರಚಿಸಿದೆ. ಈ ಬಾವಿಯನ್ನು ೧೧-೧೨ನೇ ಶತಮಾನದಲ್ಲಿ ಕಟ್ಟಿಸಿರಬಹುದು. ನಂದಿಕೇಶ್ವರ ದೇವಾಲಯದ ಮುಂದೆ ಸಪ್ತಮಾತೃಕೆಯರ ಶಿಲ್ಪವಿದೆ.

೧೩. ಸಿಡಿಲು ಬಾವಿ

ಈ ಬಾವಿಯು ಲಿಂಗಸೂಗೂರಿನಿಂದ ೨೫ ಕಿ.ಮೀ. ದೂರದಲ್ಲಿರುವ ಜಲದುರ್ಗ ಕೋಟೆಯಲ್ಲಿದ್ದು, ಸಂಗಮೇಶ್ವರ ದೇವಸ್ಥಾನದ ಪಕ್ಕದಲ್ಲಿ ಸಿಡಿಲುಬಾವಿ ಇದೆ. ಒಂದಾನೊಂದು ಕಾಲದಲ್ಲಿ ಆಳವಾಗಿ ಸಿಡಿಲು ಬಡಿದು ಬಾವಿಯಾಗಿ ಕಾಣಿಸಿಕೊಂಡಿದೆ. ನೋಡುವುದಕ್ಕೆ ಈ ಬಾವಿ ಕ್ರಮಬದ್ಧವಾಗಿ ತೋಡಿದ ಬಾವಿಯಂತಿದೆ. ಅಂದಿನ ಸಂದರ್ಭದಲ್ಲಿ ಅಲ್ಲಿರುವ ಸೈನಿಕರು ಈ ಬಾವಿಯ ನೀರನ್ನು ಬಳಕೆ ಮಾಡಿಕೊಳ್ಳುತ್ತಿದ್ದರು. ದೇವರ ಪೂಜೆಗೆ ಈ ಬಾವಿಯ ನೀರು ಬಳಕೆ ಮಾಡಿಕೊಳ್ಳುತ್ತಿದ್ದಿರಬಹುದು.

೧೪. ಹೊನ್ನಹಳ್ಳಿ ಬಾವಿ

ಈ ಬಾವಿಯು ಲಿಂಗಸೂಗೂರಿನಿಂದ ೮ ಕಿ.ಮೀ. ದೂರದಲ್ಲಿ ಕಲಬುರ್ಗಿಗೆ ಹೋಗುವ ಮಾರ್ಗದಲ್ಲಿರುವ ಗ್ರಾಮದಲ್ಲಿದೆ. ಕೋಟೆಬಾಗಿಲ ಪಶ್ಚಿಮಕ್ಕೆ ಒಂದು ಬಾವಿಯಿದೆ. ಈ ಬಾವಿಗೆ ಮಧ್ಯಮ ಮತ್ತು ಚಿಕ್ಕಗಾತ್ರದ ಕಲ್ಲುಗಳಿಂದ ಕಟ್ಟಲಾಗಿದೆ. ಇದೊಂದು ಚೌಕಾಕಾರದ ಬಾವಿಗೆ ಪೂರ್ವ ದಿಕ್ಕಿನಲ್ಲಿ ಮೆಟ್ಟಿಲುಗಳಿವೆ. ಇದನ್ನು ಗೋಲೇಶ್ವರ ಬಾವಿ ಅಥವಾ ಉಪ್ಪಿನ ಬಾವಿ ಎಂದು ಕರೆಯುತ್ತಾರೆ.

೧೫. ಹಳೆ ವಿ.ಸಿ.ಬಿ.ಕಾಲೇಜಿನ ಆವರಣದಲ್ಲಿರುವ ಬಾವಿ

ಈ ಬಾವಿಯು ಹಳೆ ವಿ.ಸಿ.ಬಿ.ಕಾಲೇಜಿನಲ್ಲಿದೆ. ಇದು ಲಿಂಗಸೂಗೂರು ತಾಲೂಕಿನಲ್ಲಿದೆ. ಬಾವಿಯ ದಕ್ಷಿಣ ಗೋಡೆಯಲ್ಲಿ ಅನೇಕ ಮೂರ್ತಿಶಿಲ್ಪಗಳ ಚಿತ್ರಗಳಿವೆ. ಅವುಗಳಲ್ಲಿ ಶಿವನ ಚಿತ್ರ, ಶಿಲಾಬಾಲಕಿಯರ ಚಿತ್ರಗಳಿವೆ. ಇದು ಯಾವುದೋ ಒಂದು ದೇವಾಲಯದ ಭಾಗವಾಗಿದ್ದು, ಅದನ್ನು ಇಲ್ಲಿ ಜೋಡಿಸಿ, ಗೋಡೆಯಲ್ಲಿ ಕಟ್ಟಲಾಗಿದೆ. ಸುತ್ತಲು ಕಲ್ಲಿನಿಂದ ಕಟ್ಟಡವನ್ನು ಕಟ್ಟಲಾಗಿದೆ. ಕೆಲವು ಕಡೆ ಇದು ಶಿಥಿಲಗೊಂಡಿರುವುದರಿಂದ ಸಂಶೋಧಿಸುವುದು ಕಷ್ಟಸಾಧ್ಯವಾಗಿದೆ.

೧೬. ರಾಮತೀರ್ಥದ ಪುಷ್ಕರಣಿ

ಶ್ರೀ ಕುಪ್ಪಿಭೀಮ ದೇವಾಲಯದ ಉತ್ತರ ದಿಕ್ಕಿಗೆ ಪುರಾತನ ರಾಮದೇವಾಲಯವಿದೆ. ಇದರ ಮುಂದಿರುವ ಪುಷ್ಕರಣಿಗೆ ರಾಮತೀರ್ಥವೆಂದು ಕರೆಯುತ್ತಾರೆ. ಹಿಂದಿನ ಕಾಲದಲ್ಲಿ ಶ್ರೀರಾಮನು ಲಕ್ಷ್ಮಣನೊಂದಿಗೆ ಇದೇ ಮಾರ್ಗವಾಗಿ ಕಿಷ್ಕಿಂಧೆಗೆ ಹೊರಟಾಗ ಇಲ್ಲಿ ಸ್ವಲ್ಪ

ಕಾಲ ತಂಗಿದ್ದರಂತೆ. ಅದರ ಸ್ಮರಣೆಗಾಗಿ ಈ ಸ್ಥಳದಲ್ಲಿ ರಾಮಮಂದಿರವನ್ನು ಕಟ್ಟಲಾಗಿದೆ ಎಂದು ಹೇಳುತ್ತಾರೆ.

ಆಗಿನ ಸಂದರ್ಭದಲ್ಲಿ ಈ ಭಾಗದಲ್ಲಿ ನೀರಿನ ಅಭಾವವಿತ್ತು. ಅದನ್ನು ಅರಿತ ರಾಮನು ತನ್ನ ಬತ್ತಳಿಕೆಯಿಂದ ಬಾಣವನ್ನು ನೆಲಕ್ಕೆ ಬಿಟ್ಟಾಗ ನೆಲದಿಂದ ನೀರು ಚಿಮ್ಮಿತು. ಅದೇ ಮುಂದೆ ರಾಮತೀರ್ಥವಾಯಿತೆಂಬ ನಂಬಿಕೆ ಆ ಊರಿನ ಜನರಲ್ಲಿ ಇದೆ. ಈ ಪುಷ್ಕರಣಿಯ ಮಧ್ಯದಲ್ಲಿ ನೀರು ಚಿಲುಮೆಯಾಕಾರದಲ್ಲಿ ಹೊರಬರುತ್ತದೆ.

**ಮನ್ ಬಾವಿಗಳು**

ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿ ಮನ್‌ಬಾವಿಗಳು ಕಾಣಿಸಿಕೊಳ್ಳುತ್ತವೆ. ಇಲ್ಲಿನ ಜನ ಪ್ರತಿನಿಧಿಗಳು ಹಾಗೂ ಪ್ರಾಚ್ಯವಸ್ತು ಇಲಾಖೆ ಅಧಿಕಾರಿಗಳ ನಿರ್ಲಕ್ಷ್ಯದಿಂದ ಇಂದು ವಿನಾಶದಂಚಿನಲ್ಲಿವೆ. ಕ್ರಿ.ಶ.೧೯೨೮ ರಿಂದ ೧೯೩೫ರ ಕಾಲಘಟ್ಟದಲ್ಲಿ ಭೀಕರ ಬರಗಾಲಕ್ಕೆ ತುತ್ತಾಗಿತ್ತು. ಹಾಗಾಗಿ ಕುಡಿವ ನೀರಿನ ಬವಣೆ ಒಂದೆಡೆ ಕಂಡುಬಂದಿದೆ. ಮತ್ತೊಂದೆಡೆ ಭೀಕರ ಬರಗಾಲ. ಇದರ ಪರಿಣಾಮವಾಗಿ ಜನರು ಸಂಕಷ್ಟಕ್ಕೆ ಸಿಲುಕಿದ್ದರು. ನಿಜಾಮ ಸರಕಾರದ ಭೌಗೋಳಿಕ ಸಮೀಕ್ಷೆಯ ನಿರ್ದೇಶಕ ಮತ್ತು ಬಾವಿ ಕೊರೆತ ವಿಭಾಗದ ವಿಶೇಷಾಧಿಕಾರಿಯಾಗಿ ಎರವಲು ಸೇವೆಯ ಮೇಲೆ ರಾಯಚೂರು ಜಿಲ್ಲೆಗೆ ನಿಯುಕ್ತಿಗೊಳಿಸಿದರು.[೬೮] ಇಲ್ಲಿನ ಭೀಕರ ಬರಗಾಲ ಮತ್ತು ನಾರು ಹುಣ್ಣನ್ನು ತಡೆಗಟ್ಟಲು, ಬಾವಿಗಳನ್ನು ಕೊರೆಯಲು ಪ್ರಾರಂಭಿಸಿದರು. ಸುಮಾರು ೧೨೦೦ ಕ್ಕಿಂತ ಹೆಚ್ಚು ಬಾವಿಗಳನ್ನು ತೋಡಿಸಿ ಈ ಭಾಗದ ಜನರ ನೀರಿನ ಬವಣೆ ತೀರಿಸಿದ. ಆತ ತೋಡಿಸಿದ ಬಾವಿಗಳು ಅವಸಾನದ ಅಂಚಿನಲ್ಲಿವೆ. ಇದಕ್ಕೆ ಕಾರಣ ಜನರು ಮತ್ತು ಸರಕಾರ ಎಂದು ತಿಳಿದುಬರುತ್ತದೆ.

ಈ ತಾಲ್ಲೂಕಿನಲ್ಲಿ ಮನ್‌ಬಾವಿಗಳು ತ್ರಿಕೋನ, ಚತುರ್ಕೋನ, ಪಂಚಕೋಣ, ಷಟ್‌ಕೋನ, ಸಪ್ತಕೋನ, ಅಷ್ಟಕೋನ, ನವಕೋನ ಹಾಗೂ ದಶಕೋನಾಕಾರಗಳಲ್ಲಿ ನಿರ್ಮಾಣಗೊಂಡಿವೆ. ಅನೇಕ ವೈಜ್ಞಾನಿಕ ಕ್ರಮಗಳನ್ನು ಬಳಸಿ ಬಾವಿಗಳನ್ನು ನಿರ್ಮಿಸಿದ್ದು ಕಂಡುಬರುತ್ತದೆ. ಹೈದ್ರಾಬಾದ್ ನಿಜಾಮ್ ಸರಕಾರದ ಹೆಸರು, ಜೊತೆಗೆ ತನ್ನ ಹೆಸರನ್ನು ಬಾವಿಯ ಮೇಲೆ ಬರೆಸಿದ್ದಾನೆ. ಇದರಿಂದಾಗಿ ಆತನ ಸಾಧನೆಯನ್ನು ಸ್ಮರಿಸಿ ಅಂದಿನ ನಿಜಾಮ್ ಸರಕಾರ 'ಸಾವಿರ ಬಾವಿಗಳ ದೊರೆ' ಅಥವಾ ಬಾವಡಿಸಾಬ್ ಎಂದು ಬಿರುದು ನೀಡಿ ಗೌರವಿಸಲಾಗಿತ್ತು.[೬೯]

ಈ ಬಾವಿಗಳು ಪ್ರಯಾಣಿಕರಿಗೆ ಅನುಕೂಲವಾಗಲೆಂದೇ ಅಡವಿಯಲ್ಲಿ ದಾರಿಗುಂಟ ಬಾವಿಗಳನ್ನು ತೋಡಿಸಿ ಪ್ರಯಾಣಿಕರಿಗೆ ಅನುಕೂಲ ಮಾಡಲಾಯಿತು. ಈ ಬಾವಿ ನೀರು

ಕುಡಿಯಲು ಅನುಕೂಲಕ್ಕಾಗಿ ಬಾವಿಯ ದಂಡೆಗೆ ಸರಳ ರೀತಿಯ ಸರಪಳಿ ಜೋಡಿಸಿದ ಬಕೆಟ್ ಯಾವಾಗಲೂ ಅಲ್ಲಿ ಇಟ್ಟಿರುತ್ತಿದ್ದರು. ಇಂದು ರಾಯಚೂರು, ಕೊಪ್ಪಳ ಜಿಲ್ಲೆಗಳಲ್ಲಿ ಮನ್‌ನ ಬಾವಿಗಳು ದೊರೆಯುತ್ತಿವೆ. ಇವುಗಳಿಗೆ ಜನರು "ಗಿರಿಕಿ ಬಾವಿ" ಅಥವಾ 'ಮನ್ನ ಸಾಬನಬಾವಿ'ಗಳೆಂದು ಕರೆಯುತ್ತಾರೆ.

**ಮುದಗಲ್ ಕೋಟೆಯ ಪುಷ್ಕರಣಿ**

ಈ ಪುಷ್ಕರಣಿಯು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಇದು ಹಿಂದಿನ ಕೋಟೆ ಗೋಡೆಯ ಹತ್ತಿರದಲ್ಲಿದೆ. ಬಹಳ ದೊಡ್ಡದಾದ, ಉದ್ದವಾದ ಬಾವಿಯಂತಿದೆ. ನೋಡಲು ಕೆರೆಯಂತೆ ಕಾಣಿಸುವುದು. ಇದರ ನಾಲ್ಕು ಭಾಗದಲ್ಲಿ ಇಳಿಯುವುದರ ಸಲುವಾಗಿ ಪಾವಟಿಗೆಗಳನ್ನು ಮಾಡಿದ್ದಾರೆ. ಅಲ್ಲದೆ ಸದಾ ೧೨ ತಿಂಗಳು ನೀರಿನ ವ್ಯವಸ್ಥೆ ಇರುವಂತೆ ಮಾಡಿದ್ದಾರೆ. ೬೬೪ ಅಡಿ ಉದ್ದ, ೧೧೩ ಅಡಿ ಅಗಲ, ೨೪ ಅಡಿ ಆಳವಿದೆ. ಕೋಟೆ ಹೊರಗಿನ ಮಳೆನೀರು ಈ ಹೊಕ್ರಾಣಿಯಲ್ಲಿ ಸಂಗ್ರಹವಾಗುವಂತೆ ನಿರ್ಮಿಸಿದ್ದಾರೆ.

**೫.೭. ಕಟ್ಟಡಗಳು**

ಲಿಂಗಸೂಗೂರಿನಲ್ಲಿ ನಿಜಾಮ ವ್ಯಾಸ್ತುಶೈಲಿಯಲ್ಲಿ ಕಟ್ಟಡಗಳು ತಮ್ಮದೇ ಆದ ಇತಿಹಾಸದ ವೈಶಿಷ್ಟ್ಯವನ್ನು ಸಾರುತ್ತವೆ. ಅವುಗಳಲ್ಲಿ ೧೦೧ ಬಾಗಿಲಿನ ತಹಶೀಲು ಹಾಗೂ ಸಹಾಯಕ ಆಯುಕ್ತರ ಕಾರ್ಯಾಲಯ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಸಹಾಯಕ ಆಯುಕ್ತರ ಮನೆ, ಸರಕಾರಿ ಕಟ್ಟಡ, ನಿರೀಕ್ಷಣ ಮಂದಿರ, ಬಳ್ಳಾರಿ ಚನ್ನಬಸವೇಶ್ವರ ಪದವಿ ಕಾಲೇಜು, ಅರಣ್ಯ ಇಲಾಖೆಯ ಅಧಿಕಾರಿಗಳ ಕಾರ್ಯಾಲಯಗಳಿವೆ. ಇವುಗಳಲ್ಲಿ ಕೆಲವು ನವೀಕರಣಗೊಂಡಿವೆ. ಇದರಿಂದಾಗಿ ತಮ್ಮ ಮುಲ ಸ್ವರೂಪವನ್ನು ಕಳೆದುಕೊಳ್ಳುತ್ತಿರುವುದು ಕಂಡುಬಂದಿದೆ. ಅಂತಹ ಐತಿಹಾಸಿಕ ಹಿನ್ನೆಲೆಯುಳ್ಳ ಕಟ್ಟಡಗಳು ಈ ಕೆಳಗಿನಂತಿವೆ.

**೧. ಗಜಶಾಲೆ ಕಟ್ಟಡ**

ಈ ಕಟ್ಟಡವು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ. ಅಂತರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಇದು ಕೋಟೆಯ ಒಳಭಾಗದಲ್ಲಿದೆ. ಕೋಟೆಯ ಒಳಗೆ ಮುಳ್ಳಗಸಿಯಿಂದ ಪ್ರವೇಶ ಮಾಡಿದರೆ ನಮಗೆ ಕಾಣಿಸುವುದು ಬಹಳ ಎತ್ತರವಾದ ಕಟ್ಟಡ. ಇದಕ್ಕೆ ಗಜಶಾಲೆ ಎಂತಲೂ ಕರೆಯುತ್ತಾರೆ. ಈಗ ಸದ್ಯ ಈ ಕಟ್ಟಡದಲ್ಲಿ ಹೆಣ್ಣು

ಮಕ್ಕಳ ಪ್ರಾಥಮಿಕ ಶಾಲೆಯನ್ನು ನಡೆಸುತ್ತಿದ್ದಾರೆ. ಈ ಕಟ್ಟಡದಲ್ಲಿ ಮೊದಲು ಆನೆಗಳನ್ನು ಕಟ್ಟುತ್ತಿದ್ದರೆಂದು ತಿಳಿದುಬಂದಿದೆ.

**೨. ಜೈಲ್ ಕ್ವಾರ್ಟರ್ಸ್ ಪಕ್ಕದಲ್ಲಿನ ಹಳೆಯ ಕಟ್ಟಡ**

ಈ ಕಟ್ಟಡವು ಲಿಂಗಸೂಗೂರು ತಾಲೂಕಿನ ಜೈಲ್ ಕ್ವಾರ್ಟರ್ಸ್ ಪಕ್ಕದಲ್ಲಿರುವ ಹಳೆಯ ಕಟ್ಟಡವಾಗಿದೆ. ಅಂದಿನ ಕಾಲಘಟ್ಟದಲ್ಲಿ ನ್ಯಾಯಾಧೀಶರ ಮನೆಯಾಗಿತ್ತೆಂದು ಕಂಡುಬಂದಿದೆ. ಇಲ್ಲಿರುವ ಕಟ್ಟಡವನ್ನು ಇಟ್ಟಿಗೆ, ಗಾರೆಯಿಂದ ಕಟ್ಟಲ್ಪಟ್ಟಿದೆ. ಸಾಗುವಾನಿ ಕಟ್ಟಿಗೆಯನ್ನು ತುಂಡು ತೊಲೆಯನ್ನು ಬಳಸಿ ಕಟ್ಟಲಾಗಿದೆ. ಬಾಗಿಲು, ಕಿಟಕಿಗಳಿಗಾಗಿ ಇದೇ ಕಟ್ಟಿಗೆಯನ್ನು ಉಪಯೋಗಿಸಲಾಗಿದೆ. ಆದರೆ ಇಂದು ಸಂಪೂರ್ಣವಾಗಿ ಬಿದ್ದು ಹೋಗಿದ್ದು ಗುರುತು ಸಿಗದಂತಾಗಿ ಕಾಣಿಸುತ್ತದೆ.

**೩. ಹಳೆಯ ವಿ.ಸಿ.ಬಿ. ಕಾಲೇಜು ಕಟ್ಟಡ**

ಈ ಕಟ್ಟಡವು ಲಿಂಗಸೂಗೂರು ತಾಲೂಕಿನ ಕೆ.ಎಸ್.ಆರ್.ಟಿ.ಸಿ. ಬಸ್ ಡಿಪೋ ಹತ್ತಿರದಲ್ಲಿ ಇದೆ. ಅಂದಿನ ಕಾಲಘಟ್ಟದಲ್ಲಿ ಅಹಾರ ಸಂಗ್ರಹಣೆಯ ಸ್ಥಳವಾಗಿತ್ತು. ಇದರ ಪಕ್ಕದಲ್ಲಿ ವಿವಿಧ ಅಧಿಕಾರಿಗಳ ವಾಸಸ್ಥಳಗಳು ಇದ್ದುದು ತಿಳಿದುಬರುತ್ತದೆ. ಈ ಕಟ್ಟಡವು ಅಂದು ಕೃಷಿ ಭೂಮಿಯಲ್ಲಿ ಬೆಳೆದ ದವಸ ಧಾನ್ಯಗಳನ್ನು ಶೇಖರಿಸಿಡುವ ಸಂಗ್ರಹಣ ಮಳಿಗೆ ಆಗಿತ್ತು. ಜೊತೆಗೆ ಅದರ ಆವರಣದ ಸ್ಥಳದಲ್ಲಿಯೂ ಕೃಷಿಯ ಪ್ರಾಯೋಗಿಕತೆ ನಡೆದಿತ್ತು. ಈಗಲೂ ನೋಡಲು ಆ ಸ್ಥಳದಲ್ಲಿ ಬಾವಿ ಹಾಗೂ ನೀರನ್ನು ಸೇರಿ ಹಾಕಲು ತೊಟ್ಟಿಗಳನ್ನು, ನೀರು ಬೆಳೆಗಳಿಗೆ ಹೋಗಲು ಮಾಡಿರುವ ಕಾಲುವೆಗಳನ್ನು ನೋಡಬಹುದಾಗಿದೆ.

**೪. ಅಧಿಕಾರಿಗಳ ಸ್ಪೋರ್ಟ್ಸ್ ಕ್ಲಬ್**

ಈ ಕಟ್ಟಡವು ಲಿಂಗಸೂಗೂರು ಪಟ್ಟಣದ ಪೂರ್ವ ದಿಕ್ಕಿನಲ್ಲಿದೆ. ಇದು ಅಂದು ಬ್ರಿಟಿಷ್ ಅಧಿಕಾರಿಗಳ ಕ್ಲಬ್ ಆಗಿತ್ತು. ಕೆಲವು ಅಧಿಕಾರಿಗಳು ಈ ಸ್ಪೋರ್ಟ್ಸ್ ಕ್ಲಬ್‌ಗೆ ಬರುವುದರ ಮೂಲಕ ವಿಶ್ರಾಂತಿಯನ್ನು ಪಡೆಯುತ್ತಿದ್ದರು. ಬ್ರಿಟಿಷರ ಕಾಲಘಟ್ಟದಲ್ಲಿ ನಿರ್ಮಿಸಿದ ಈ ಕಟ್ಟಡ ಇಂದು ಅವಸಾನದ ಅಂಚಿನಲ್ಲಿದೆ. ಈ ಕಟ್ಟಡಕ್ಕೆ ಸುಮಾರು ೧೩೫ಕ್ಕೂ ಅಧಿಕ ವರ್ಷಗಳ ಇತಿಹಾಸವಿದೆ. ಬ್ರಿಟಿಷರ ಆಡಳಿತದಲ್ಲಿ ಈಗಿನ ಲಿಂಗಸೂಗೂರು ಅಂದು ಛಾವಣಿ ಎಂದು ಕರೆಯಲಾಗುತ್ತಿತ್ತು. ಆ ಛಾವಣಿ ಸೈನಿಕರ ನೆಲೆಯಾಗಿತ್ತು. ಅಂದಿನ ಆಡಳಿತದಲ್ಲಿ ನಿರ್ಮಿಸಿದ ಕಟ್ಟಡಗಳಲ್ಲಿ ಕೆಲವು ಇಂದಿಗೂ ಗಟ್ಟಿಮುಟ್ಟಾಗಿವೆ. ಇನ್ನೂ ಕೆಲವು ಶಿಥಿಲಾವಸ್ಥೆ ತಲುಪಿವೆ. ಅವುಗಳಲ್ಲಿ ಸ್ಪೋರ್ಟ್ಸ್ ಕ್ಲಬ್ ಕೂಡ ಒಂದು.

ಅಂದು ಕರಡಕಲ್ ಕೆರೆ ಸುಮಾರು ೩೧೫ ಎಕ್ಕರೆ ವಿಶಾಲವಾದ ಪ್ರದೇಶವಾಗಿತ್ತು. ಇದರ ದಡದಲ್ಲಿ ಬ್ರಿಟಿಷ್ ಅಧಿಕಾರಿಗಳು ಮನರಂಜನೆಗಾಗಿ ಸ್ಪೋಟ್ಸ್ ಕ್ಲಬ್ ನಿರ್ಮಿಸಿದ್ದರು. ಈಗಲೂ ಇದನ್ನು ಸ್ಪೋಟ್ಸ್ ಕ್ಲಬ್‌ನ್ನಾಗಿ ಬಳಕೆ ಮಾಡಲಾಗುತ್ತಿದೆ. ಇದರ ಆವರಣದಲ್ಲಿ ಟೆನ್ನಿಸ್ ಕೋರ್ಟ್ ಇದ್ದು ಪಟ್ಟಣದ ಗಣ್ಯರು, ಕೆಲ ಅಧಿಕಾರಿಗಳು ಇಲ್ಲಿ ನಿತ್ಯವೂ ಟೆನ್ನಿಸ್ ಆಡುತ್ತಾರೆ. ಆಗಾಗ ಪಂದ್ಯಾವಳಿ ಏರ್ಪಡಿಸುತ್ತಾರೆ. ಇಂದು ಕಟ್ಟಡವು ಸಂಪೂರ್ಣವಾಗಿ ಶಿಥಿಲವಾಗಿದೆ. ಕಟ್ಟಡ ಯಾವಾಗ ಕುಸಿದು ಬೀಳುತ್ತದೆ ಎಂಬುದು ಹೇಳತೀರದಾಗಿದೆ. ಕಟ್ಟಡದ ಕಂಪೌಂಡ್ ಕೂಡಾ ಅಲ್ಲಲ್ಲಿ ಕುಸಿದಿದ್ದು ಕಂಡುಬರುತ್ತದೆ. ಐತಿಹಾಸಿಕ ಹಿನ್ನೆಲೆ ಹೊಂದಿರುವ ಕಟ್ಟಡ ಇಂದು ನಿರ್ವಹಣೆಯ ಕೊರತೆಯಿಂದಾಗಿ ಅವಸಾನದಂಚಿಗೆ ತಲುಪಿದೆ. ಅಲ್ಲಿನ ಸಹಾಯಕ ಆಯುಕ್ತರು ದುರಸ್ಥಿ ಮಾಡುವುದಾಗಿ ಭರವಸೆ ಕೊಟ್ಟಿದ್ದಾರೆ. ಅವರು ಮಾತಿನಲ್ಲಿ ಹೇಳಿರುವ ಹೇಳಿಕೆ ಏನೆಂದರೆ ಎಸಿಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ಒಮ್ಮೆ ಕ್ಲಬ್‌ಗೆ ಭೇಟಿ ನೀಡಿ ಪರಿಶೀಲನೆ ನಡೆಸಿದ್ದೇನೆ. ಆದರೆ ಬೈಲಾದಲ್ಲಿ ಸ್ವಲ್ಪ ಗೊಂದಲವಿದೆ. ಅದನ್ನು ಸರಿಪಡಿಸಿಕೊಂಡು ಕಟ್ಟಡ ದುರಸ್ಥಿಗೆ ಕ್ರಿಯಾ ಯೋಜನೆ ರೂಪಿಸಲಾಗುವುದು ಎಂದು ಹೇಳಿಕೆಯನ್ನು ಕೊಟ್ಟಿದ್ದಾರೆ.[೨೦]

**೫. ಮೂಲ ಶಿಕ್ಷಣದ ಪ್ರಯೋಗ ಶಾಲೆ "ಸರಕಾರಿ ತೋಟ"**

೧೯೩೧ರಲ್ಲಿ ಗಾಂಧೀಜಿಯವರ ಮೂಲ ಶಿಕ್ಷಣವನ್ನು ಅನೇಕ ಪ್ರಾಂತೀಯ ಸರಕಾರಗಳು ಅಸ್ತಿತ್ವಗೊಳಿಸಿದವು. ಹೈದರಾಬಾದ್ ನಿಜಾಮ ಸರಕಾರವು ಲಿಂಗಸೂಗೂರಿನ ಸರಕಾರಿ ತೋಟದಲ್ಲಿ ಮೂಲ ಶಿಕ್ಷಣದ ತತ್ವದಂತೆ, ಕೃಷಿಯ ಪ್ರಾಯೋಗಿಕ ಪಾಠ ಆರಂಭಿಸಿದರು. ಈ ತೋಟದ ವಿಸ್ತೀರ್ಣ ಸುಮಾರು ೫೦ ಎಕರೆ ಇದೆ. ಇಲ್ಲಿ ಸ್ವತಃ ವಿದ್ಯಾರ್ಥಿಗಳಿಗೆ ಕೃಷಿ ಆಧಾರಿತ ಪಾಠವನ್ನು ಆರಂಭಿಸಿ ಅವರು ಬೆಳೆದ ಬೆಳೆಗಳಿಂದಲೇ ಅವರ ಶೈಕ್ಷಣಿಕ ವೆಚ್ಚವನ್ನು ಭರಿಸುವಂತೆ ಮಾರ್ಪಾಡು ಮಾಡಿದ್ದರು.[೨೧]

**೬. ನಿಜಾಮ ಶೈಲಿಯ ನಿರೀಕ್ಷಣ ಮಂದಿರ**

ಈ ನಿರೀಕ್ಷಣ ಮಂದಿರವು ಲಿಂಗಸೂಗೂರು ಪಟ್ಟಣದ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದ ಎದುರುಗಡೆ ಇರುವುದು. ಈ ಕಟ್ಟಡವು ಬೃಹತ್ ಸಮುಚ್ಚಯವಾಗಿದೆ. ಇಲ್ಲಿ ಬ್ರಿಟಿಷರು ಮತ್ತು ನಿಜಾಮ ಸೈನಿಕರ ತುಕಡಿಗಳು ಮತ್ತು ಅಧಿಕಾರಿಗಳು ವಾಸ ಮಾಡುತ್ತಿದ್ದರು. ಈ ಕಟ್ಟಡದಲ್ಲಿ ಭವ್ಯವಾದ ಅತಿಥಿ ಗೃಹಗಳು, ದರ್ಬಾರ್ ಹಾಲ್, ಅಡುಗೆ ಮನೆ, ಭೋಜನ ಗೃಹಗಳು ಹೊಂದಿದೆ. ಇಲ್ಲಿ ರಾಣಿಯರ ಪರಿವಾರಕ್ಕೆ ಪ್ರತ್ಯೇಕ ವ್ಯವಸ್ಥೆ

ಮಾಡಲಾಗಿತ್ತು. ಇಲ್ಲಿ ಆಹಾರ ಸಂಗ್ರಹಣಾ ಕೋಣೆ ಇದ್ದವು. ಈಗೆ ಕಟ್ಟಡಗಳನ್ನು ಅಂದು ಬಳಕೆ ಮಾಡಲಾಗುತ್ತಿತ್ತು.[೨೩]

**೨. ನೂರೊಂದು ಬಾಗಿಲುಗಳ ಬಂಗಲೆ**

ಇಂದು ಲಿಂಗಸೂಗೂರು ತಾಲೂಕಿನಲ್ಲಿರುವ ನೂರೊಂದು ಬಾಗಿಲುಗಳ ಕಚೇರಿ ಸಂಕೀರ್ಣದ ಕಟ್ಟಡದ ನಿರ್ಮಾಣದ ಹಿಂದಿರುವ ರೋಚಕ ಕಥೆ ಇದೆ. ಈಗ ಈ ಕಛೇರಿ ಇರುವ ಸ್ಥಳವು ಹಿಂದೆ ಆಗಿನ ಕಾಲಘಟ್ಟದಲ್ಲಿ ಗೋಮಾಳವಾಗಿತ್ತು. ಅಲ್ಲಿ ದನ ಕಾಯುವ ಹುಡುಗರು ಅಲ್ಲಿರುವ ಬೇವಿನ ಗಿಡಗಳ ನೆರಳಿನಲ್ಲಿ ಆಟವಾಡುತ್ತಿದ್ದರು. ಅವರಾಡಿದ ಆಟ ಕಳ್ಳ–ಪೊಲೀಸ್. ಆ ಬಾಲಕರಲ್ಲಿ ಒಬ್ಬನು ಕಳ್ಳನಾಗಿದ್ದ. ಕೆಲವರು ಪೊಲೀಸರಾದರು. ಒಬ್ಬನು ನ್ಯಾಯಧೀಶನಾಗಿದ್ದನು. ಆಟದಲ್ಲಿ ಕಳುವು ಮಾಡುವಾಗ ಕೊಲೆಯನ್ನು ಮಾಡುತ್ತಾನೆ. ಅಲ್ಲಿರುವ ಕಳ್ಳನ ಪಾತ್ರಧಾರಿ ಈಗ ಕೇಸಿನ ವಿಚಾರಣೆಗೆ ನ್ಯಾಯಧೀಶರ ಹತ್ತಿರ ಬರುತ್ತಾನೆ. ನ್ಯಾಯಾಧೀಶನಾದ ಬಾಲಕ ಎಲ್ಲಾ ವಿವರವನ್ನು ತಿಳಿದುಕೊಂಡು ವಿಚಾರಣೆ ಮಾಡಿ ಕಳ್ಳನಿಗೆ ಮರಣದಂಡನೆ ಶಿಕ್ಷೆಯನ್ನು ಕೊಡುತ್ತಾನೆ. ಪೊಲೀಸರು ಅವನ ಕುತ್ತಿಗೆಗೆ ಹಗ್ಗ ಹಾಕಿ ಗಿಡಕ್ಕೆ ನೇಣು ಹಾಕುತ್ತಾರೆ. ಅದರೆ ಆ ನೇಣು ನಿಜವಾಗಿಯೂ ಬಿಗಿದುಕೊಂಡು ಕಳ್ಳನ ಪಾತ್ರಧಾರಿ ಬಾಲಕ ಸಾಯುತ್ತಾನೆ. ಈ ವಿಷಯ ರಾಜರಿಗೆ ಗೊತ್ತಾಗಿ ಆ ಸ್ಥಳದಲ್ಲಿಯೇ ಕಛೇರಿಗಳನ್ನು ನಿರ್ಮಿಸುತ್ತಾರೆ.[೨೪]

ನೂರೊಂದು ಬಾಗಿಲಿನ ಕಟ್ಟಡದಲ್ಲಿ ಗಾರೆ ಇಟ್ಟಿಗೆಗಳಿಂದ ಈ ಕಟ್ಟಡ ನಿರ್ಮಿಸಿದ್ದು ಕಾಣುತ್ತದೆ. ಇದೊಂದು ಬೃಹತ್ ಕಟ್ಟಡಗಳ ಬಂಗಲೆಯಾಗಿದ್ದು ಬೇಸಿಗೆಯಲ್ಲಿ ತಂಪಾಗಿರುತ್ತದೆ. ಇದರ ವಿಶೇಷತೆ ಏನೆಂದರೆ ಯಾವ ಬಾಗಿಲಿನಿಂದ ಪ್ರವೇಶ ಮಾಡಿದರೂ ಇಡೀ ಬಿಲ್ಡಿಂಗಿನ ಎಲ್ಲಾ ಭಾಗಗಳನ್ನು ತಲುಪಬಹುದಾಗಿದೆ. ಈ ಕಟ್ಟಡದ ಬಾಗಿಲುಗಳಿಗೆ ಬರ್ಮಾ ದೇಶದ ತೇಗವನ್ನು ಬಳಸಿ ಕಟ್ಟಲಾಗಿದೆ. ಇಲ್ಲಿರುವ ಕಿಟಕಿಗಳನ್ನು ಸಾಗುವಾನಿಯಿಂದ ಮಾಡಲಾಗಿದೆ. ೨೨ ಅಡಿ ಎತ್ತರ ಅಳತೆಯನ್ನು ಹೊಂದಿದೆ. ಇದು ರಾಯಚೂರಿನ ಸಾಥ್ ಕಚೇರಿಯ ಮಾದರಿಯಲ್ಲಿ ನಿರ್ಮಿಸಲಾಗಿದೆ. ೧೫೦ ವರ್ಷ ಹಳೆಯದಾದ ಈ ಕಟ್ಟಡ ಇಂದೂ ಕೂಡ ಸಾಕಷ್ಟು ಸುಭದ್ರವಾಗಿದೆ. ಮೇಲ್ಚಾವಣಿಯ ಎತ್ತರ ೨ವರೆ ಅಡಿ ಇದ್ದು ಬಿಸಿಲಿನ ಝಳದಿಂದ ಉತ್ತಮ ರಕ್ಷಣೆಯನ್ನು ನೀಡುವಂತಿದೆ. ಬೇಸಿಗೆಯ ಕಾಲದಲ್ಲಿ ಹವಾನಿಯಂತ್ರಣ ಹೊಂದಿದ ಅನುಭವ ಉಂಟಾಗುತ್ತದೆ. ಅಂದಿನ ಕಾಲದಲ್ಲಿ ಈ ಬೃಹತ್ ಕಟ್ಟಡ ನಿರ್ಮಾಣಕ್ಕೆ ತಗುಲಿದ ಬರೋಬರಿ ವೆಚ್ಚ ಕೇವಲ ೫೨೮೧೦ ಆಗಿದೆ ಎಂದು ತಿಳಿದುಕೊಳ್ಳಬಹುದು.

**ಜೈಲು ಕಟ್ಟಡ**

ಪ್ರಸ್ತುತವಾಗಿ ಲಿಂಗಸೂಗೂರು ಪಟ್ಟಣದಲ್ಲಿ ಕಾರಾಗೃಹ ಇದಾಗಿದ್ದು, ೧೯೪೭ ಆಗಸ್ಟ್ ೧೫ರ ನಂತರ ನಡೆದ ಸ್ವಾತಂತ್ರ್ಯ ಸಂದರ್ಭದಲ್ಲಿ ಕುಷ್ಟಗಿ, ಕೊಪ್ಪಳ ಭಾಗದ ಸ್ವಾತಂತ್ರ್ಯ ಹೋರಾಟಗಾರರನ್ನು ಇದೇ ಜೈಲಿನಲ್ಲಿ ಇಡಲಾಗಿತ್ತು ಎಂದು ತಿಳಿದುಬರುತ್ತದೆ. ಆಗಿನ ಸಂದರ್ಭದಲ್ಲಿ ಅವರನ್ನು ಬಹಿರ್ದೆಸೆಗಾಗಿ ಮತ್ತು ನೀರು ಕುಡಿಸಲು ಕೆರೆಯ ಕಡೆ ಕರೆದುಕೊಂಡು ಹೋಗಲಾಗುತ್ತಿತ್ತು ಎಂದು ತಿಳಿದುಬರುತ್ತದೆ.

**ಗುಡಗುಂಟ ಕೋಟೆಯ ಒಳಗಡೆ ಇರುವ "ಅರಮನೆ" ಕಟ್ಟಡ**

ಗುಡಗುಂಟಿಯು ಲಿಂಗಸೂಗೂರಿನಿಂದ ಕಲಬುರ್ಗಿಗೆ ಹೋಗುವ ರಾಜಮಾರ್ಗದಲ್ಲಿದೆ. ಲಿಂಗಸೂಗೂರಿನಿಂದ ೧೯ ಕಿ.ಮೀ. ಅಂತರದಲ್ಲಿದೆ. ಕೋಟೆಯ ಉತ್ತರ ದ್ವಾರಕ್ಕೆ ಕಚೇರಿ ಅಗಸಿ ಎನ್ನುತ್ತಾರೆ. ಗಾರೆಯಿಂದ ಕಟ್ಟಿದ ಇಲ್ಲಿನ ಅರಮನೆ ಬೇಸಿಗೆಯಲ್ಲೂ ತುಂಬಾ ತಂಪಾಗಿರುತ್ತದೆ. ಅರಮನೆ ಆವರಣಕ್ಕೆ ಪೂರ್ವ, ಪಶ್ಚಿಮ ಮತ್ತು ಉತ್ತರಕ್ಕೆ ಮಹಾದ್ವಾರಗಳಿವೆ. ಇಲ್ಲಿಯ ಸಮಗ್ರ ಕಟ್ಟಡಕ್ಕೆ ತೇಗದ ಕಟ್ಟಿಗೆಯನ್ನು ಬಳಸಲಾಗಿದೆ. ಇಲ್ಲಿಯ ಕಟ್ಟಿಗೆಯಲ್ಲಿ ಕೆತ್ತಿದ ನಾಜೂಕಿನ ಕೆಲಸ ತುಂಬಾ ಸೊಗಸಾಗಿದೆ. ಅರಮನೆಯಲ್ಲಿರುವ ರಂಗಮಹಲ್ ಮತ್ತು ದರ್ಬಾರ್ ಹಾಲ್‌ಗಳು ತುಂಬಾ ಸೊಗಸಾಗಿ ಕಾಣುತ್ತವೆ.

**೫.೮. ಕೆರೆಗಳು**

ಹರಿಯುವ ನೀರಿಗೆ ಒಡ್ಡು ನಿರ್ಮಿಸಿ ನೀರನ್ನು ಶೇಖರಿಸಿಡುವ ಚಿಕ್ಕ ಜಲಾಶಯವೇ ಕೆರೆ. ನೀರಿಗಾಗಿ ಮನುಷ್ಯ ಕಂಡುಕೊಂಡ ಕೃತಕ ಸಾಧನ. ಹಿಂದಿನ ಕಾಲಘಟ್ಟದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರತಿ ಮೂರು ಹಳ್ಳಿಗೆ ಎರಡು ಕೆರೆಗಳು ಇದ್ದವು.ಇದರಿಂದಾಗಿ ನಮ್ಮ ಪೂರ್ವಜರು ಕೆರೆ ನೀರಾವರಿಗಾಗಿ ಕೊಟ್ಟ ಪ್ರಾಮುಖ್ಯತೆಯನ್ನು ಬಿಂಬಿಸುತ್ತದೆ.

ಕೆರೆಗಳ ಇತಿಹಾಸವನ್ನು ಅವಲೋಕಿಸಿದಾಗ ಪ್ರಾಚೀನ ಭಾರತದಲ್ಲಿ ಸುದರ್ಶನ ಕೆರೆಯ ಬಗ್ಗೆ ತನ್ನದೇ ಆದ ಇತಿಹಾಸವನ್ನು ಹೊಂದಿದೆ. ಅದರ ಹಿನ್ನೆಲೆಯನ್ನು ಗಮನಿಸಿದಾಗ, ಈ ಕೆರೆಯನ್ನು ರುದ್ರದಾಮನ್‌ನು ಕಟ್ಟಿಸಿದನೆಂದು ಸಂಸ್ಕೃತ ಶಾಸನದಲ್ಲಿ ಉಲ್ಲೇಖವಾಗಿದೆ. ಸುದರ್ಶನ ಕೆರೆಯನ್ನು ಚಂದ್ರಗುಪ್ತ ಮೌರ್ಯನ ರಾಜ್ಯಪಾಲ ಪುಷ್ಯಗುಪ್ತನು ಕೆರೆಯನ್ನು ಕಟ್ಟಿಸಿದನು.ನಂತರ ರುದ್ರದಾಮನ್‌ನ ಕಾಲದಲ್ಲಿ ಕೆರೆಯ ಬಲದಂಡೆ ಹೊಡೆದು ಹೋದಾಗ ಸ್ವಂತ ಹಣದಿಂದ ಪ್ರಜೆಗಳ ಅಭಿಪ್ರಾಯದಿಂದ ಕೆರೆಯ ಬಲದಂಡೆಯನ್ನು ನಿರ್ಮಿಸಿದ. ನಂತರ ಯಾವನ ರಾಜ್ಯ ತುಷ್ಯಪ ನಾಲೆಯನ್ನು ನಿರ್ಮಿಸಿದನು. ಸ್ಕಂದಗುಪ್ತನ ಕಾಲದಲ್ಲಿ ಚಕ್ರಪಾಲಿತನು ಬಲದಂಡೆಯನ್ನು ಕಟ್ಟಿಸಿದನು.

ಕದಂಬರ ಅರಸರಲ್ಲಿ ಪ್ರಖ್ಯಾತಿ ಹೊಂದಿದ ಮಯೂರ ಶರ್ಮನ ಆಳ್ವಿಕೆ ಕಾಲದಲ್ಲಿ ಚಂದ್ರವಳ್ಳಿ ಕೆರೆಯನ್ನು ಕಟ್ಟಿಸಿದ್ದಾನೆ.ಗಂಗರು,ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ, ವಿಜಯನಗರೋತ್ತರ ಕಾಲದಲ್ಲಿಯೂ ಹಲವಾರು ಕೆರೆಗಳು ನಿರ್ಮಾಣವಾದವು. ಆಗಿನ ಕಾಲದಲ್ಲಿ ಕೆರೆಯನ್ನು ಕಟ್ಟಿಸುವದು, ಬಾವಿಯನ್ನು ತೋಡಿಸುವುದು, ದೇವಾಲಯಗಳನ್ನು ನಿರ್ಮಿಸುವುದು ಪುಣ್ಯದ ಕೆಲಸವೆಂದು ಜನರ ನಂಬಿಕೆಯಾಗಿತ್ತು.

ಆಗಾಗಿ ಲಿಂಗಸೂಗೂರು ತಾಲ್ಲೂಕಿನಲ್ಲಿ ಪ್ರಸ್ತುತವಾಗಿ ೧೯ ಕೆರೆಗಳು ಇವೆ. ಅವುಗಳಲ್ಲಿ ಕೆಲವು ಸಣ್ಣ ನೀರಾವರಿ ಇಲಾಖೆಗೆ ಒಳಪಟ್ಟರೆ, ಉಳಿದ ೪ ಕೆರೆಗಳು ಜಿಲ್ಲಾ ಪಂಚಾಯಿತಿ ಇಲಾಖೆಗೆ ಒಳಪಡುತ್ತವೆ. ಈ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಕೆರೆಗಳಲ್ಲಿ ಕರಡಿಕಲ್, ಭೋಗಾಪುರ, ಮೆದಿಕಿನಾಳ, ಹುನಕುಂಟಿ, ಭೂಪುರ-ರಾಂಪೂರ, ಉಪ್ಪಾರ ನಂದಿಹಾಳ, ಜೂಲಗಡ್ಡ, ಹೀರೆನಗನೂರು, ಕನ್ನಾಪುರ ಹಟ್ಟಿ,ಮುದಗಲ್, ಮಾಚನೂರು, ಬುದ್ದಿನ್ನಿ ಕೆರೆಗಳು ಸೇರಿದಂತೆ ಅನೇಕ ಪ್ರದೇಶಗಳಲ್ಲಿ ನೀರು ಸಂಗ್ರಹ ಕೆರೆಗಳು ಸಾಕಷ್ಟಿವೆ. ಕೆಲವು ಕೆರೆಗಳು ಮಳೆಯ ನೀರನ್ನೇ ನೆಚ್ಚಿಕೊಂಡಿದ್ದರಿಂದ ಕೆರೆಗಳಲ್ಲಿ ನೀರು ಸಂಗ್ರಹಣೆಗೆ ತೊಂದರೆಯಾಗುತ್ತದೆ. ಕೆಲ ಕೆರೆಗಳು ಹೊಳು ತುಂಬಿರುವುದರಿಂದ ನೀರಿನ ಸಂಗ್ರಹ ಕಡಿಮೆಯಾಗಿರುವುದು ಕಂಡು ಬರುತ್ತದೆ. ಅಂತಹ ಕೆರೆಗಳು ಈ ಕೆಳಗಿನಂತಿವೆ.

**ಕರಡಿಕಲ್ ಕೆರೆ**

ರಾಯಚೂರು ಜಿಲ್ಲೆಯ ಲಿಂಗಸೂಗೂರು ತಾಲ್ಲೂಕಿನ ಕರಡಿಕಲ್ ಕೆರೆ,ರಾಯಚೂರು ಜಿಲ್ಲೆಯಲ್ಲಿಯೇ ಅತ್ಯಂತ ದೊಡ್ಡ ಕೆರೆ ಎಂದು ಹೆಸರಾಗಿದೆ. ಈ ಕೆರೆಯು ಸು.೩೧೫ ಎಕರೆ ಎನ್ನಲಾಗಿದೆ. ಕರಡಿಕಲ್‌ನಲ್ಲಿ ಒಟ್ಟು ೩ಕೆರೆಗಳು ಇವೆ. ದೊಡ್ಡಕೆರೆ, ಚಿಕ್ಕಕೆರೆ. ಕೋಣಬಾವಿ ಕೆರೆಗಳು ತುಂಬಾ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಅವುಗಳಲ್ಲಿ ದೊಡ್ಡಕೆರೆಯು ಮೂರನೆಯ ಭಿಲ್ಲಮರಾಯನು ನಿರ್ಮಾಣ ಮಾಡಿದ್ದಾನೆ ಎಂದು ಹೇಳಲಾಗಿದೆ.ಹೈದರಾಬಾದ್ ನಿಜಾಮನ ಆಡಳಿತದಲ್ಲಿ ಬ್ರಿಟಿಷರಿಗೆ, ಸೈನಿಕರಿಗೆ ನೀರಿನ ಅನುಕೂಲಕ್ಕಾಗಿ ಕುದುರೆಗಳಿಗೆ ನೀರು ಒದಗಿಸಲು ಸಹಕಾರಿಯಾಗಿತ್ತು.ಈ ಕೆರೆಯನ್ನು ಹೈದರಾಬಾದ್ ನಿಜಾಮರು ಇನ್ನಷ್ಟು ದುರಸ್ತಿಗೊಳಿಸಿದರು. ಕೆರೆಯ ಪೂರ್ವದಿಕ್ಕಿಗೆ ಏರಿಯ ರಚನೆಯಿದ್ದು ದುಂಡನೆಯ ಕಲ್ಲು,ಗಚ್ಚು ಮಣ್ಣನ್ನು ಬಳಸಿ ಎರಿಯನ್ನ ನಿರ್ಮಿಸಿದ್ದಾರೆ. ಈ ಕೆರೆಗೆ ಐತಿಹಾಸಿಕ ಹಿನ್ನೆಲೆ, ಕಥೆಗಳು ಇವೆ. ಬಿಜ್ಜಮ್ಮ ಎಂಬ ದಲಿತ ಮಹಿಳೆ ಕೆರೆಗೆ ಹಾರವಾದ ಕಥೆಯೂ ಸತ್ಯವಾಗಿ ಕಾಣಿಸುತ್ತದೆ. ಜನಪದ ಸಾಹಿತ್ಯದ

ಪ್ರಕಾರ ಬಿಜ್ಜಮ್ಮ ಕೆರೆಗೆ ಹಾರವಾದದ್ದು ಸಾಕ್ಷಿ ಎಂಬುವಂತೆ ಕರಡಿಕಲ್ ಕೆರೆ, ಕೆರೆಯಲ್ಲಿರುವ ಬಿಜ್ಜಮ್ಮನ ಸಮಾಧಿ. ಇದರ ಬಗ್ಗೆ ಇನ್ನಷ್ಟು ಸಂಶೋಧನೆ ಹೊರಬರಬೇಕಾಗಿದೆ.

ಸಾರ್ವಜನಿಕರ ಕುಡಿವ ನೀರಿನ ಅನುಕೂಲಕ್ಕಾಗಿ ಶತಮಾನಗಳ ಹಿಂದೆ ನಿರ್ಮಾಣ ಮಾಡಿದ್ದ ಐತಿಹಾಸಿಕ ಕರಡಕಲ್ ಕೆರೆ ಈಗ ಪ್ರಭಾವಿಗಳ ಅಟಾಟೋಪಕ್ಕೆ ಬಲಿಯಾಗುತ್ತಿದೆ.ಕೆರೆಯ ಪ್ರದೇಶವನ್ನು ಒತ್ತುವರಿ ಮಾಡಿಕೊಳ್ಳಲಾಗುತ್ತಿದ್ದರೂ ಹೆಳೋರು ಕೇಳೋರು ಇಲ್ಲದಂತಾಗಿದೆ.

**ಕರಡಕಲ್ಲಿನ ಚಿಕ್ಕ ಕೆರೆ**

ಇದು ತಾಲ್ಲೂಕು ಕೇಂದ್ರದಿಂದ ಹಾಗೂ ಕರಡಿಕಲ್ಲಿ ನಿಂದಲು ಪಶ್ಚಿಮ ದಿಕ್ಕಿಗೆ ಇದೆ.ಇಲ್ಲಿರುವ ಚಿಕ್ಕ ಕೆರೆಯಲ್ಲಿ ಕುಣಿಸೋಮೇಶ್ವರ ದೇವಾಲಯ ಇದೆ. ೩ನೇ ಭಿಲ್ಲಮರಾಯ ರಾಜನ ಆರಾದ್ಯ ದೇವಾರಾಗಿತ್ತು. ಇಲ್ಲಿರುವ ಕೆರೆಗೆ ರಾಂಪುರ ಏತ ನೀರಾವರಿ ಕಾಲುವೆ ನೀರು ಕೆರೆಗೆ ಹರಿಸುವುದರಿಂದ ಕೆರೆಯಲ್ಲಿ ನೀರು ನಿಂತು ದೇವಾಲಯ ಹಾಗೂ ದೇವಾಲಯ ಸುತ್ತಲು ಆವೃತವಾಗಿದೆ. ೨೦೦೯ರಲ್ಲಿ ಕೆರೆ ಹೊಡೆದ ಸಂದರ್ಭದಲ್ಲಿ ಈ ದೇವಾಲಯವು ಅರ್ಧ ಮುಳುಗಡೆಯಾಗಿತ್ತು. ಗೋರೆಬಾಳು ತಾಂಡ, ಮೀಂಚೇರಿ, ಶೀಲಹಳ್ಳಿ, ಜಾಲಿಬೆಂಚಿ ಮೊದಲಾದ ಊರುಗಳಿಗೆ ಈ ಕೆರೆಯ ಏರಿಯ ಮೇಲಿರುವ ರಸ್ತೆಯ ಮೂಲಕ ಹಾದು ಹೋಗಬೇಕು. ಈ ಕೆರೆಯ ಏರಿಯು ಸುಮಾರು ೧ಕಿ.ಮೀ.ಗಳಷ್ಟು ಉದ್ದ ಇದ್ದು ನೀರಾವರಿ ಇಲಾಖೆಯವರು ಕೆರೆಯ ರಕ್ಷಣೆಯನ್ನು ಮಾಡುತ್ತಿದ್ದಾರೆ. ಈ ಕೆರೆಯು ಯಾದವರ(ಸೇವುಣರು) ಕಾಲದಲ್ಲಿ ಸಣ್ಣ ಕೆರೆಯಾಗಿದ್ದಿರಬೇಕು. ಈ ಕೆರೆಯನ್ನು ಸೇವುಣರ ಮನೆತನದ ದೊರೆಯಾದ ೩ನೇ ಭಿಲ್ಲಮನು ನಿರ್ಮಾಣ ಮಾಡಿದ್ದನು ಎಂದು ಹೇಳಲಾಗಿದೆ. ಈ ಕೆರೆಗೆ ಒಂದು ತೂಬು ಇದೆ.ಅದು ಸಂಪೂರ್ಣ ನಶಿಸಿಹೋಗಿದೆ. ಈ ಕೆರೆಯ ಏರಿಯ ಮೇಲಿರುವ ರಸ್ತೆಯ ಇಕ್ಕೆಲಗಳಲ್ಲಿ ದೊಡ್ಡಗಾತ್ರದ ೯ ಹುಣಚಿ ಮರಗಳಿವೆ.

**ಗುರುಗುಂಟಿ ಕೆರೆ**

ಇದು ಲಿಂಗಸೂಗೂರು ತಾಲ್ಲೂಕಿನಿಂದ ೧೯ಕಿ.ಮೀ.ಅಂತರದಲ್ಲಿದೆ. ಇಲ್ಲಿ ಗೋಸಲವಂಶದ ನಾಯಕರು ಆಳ್ವಿಕೆ ಮಾಡಿದ್ದಾರೆ. ಗಡ್ಡಿಲಿಂಗನಾಯಕ ಗುಡಗುಂಟಿ ಮನೆತನದ ಸ್ಥಾಪಕ.ಇಲ್ಲಿನ ಸಂಸ್ಥಾನದ ಮಂತ್ರಿ ಶ್ರೀನಿವಾಸರಾವ್ ಮುಜುಂದಾರ ಕೋಟೆಯ ಹೊರಭಾಗದಲ್ಲಿ ಸುಸಜ್ಜಿತ ಕೆರೆ ಕಟ್ಟಿಸಿದ್ದಾನೆ. ಈ ಕೆರೆಗೆ ಅಲ್ಲಿನ ಗ್ರಾಮಸ್ಥರು ಶೀನಣ್ಣನ ಕೆರೆ ಎಂದು ಕರೆಯುತ್ತಾರೆ. ಇದನ್ನು ಸುಮಾರು ೨೫ ಎಕರೆ ಪ್ರದೇಶದ ವಿಸ್ತಾರದಲ್ಲಿ ನಿರ್ಮಿಸಲಾಗಿದೆ. ೪೦೦ ಅಡಿ ಮೀಟರ್ ಉದ್ದ, ೩೦ ಅಡಿ ಎತ್ತರದಲ್ಲಿ ಸುಂದರವಾಗಿ ನಿರ್ಮಾಣವಾಗಿದೆ.

**ಹುನಕುಂಟಿ ಕೆರೆ**

ಇದು ಲಿಂಗಸೂಗೂರು ತಾಲ್ಲೂಕಿನಿಂದ ೭ ಕಿ.ಮೀ.ಅಂತರದಲ್ಲಿದೆ.ಈ ಕೆರೆಯು ಗ್ರಾಮದಿಂದ ಕಳ್ಳಿಲಿಂಗಸೂಗೂರು ಹಳ್ಳಿಗೆ ಹೋಗುವ ಮಾರ್ಗದಲ್ಲಿ ಬರುತ್ತದೆ. ಇದು ಇತ್ತೀಚಿಗೆ ನಿರ್ಮಾಣವಾದ ಕೆರೆಯಾಗಿದೆ. ಇಲ್ಲಿರುವ ಕೆರೆಗೆ ರಾಂಪುರ ಏತನೀರಾವರಿ ಕಾಲುವೆಯ ಮೂಲಕ ಹರಿದು ಬರುವ ನೀರನ್ನು ಕೆರೆಗೆ ತಿರುಗಿಸಲಾಗಿದೆ. ಕೆರೆಯ ಏರಿಯನ್ನು ವರಟಾದ ಕಲ್ಲ-ಗುಂಡುಗಳಿಂದ ನಿರ್ಮಿಸಲಾಗಿದೆ. ಕೆರೆಯ ರಕ್ಷಣೆ ಮತ್ತು ದೀರ್ಘಕಾಲ ಬಾಳಿಕೆಯ ದೃಷ್ಟಿಯಿಂದ ಈ ಏರಿಯನ್ನು ಅಂಕುಡೊಂಕಾಗಿ ರಚಿಸಲಾಗಿದೆ. ಇದರಿಂದಾಗಿ ನೀರಿನ ಒತ್ತಡ ಕೆರೆಯ ಏರಿಯಲ್ಲಿ ಅಂಚಿಹೋಗಿ ಏರಿಯು ಸುರಕ್ಷಿತವಾಗಿರುತ್ತದೆ. ಆಕಸ್ಮಿಕವಾಗಿ ಕೆರೆ-ಕಟ್ಟೆ ಹೊಡೆದರೂ ಏರಿಯ ಸಣ್ಣಭಾಗ ಮಾತ್ರವೇ ಒಡೆದು ದುರಸ್ತಿ ಕಾರ್ಯ ಸುಲಭವಾಗುತ್ತಿತ್ತು ಈ ರೀತಿಯ ತಂತ್ರ ಜ್ಞಾನವನ್ನು ಕೆರೆ ನಿರ್ಮಾಣದಲ್ಲಿ ಬಳಸಲಾಗಿದೆ.

**೫.೯. ಮಠಗಳು**

ಪ್ರಾಚೀನ ಕಾಲದಿಂದ ಕರ್ನಾಟಕದಲ್ಲಿ ಜ್ಞಾನ, ಭಕ್ತಿ, ನೀತಿ, ಧರ್ಮ ಹಾಗೂ ವೈರಾಗ್ಯಗಳಿಗೆ ಪ್ರಸಿದ್ಧಿ ಪಡೆದ ರಾಜ್ಯವಾಗಿದೆ. ಇಲ್ಲಿ ಧರ್ಮಕ್ಕೆ ಇರುವಷ್ಟು ಪ್ರಾಮುಖ್ಯತೆ ಬೇರೆ ಯಾವ ರಾಜ್ಯಗಳಲ್ಲಿಯೂ ಬಹುಶಃ ಇರಲಿಕ್ಕಿಲ್ಲ. ಇಂದಿನ ಮಠ, ಮಂದಿರಗಳು ಆಧ್ಯಾತ್ಮಿಕ ಶಕ್ತಿಯಿಂದ ಮನುಜರನ್ನು ಶುದ್ಧರಾಗಿ ಮಾಡುತ್ತ ತಮ್ಮ ಧರ್ಮವನ್ನು ಬೆಳಗುತ್ತ ಬಂದಿದ್ದು ಒಂದು ವಿಶೇಷವಾಗಿದೆ. ಇಲ್ಲಿನ ಬಹುತೇಕ ಮಠಗಳು ವೀರಶೈವ ಧರ್ಮವನ್ನು ಪ್ರಚಾರ ಮಾಡುತ್ತ ಬಂದಿರುವುದನ್ನು ಗಮನಿಸಬಹುದಾಗಿದೆ. ಹಿಂದೂ ಧರ್ಮದಲ್ಲಿ ಅನೇಕ ಶಾಖೆಗಳು ಇವೆ. ಪ್ರತಿಯೊಂದು ಶಾಖೆಗೂ ಗುರುಗಳು ಇದ್ದಾರೆ. ಅದೇ ರೀತಿ ಬೌದ್ಧ ಧರ್ಮ, ವೀರಶೈವಧರ್ಮ, ಸಿಖ್ ಧರ್ಮಗಳು ಅಸ್ತಿತ್ವದಲ್ಲಿವೆ. ಅವುಗಳು ತಮ್ಮದೇ ಆದ ತತ್ವ ಸಿದ್ಧಾಂತಗಳೊಂದಿಗೆ ಹಿಂದೂಧರ್ಮದೊಂದಿಗೆ ಬೆಳೆದುಬಂದಿವೆ. ಇಲ್ಲಿ ಕಂಡುಬರುವ ಎಲ್ಲಾ ಧರ್ಮಗಳು ಕೇಂದ್ರಗಳನ್ನು ಸ್ಥಾಪಿಸಿಕೊಂಡು ಧರ್ಮ ಪ್ರಚಾರವನ್ನು ಮಾಡುತ್ತಾ ಬಂದಿವೆ. ಧರ್ಮ ಪ್ರಚಾರಕರು ಅಥವಾ ಸನ್ಯಾಸಿಗಳು ನೆಲೆನಿಂತ ಕೇಂದ್ರಗಳೇ ಮಠಗಳಾಗಿ ಹೆಸರು ಪಡೆದಿವೆ.

ಸನ್ಯಾಸಿಗಳು ವಾಸಿಸುವ ಸ್ಥಳವನ್ನು ಸಾಮಾನ್ಯವಾಗಿ ಮಠಗಳೆಂದು ಕರೆಯುತ್ತೇವೆ. ಮಠ ಎಂದರೆ ಆಶ್ರಯ, ಇದೊಂದು ಧಾರ್ಮಿಕ ಕೇಂದ್ರವು ಹೌದು. ಆಧ್ಯಾತ್ಮಿಕ ಆಗರ,

ವಿದ್ಯಾಲಯ, ಹೀಗೆ ದೇವಾಲಯಗಳೆಂಬ ಮೊದಲಾದ ಅರ್ಥಗಳು ಹಳೆಯ ಕಾಲದಿಂದ ಬಂದಿದೆ. ಮಠ ಶಬ್ದವು ಮೂಲತಃ ಸಂಸ್ಕೃತದಲ್ಲಿ ಬಳಕೆಯಾಗಿದೆ. ಅಮರಕೋಶದ ಅರ್ಥದಲ್ಲಿ ಹೇಳಬೇಕಾದರೆ ಮಠ ಎಂದರೆ ಧರ್ಮಕ್ಷೇತ್ರ, ಇಲ್ಲವೆ ಪರೋಪಕಾರದ ಆಗರ. ಛತ್ರಾದಿ ನಿಲಯ ಎಂದು ಅಮರ ಸಿಂಹನು ನುಡಿಯುತ್ತಾನೆ.[೭೪] ಮ್ಯಾಂಡೂಸಲರು ಅವರು ಸಂಸ್ಕೃತ ಶಬ್ದಕೋಶದಲ್ಲಿ ಹೇಳಿರುವ "ಒಬ್ಬ ಸನ್ಯಾಸಿ ಇಲ್ಲವೇ ಅಭ್ಯರ್ಥಿಯ ಕುಟೀರ, ಒಂದು ಧಾರ್ಮಿಕ ಪಾಠಶಾಲೆ ಅಥವಾ ಮಹಾವಿದ್ಯಾಲಯ, ಮಠಾಧಿಪತಿಯೆಂದರೆ ಇಂತಹ ಧಾರ್ಮಿಕ ಸಂಸ್ಥೆಯ, ಇಲ್ಲವೆ ಪಾಠಶಾಲೆಯ ಮುಖ್ಯಸ್ಥ ಎಂಬ ಅರ್ಥವನ್ನು ಹೊಂದಿದೆ. ಮಠವೆಂದರೆ, ಧಾರ್ಮಿಕ ತತ್ವಗಳ ರಕ್ಷಣೆಯ ಕೇಂದ್ರ ಸ್ಥಳ ಹಾಗೂ ಧರ್ಮ ಸಂಘಟನೆಯ ಬುನಾದಿ, ಮನಸ್ಸನ್ನು ಏಕಾಗ್ರ ಚಿತ್ತದಲ್ಲಿಡುವ ಕ್ಷೇತ್ರ, ಅವಗುಣ ಹೋಗಲಾಡಿಸುವ ತಾಣ. ಸಮಾಜದಲ್ಲಿ ಸಮಾನತೆಯ ಭಾವ ಮೂಡಿಸುವ ಕೇಂದ್ರ ಸ್ಥಳವು ಹೌದು. ಈ ಮೊದಲು ಮಠಗಳಲ್ಲಿ ಸನ್ಯಾಸಿಗಳು, ಸಾಧುಗಳಾದವರು ಸಂಸಾರಿಕ ಜೀವನವನ್ನು ತ್ಯಾಗ ಮಾಡಿದ ವಿರಕ್ತರು. ತಮ್ಮ ನಿತ್ಯ ನೇಮ, ಆಚಾರ, ಜಪ, ತಪ, ಆಧ್ಯಾತ್ಮಿಕ ಚಿಂತನೆಗಳಿಗಾಗಿ ಪ್ರಶಾಂತ ಪವಿತ್ರವಾಗಿರುವ ಸ್ಥಳಗಳನ್ನು ಹುಡುಕಾಡಿ ನೇಮಕ ಮಾಡಿಕೊಳ್ಳುತ್ತಿದ್ದರು. ಆ ಸ್ಥಳಗಳಿಗೆ ಆಶ್ರಮ ಎಂಬ ಶಬ್ದವು ಉತ್ಪತ್ತಿಯಾಯಿತು. ಇಂತಹ ಆಶ್ರಮಗಳೇ ಮುಂದೆ ಕಾಲಾಂತರವಾಗಿ ಪರಿಣಮಿಸಿ ಮಠಗಳಾಗಿ ಪರಿವರ್ತನೆಗೊಂಡಿದ್ದವೆಂದು ಹೇಳಲಾಗಿದೆ. "ಮಠವೆಂದರೆ ವಿದ್ಯಯಾಗರ ಕೆಲವೊಂದು ಒಳ್ಳೆಯ ವಿಶ್ವವಿದ್ಯಾಲಯದಂತೆ ಇದ್ದು, ಅಲ್ಲಿ ಅಧ್ಯಯನ ಅಧ್ಯಾಪನ ಹಾಗೂ ಪ್ರಕಾರಗಳು ನಿರಂತರವಾಗಿ ನಡೆಯುತ್ತಿವೆ.[೭೫]

ಕರ್ನಾಟಕದಲ್ಲಿ ಕಲ್ಯಾಣದ ಕ್ರಾಂತಿಯಿಂದ ಅಲ್ಲಿದ್ದ ಶರಣರು ದಕ್ಷಿಣದ ಭಾಗಗಳಿಗೆ ಬಂದು ನೆಲೆಸಿದರು. ಇದರಿಂದಾಗಿ ಲಿಂಗಸೂಗೂರು ತಾಲೂಕಿನಲ್ಲಿ ೧೨ನೇ ಶತಮಾನದ ಬಸವಾದಿ ಶರಣರು ವಾಸಮಾಡುತ್ತಾ, ತಾವು ಇದ್ದ ಸ್ಥಳದಲ್ಲಿ ಮಠಕಟ್ಟಿ ಬೆಳೆಸಿದರು. ಅಲ್ಲದೇ ತಮ್ಮಲ್ಲಿದ್ದ ವಚನ ಸಾಹಿತ್ಯವನ್ನು ರಕ್ಷಣೆ ಮಾಡುವ ಸಲುವಾಗಿ ಗೌಪ್ಯವಾದ ಸ್ಥಳದಲ್ಲಿ ವಚನ ಸಾಹಿತ್ಯವನ್ನು ಮುಚ್ಚಿಟ್ಟರು. ಅಲ್ಲಿ ಕೇವಲ ವಚನ ಸಾಹಿತ್ಯ ರಕ್ಷಣೆ ಮಾಡುವ ಕೆಲಸ ಅಷ್ಟೇ ಮಾಡಲಿಲ್ಲ. ಅಲ್ಲಿನ ಜನರಲ್ಲಿದ್ದ ಮೂಢನಂಬಿಕೆಗಳನ್ನು, ರಾಜಪ್ರಭುತ್ವವನ್ನು ಕಡಿಮೆಗೊಳಿಸಲು ಹಾಗೂ ಜನರಲ್ಲಿ ನೈತಿಕರಾಗಿಸಲು ಪ್ರಯತ್ನಿಸಿದರು. ಅಷ್ಟೇ ಅಲ್ಲದೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳ ಕುರಿತು ಖಚಿತ ನಿರ್ಧಾರಕ್ಕೆ ಬಂದು ಅವುಗಳ ಪ್ರಚಾರ ಮಾಡಲು ಮಠಗಳನ್ನು ಹುಟ್ಟುಹಾಕಿದರು. ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯ ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಯಾದ ಮೇಲೆ ಪ್ರೌಢದೇವರಾಯನ ಕಾಲದಲ್ಲಿ

ಮಠಗಳಿಗೆ ಹೆಚ್ಚಿನ ಮಾನ್ಯತೆ ದೊರೆಯಿತು. ಇಮ್ಮಡಿ ದೇವರಾಯನ ಕಾಲದಲ್ಲಿ ಜಕ್ಕಣ್ಣ ಮತ್ತು ಲಕ್ಕಣ ದಂಡೇಶ ಎಂಬ ದಂಡನಾಯಕರು ಮಠಗಳ ಪುರುಜ್ಜೀವನ ಮಾಡಿದ್ದಾರೆ.

ತ್ರಿಭುವನಮಲ್ಲದೇವನು ಕಲ್ಯಾಣದಿಂದ ರಾಜ್ಯಭಾರ ಮಾಡುತ್ತಿದ್ದಾಗ ಆನೆಮಯೂರ ಮುಮೇಳಿಕೆಯ ಸಾಮ್ಯವನ್ನು ಬಿಟ್ಟಂತೆ ಹೇಳಿದೆ. ನಿಲ್ಲಿಜಿಗೆಯ ಚಂದ್ರಶೇಖರ ಶಕ್ತಿಯ ಶಿಷ್ಯನಾದ ಅಘೋರಶಕ್ತಿ ಪಂಡಿತನು "ಶ್ರೀ ಹುಳಿಯಮೇಶ್ವರ ದೇವರಮಠಕ್ಕೆ" ಹೊಲ ಮತ್ತು ಇತರೆ ದಾನವನ್ನು ಬಿಟ್ಟ ವಿಷಯವನ್ನು ಈ ಶಾಸನ ಒಳಗೊಂಡಿದೆ. ಇಲ್ಲಿ ಮಠ ಯಾವ ಊರಿನಲ್ಲಿತ್ತು ಎಂದು ತಿಳಿದಿಲ್ಲ. ಹಾಗಾಗಿ ಶಾಸನ ದೊರೆತ ಸ್ಥಳದಲ್ಲೇ ಮಠವಿತ್ತೆಂದು ತಿಳಿಯಬಹುದಾಗಿದೆ. ಸಿಂಧನೂರ ತಾಲೂಕಿನ ದೇವರಗುಡಿಯ ಶಾಸನಗಳಲ್ಲಿ ಮಾತ್ರ ಕಂಡುಬರುವ ಈ ಹುಳಿಯಮೇಶ್ವರ ಮಠದ ಉಲ್ಲೇಖ ಈಗ ಅನ್ವರಿಯಲ್ಲು ಸಿಕ್ಕಿರುವುದು ವಿಶೇಷವೆನಿಸಿದೆ. ಅನ್ವರಿಯಲ್ಲಿದ್ದ ಈ ಮಠಕ್ಕೆ ದಾನವನ್ನು ಬಿಟ್ಟವನು ದೇವದುರ್ಗ ತಾಲೂಕಿನ ನಿಲವಂಜಿ(ಶಾಸನದಲ್ಲಿನ ನಿಲ್ಲಜಿಗೆ) ಎಂಬ ಗ್ರಾಮದವನಾಗಿದ್ದಾನೆ. ಆ ಊರಿನಲ್ಲಿ ದೊರೆತಿರುವ ಒಂದು ಶಾಸನದಲ್ಲಿ ನಿಲ್ಲಜಿಗೆ ಎಂಬ ಹೆಸರೇ ಕಂಡುಬರುತ್ತದೆ. ಹೀಗಾಗಿ ಶಾಸನದಲ್ಲಿನ ಹುಳಿಮೇಶ್ವರ ಮಠಕ್ಕೂ ಮತ್ತು ನಿಲ್ಲಜಿಗೆಗೂ ಇರುವ ಸಂಬಂಧದ ಬಗ್ಗೆ ಹೆಚ್ಚಿನ ಶೋಧನೆಯಾಗಬೇಕಾಗಿದೆ.[೭೬] ಹೀಗೆ ಮಠಗಳು ಧರ್ಮಪ್ರಚಾರದೊಂದಿಗೆ ಜ್ಞಾನ ಪ್ರಸಾರವನ್ನು ಕೈಗೊಂಡು ಹಲವಾರು ಸಾಮಾಜಿಕ ಕಾರ್ಯವನ್ನು ನಿರ್ವಹಿಸುತ್ತಿವೆ. ಅವುಗಳಲ್ಲಿ ತಾಲೂಕಿನಲ್ಲಿ ಕಂಡುಬರುವ ಪ್ರಮುಖ ಮಠಗಳು ಈ ಕೆಳಗಿವೆ.

### ೧. ಅಂಕಲಗಿಮಠ

ಈ ಮಠವು ಲಿಂಗಸೂಗೂರು ತಾಲೂಕಿನಿಂದ ಮುದಗಲ್ಲ ಮಾರ್ಗವಾಗಿ ನೈಋತ್ಯಕ್ಕೆ ೩೦ ಕಿ.ಮೀ. ದೂರದಲ್ಲಿದೆ. ದೊಡ್ಡ ಹಳ್ಳದ ದಡದಲ್ಲಿ ಮಠವಿರುತ್ತದೆ. ಈ ಮಠವು ವಿಶಿಷ್ಟಾದ್ವೈತ ಸಿದ್ಧಾಂತದ ಹಿನ್ನೆಲೆಯ ತಳಹದಿಯ ಮೇಲೆ ರಚನೆಯಾಗಿದೆ. ಇದು ಮೂರು ಶತಮಾನಗಳ ಇತಿಹಾಸವನ್ನು ಹೊಂದಿದೆ. ಸುಕ್ಷೇತ್ರ ಅಂಕಲಗಿಮಠವಾಗಿದೆ. ಈ ಭಾಗದ ವಿವಿಧ ಭಕ್ತರಿಗೆ, ದೀನ-ದಲಿತರಿಗೆ ಬೆಳಕಾಗಿದೆ. ಬೆಳಗಾವಿ ಜಿಲ್ಲೆಯ ಅಂಕಲಗಿಯ ಅಡವಿ ಸಿದ್ದೇಶ್ವರ ಸ್ವಾಮಿಗಳ ಶಿಷ್ಯರಾದ ಶ್ರೀನಿರುಪಾಧೀಶ್ವರರು ಸಂಚರಿಸುತ್ತಾ ಬಂದು ಮುದಗಲ್ಲ ಹತ್ತಿರದ ಅರಣ್ಯದಲ್ಲಿ ನೆಲೆಸುತ್ತಾರೆ. ಭಾರೀ ತಪೋಧನರಾದ ಇವರ ಪ್ರಭಾವದಿಂದಾಗಿ ಭಕ್ತರು ಇಲ್ಲೊಂದು ಮಠವನ್ನು ಕಟ್ಟಿದರು. ಇದಕ್ಕೆ ಮೂಲ ಸ್ಥಳವಾದ ಅಂಕಲಗಿ ಹೆಸರಿನಿಂದ ಅಂಕಲಗಿ ಮಠ ಎಂದು ಹೆಸರಿಟ್ಟರು.[೭೭] ಅಲ್ಲಿನ ಜನರ ಬಾಯಲ್ಲಿ ಇದು ಅಂಕಲಿ

ಮಠವೆಂದಾಗಿದೆ. ಪರಮ ತಪೋಧನರಿಂದ ಶ್ರೀ ನಿರೂಪಾಧಿಗಳ ಜಾಗೃತ ಸಮಾಧಿ ಇಲ್ಲಿದ್ದು ಈಗಲೂ ಇದೊಂದು ಶಕ್ತಿ ಸ್ಥಳವಾಗಿದೆ. ಇಲ್ಲಿನ ವಿಶೇಷವೆಂದರೆ ಈ ಮಠದ ಅಧಿಪತಿಗಳೆಲ್ಲಾ ಸಂಸಾರಿಗಳಾಗಿದ್ದು, ಅವರಲ್ಲಿ ವಾಕ್ಸಿದ್ಧಿ ಪುರುಷರೂ, ತಪಸ್ಸಿಗಳೂ ಆಗಿದ್ದಾರೆ.

ಅಂಕಲಿಗಿ ಮಠದ ಮೂಲ ಪುರುಷರಾದ ನಿರೂಪಾದೇಶ್ವರ ಸ್ವಾಮೀಜಿ ತಮ್ಮ ಜೀವಿತಾವಧಿಯಲ್ಲಿಯೇ ಸುಮಾರು ೧೨ ಮಠಗಳನ್ನು ಸ್ಥಾಪಿಸಿದ್ದಾರೆ. ಇಲ್ಲಿನ ದೀನ-ದಲಿತರ ಬಾಳಿಗೆ ಬೆಳಕು ನೀಡಿರುವರು. ಈ ಮಠದಲ್ಲಿ ಇಂದಿಗೂ, ನಿತ್ಯ ತ್ರಿವಿಧ ದಾಸೋಹ, ಸಾವಿರಾರು ನಿರ್ಗತಿಕರಿಗೆ ಆಶ್ರಯ ತಾಣವಾಗಿದೆ.

ಹಿಂದೆ ಅಂಕಲಗಿ ಮಠವು ಶಿರಬಂದಪುರವಾಗಿತ್ತು. ಈ ಬರುವ ಅಂಕಲಗಿ ಮಠ ಆಗಿನ ವೇಳೆಯಲ್ಲಿ ಮುಳ್ಳು, ಪಾಪಸ್‌ಕಳ್ಳಿ ಬೆಳೆದು ನಿರ್ಜನ ಪ್ರದೇಶವಾಗಿತ್ತು. ಇಲ್ಲಿ ಮದಲು ರಾಕ್ಷಸರು ವಾಸಿಸುವ ತಾಣವಾಗಿತ್ತು ಎನ್ನುವ ದಂತಕಥೆ ಇದೆ. ಅಲ್ಲಿ ನೀರು ಪಾದೇಶ್ವರ ಅವರು ಮಠಕ್ಕೆ ಬರುವ ಪೂರ್ವದಲ್ಲಿ ಮಠದ ಸ್ಥಳದಲ್ಲಿದ್ದ ದುಷ್ಟ ಶಕ್ತಿಯು ಅಲ್ಲಿದ್ದ ಜನರಿಗೆ ತುಂಬಾ ಭಯ-ಭೀತಿಯಲ್ಲಿರುವಂತೆ ಮಾಡಿತ್ತು. ಈ ಸ್ಥಳದಲ್ಲಿ ನಿರುಪಾದೇಶ್ವರರು ಮಠ ಕಟ್ಟುವುದರ ಮೂಲಕ ದುಷ್ಟಶಕ್ತಿಯನ್ನು ತಮ್ಮ ಹತೋಟಿಗೆ ತಂದರು. ಇವರು ಅನೇಕ ಪವಾಡಗಳನ್ನು ಮಾಡುವುದರ ಮೂಲಕ ಜನರ ದೃಷ್ಟಿಯಲ್ಲಿ ನಡೆದಾಡುವ ದೇವರು ಎಂದು ಎನಿಸಿಕೊಂಡಿದ್ದಾರೆ.

ಪ್ರಸ್ತುತ ಪೀಠಾಧಿಪತಿಗಳಾದ ಬ್ರಹ್ಮಶ್ರೀ ವೀರಭದ್ರಮಹಾಸ್ವಾಮಿಗಳು ಹಾಗೂ ಘರೇರೇಶ್ವರ ಸ್ವಾಮೀಜಿ ಪವಾಡ ಪುರುಷರಾಗಿ ದೀನ, ದಲಿತರನ್ನು, ನಿರ್ಗತಿಕರನ್ನು ನೊಂದು-ಬೆಂದವರನ್ನು ನಂಬಿ ಬಂದ ಭಕ್ತರ ಸಮೂಹವನ್ನು ಪ್ರೀತಿ-ವಾತ್ಸಲ್ಯದಿಂದ ಆತ್ಮೀಯವಾಗಿ ಕಾಣುತ್ತಿದ್ದಾರೆ. ಈ ಮಠದಲ್ಲಿ ಜಾತಿ, ಮೇಲು-ಕೀಳು ಎನ್ನುವ ಭಾವನೆ ಇಲ್ಲ. ಎಲ್ಲರೂ ಒಂದೇ ಎನ್ನುವ ಭಾವನೆಯನ್ನು ಜನರಲ್ಲಿ ಮೂಡಿಸಿ ಜೀವನವನ್ನು ಸಾರ್ಥಕಗೊಳಿಸಿದ ಮಹಾಚೇತನರಾದ ಘರೇರೇಶ್ವರ ಸ್ವಾಮೀಜಿ, ವೀರಭದ್ರ ಸ್ವಾಮೀಜಿ, ಬಸವರಾಜ ಸ್ವಾಮೀಜಿಗಳು ಇಲ್ಲಿನ ಜನರಿಗೆ ರಕ್ಷಣೆ ನೀಡಿದ್ದಾರೆ.

**ಸಜ್ಜಲಗುಡ್ಡ ಮಠ**

ಲಿಂಗಸೂಗೂರು ತಾಲ್ಲೂಕಿನಿಂದ ಪಶ್ಚಿಮಕ್ಕೆ ೪೦ ಕಿ.ಮೀ. ದೂರದಲ್ಲಿರುವ ತೀರ ಸಣ್ಣ ಊರು ಇದಾಗಿದೆ. ೨೦ನೆಯ ಶತಮಾನದಲ್ಲಿ ಮಾತನಾಡುವ ದೇವರೆಂದೇ ಹೆಸರಾದ ಶಿವಯೋಗಿಣಿ ಸಜ್ಜಲಗುಡ್ಡದ ಶರಣಮ್ಮನವರ ಕ್ಷೇತ್ರವೂ ಒಂದು. ಶ್ರೀ ಸಜ್ಜಲಗುಡ್ಡದ ಶರಣಮ್ಮನವರು ಈ ಊರಿನಲ್ಲಿ ವಾಸಿಸಿ ಈ ಊರಿಗೊಂದು ಹೆಸರನ್ನು ತಂದುಕೊಟ್ಟಿದ್ದಾರೆ.

ಈಗ ಇವರು ಲಿಂಗೈಕ್ಯರಾಗಿದ್ದಾರೆ. ಇವರ ಸಮಾಧಿ ಇಲ್ಲಿದೆ. ಇಲ್ಲಿನ ಶ್ರೀಶರಣಮ್ಮನವರ ಗದ್ದುಗೆ ದರ್ಶನ ಪಡೆಯಲು ಕರ್ನಾಟಕ, ಆಂಧ್ರ, ಮಹಾರಾಷ್ಟ್ರದಿಂದಲೂ ಸಹಸ್ರಾರು ಜನರು ಭಕ್ತಾದಿಗಳು ಬಂದು ಇವರ ದರ್ಶನವನ್ನು ಪಡೆಯುತ್ತಿದ್ದಾರೆ. ಈ ಮಠವು ಆಧ್ಯಾತ್ಮಿಕ ಚಿಂತನೆ, ಶಿವಾನುಭವ, ಸಂಸ್ಕೃತ, ವೇದಪೀಠದ ಉಚಿತ ಬೋಧನೆ ಮಾಡುವ ಜಿಲ್ಲೆಯ ಏಕೈಕ ಅಪರೂಪದ ಮಠವಾಗಿದೆ. ಇವರು ಲೋಕಕಲ್ಯಾಣಕ್ಕಾಗಿ ದೈವತ್ವದ ಹಾದಿ ಹಿಡಿದವರು. ಬಾಲ್ಯದಲ್ಲಿಯೇ ವೈರಾಗ್ಯ ತಾಳಿ ಗುರುವಿನ ಕೃಪೆಗೆ ಪಾತ್ರರಾದರು. ಇವರು ಯಾವತ್ತು ಪ್ರಚಾರ ಪ್ರತಿಷ್ಠೆಗಾಗಿ ಬೆಲೆ ಕೊಟ್ಟವರಲ್ಲ. ಇವರು ಜಾತಿ, ಮತ, ಪಂಥ, ಮೇಲು-ಕೀಳು ಎಂಬ ಭಾವನೆ ಇಲ್ಲದೇ ಬಾಳಿ ಬದುಕು ಸಾಗಿಸಿದ ಅವರು ಲೋಕ ಕಲ್ಯಾಣಕ್ಕಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದರು. ಈ ಭಾಗದ ಜನರಿಗೆ ೧೨ನೇ ಶತಮಾನದ ಬಸವಾದಿ ಶರಣರ ಮೌಲ್ಯಗಳನ್ನು ಅವರ ಜೀವನದಲ್ಲಿ ತುಂಬಿ ಸಾಂಸ್ಕೃತಿಕ ಬೆಳವಣಿಗೆಗೆ ಬುನಾದಿ ಹಾಕಿದ್ದಾರೆ.

ಶರಣಮ್ಮನವರು ಕ್ರಿ.ಶ.೧೮೮೧ರಲ್ಲಿ ಕುಷ್ಟಗಿ ತಾಲ್ಲೂಕಿನ ಮುದೇನೂರು ಗ್ರಾಮದವರಾಗಿದ್ದಾರೆ. ಇವರ ತಂದೆ ಲಿಂಗಣ್ಣ, ತಾಯಿ ಲಿಂಗಮ್ಮ ಎಂಬ ಹಾಲುಮತ ಕುಟುಂಬದ ದಂಪತಿಗಳ ಉದರದಲ್ಲಿ ಜನಿಸಿದರು. ಮೂಲ ಹೆಸರು ಯಮುನಮ್ಮ. ಗುಡದೂರ ಗ್ರಾಮದ ದೊಡ್ಡ ಬಸವಾರ್ಯ ಶರಣರಿಂದ ಲಿಂಗ ದೀಕ್ಷೆ ಪಡೆದರು. ಇವರು ಲಿಂಗನಿಷ್ಠೆ, ವೈರಾಗ್ಯ, ಅಖಂಡ ಬ್ರಹ್ಮಚರ್ಯಗಳಿಂದ ಶಿವಾನುಭವದ ಜ್ಞಾನ ಪಡೆಯುವುದರ ಮೂಲಕ ಶಿವಯೋಗಿನಿಯಾದರು. ಬಡವರ, ದೀನ ದಲಿತರ ಕಷ್ಟಕಾರ್ಪಣ್ಯ, ರೈತರ ಗೋಳು, ಇವರ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿತು. ದೇವರ ಪೂಜೆ, ಧ್ಯಾನ, ತಪಸ್ಸಿನ ಫಲವಾಗಿ ಹೆಚ್ಚು ಕಾಲ ಕಳೆದರು. ಯಾವತ್ತು ತಮ್ಮ ಜೀವನದಲ್ಲಿ ಸಕಲ ಜೀವಿಗಳಿಗೆ ಲೇಸನ್ನೇ ಬಯಸಿದವರು.

ಈ ಆಶ್ರಮದ ಪ್ರತಿಯೊಂದು ಸ್ಥಳದಲ್ಲೂ ಶರಣಮ್ಮನವರ ತಪಸ್ಸಿನ ಪ್ರಭಾವ ಎದ್ದು ಕಾಣುತ್ತದೆ. ಯಾರೆ ಭಕ್ತರು ಈ ಆಶ್ರಮದ ಒಳಗೆ ಕಾಲಿಟ್ಟಾಗ ಅಲ್ಲಿ ಮಾತು ಮೌನವಾಗುತ್ತದೆ. ಗಾಂಭೀರ್ಯದ ವಾತಾವರಣಕ್ಕೆ ತಪಸ್ಸಿನ ಪ್ರಭಾವಕ್ಕೆ ಮನುಷ್ಯ ಮೂಕನಾಗಿ ಆತ್ಮಾನಂದದಲ್ಲಿ ಮುಳುಗುತ್ತಾನೆ. ಅಂಥ ಆಧ್ಯಾತ್ಮಿಕ ಪ್ರಭಾವ ಅಲ್ಲಿ ನಿರ್ಮಾಣಗೊಂಡಿದೆ.[೮] ಶರಣಮ್ಮನವರು ಹಳ್ಳಿಯ ಪರಿಸರದಲ್ಲಿದ್ದು, ಸುತ್ತಲಿನ ಗ್ರಾಮದ ಜನರ ಶಿಕ್ಷಣದ ಬಗ್ಗೆ ಚಿಂತಿಸಿ ಮಠದಲ್ಲಿ ಶಾಲೆ, ಕಾಲೇಜುಗಳನ್ನು ಸ್ಥಾಪಿಸುವುದಕ್ಕೆ ಶ್ರಮಿಸಿದ್ದಾರೆ. ಮಠದಲ್ಲಿ ಅಲ್ಲದೇ ವಿಜಯಪುರದಲ್ಲಿ ಸಜ್ಜಲಶ್ರೀ ಪ್ರಾಥಮಿಕ ಶಾಲೆ, ಬಾಗಲಕೋಟೆ ಜಿಲ್ಲೆಯ ಕಂಬಳಿಹಾಳ ಗ್ರಾಮದಲ್ಲಿ ಶರಣಮ್ಮ

ತಾಯಿಯವರ ಪ್ರೌಢಶಾಲೆ, ಐಟಿಐ ಕಾಲೇಜು, ಕಂದಲ್ ಗ್ರಾಮದಲ್ಲಿ ಸಜ್ಜಲಶ್ರೀ ಪ್ರಾಥಮಿಕ ಹಾಗೂ ಪ್ರೌಢಶಾಲೆ, ಮಾನ್ವಿ ತಾಲೂಕಿನ ಸಿರವಾರದಲ್ಲಿ ಪ್ರಾಥಮಿಕ ಶಾಲೆಗಳನ್ನು ಸ್ಥಾಪನೆ ಮಾಡಿ ಸಾವಿರಾರು ಬಡಮಕ್ಕಳಿಗೆ ವಿದ್ಯಾದಾನ ನೀಡುತ್ತಿದ್ದಾರೆ.

**ಮಸ್ಕಿ ಗಚ್ಚಿನ ಮಠ**

ಲಿಂಗಸೂಗೂರು ತಾಲೂಕಿನಲ್ಲಿ ಬರುವ ಮಸ್ಕಿ ಗ್ರಾಮದ ಗಚ್ಚಿನ ಹಿರೇಮಠವು ಹಲವು ಮಠಗಳಲ್ಲಿ ಒಂದು. ಇದು ಉಜ್ಜಯಿನಿ ಪೀಠದ ಶಾಖಾ ಮಠವಾಗಿದೆ. ಈ ಮಠದಲ್ಲಿ ಪುತ್ರವರ್ಗದ ಪರಂಪರೆಯಲ್ಲಿ ಬೆಳೆದುಬಂದಿದೆ. ಶ್ರೀ ರುದ್ರಸ್ವಾಮಿ ಎಂಬುವರು ೧೨ನೇ ಶತಮಾನದಲ್ಲಿ ಮನೆಯನ್ನು ತ್ಯಾಗ ಮಾಡುತ್ತಾರೆ. ನಂತರದ ದಿನಗಳಲ್ಲಿ ಅವರು ಹಲವು ಊರುಗಳನ್ನು ಸುತ್ತಿ ಕೊನೆಗೆ ಶ್ರೀಶೈಲದಲ್ಲಿ ಅನುಷ್ಠಾನ ಕೈಗೊಳ್ಳುತ್ತಾರೆ. ಈಗೆ ಲೋಕ ಸಂಚಾರ ಮಾಡುತ್ತಾ, ಧರ್ಮ ಪ್ರಚಾರ ಕೈಗೊಳ್ಳುತ್ತಾರೆ. ಹಲವು ಸ್ಥಳಗಳಿಗೆ ಭೇಟಿ ಕೊಟ್ಟು ಕೊನೆಗೆ ಈ ಗ್ರಾಮಕ್ಕೆ ಬಂದರು ಎಂದು ಉಲ್ಲೇಖಗಳಿವೆ. ಗ್ರಾಮದ ಹೊರವಲಯದಲ್ಲಿ ಶ್ರೀಗಳು ಅನುಷ್ಠಾನ ಕುಳಿತುಕೊಂಡರು. ಅಲ್ಲಿನ ಗ್ರಾಮದ ಭಕ್ತರು ಶ್ರೀಗಳನ್ನು ಕಂಡು ಗೌರವದಿಂದ ಊರಲ್ಲಿ ಬರಲು ಮನವಿ ಮಾಡಿದರು. ಭಕ್ತರ ಮನಸ್ಸನ್ನು ಅರ್ಥ ಮಾಡಿಕೊಂಡ ಗುರುಗಳು ಅವರ ಮಾತಿಗೆ ಮನ್ನಣೆ(ಒಪ್ಪಿಗೆ) ನೀಡುತ್ತಾರೆ. ಇದರಿಂದ ಹರ್ಷಕ್ಕೆ ಒಳಗಾದ ಆ ಗ್ರಾಮದ ಭಕ್ತರೆಲ್ಲ ಕೂಡಿ ಧನಸಹಾಯ ಸಂಗ್ರಹಕ್ಕೆ ಮುಂದಾಗಿ ಕೊನೆಗೆ ಒಂದು ಮಠವನ್ನು ಸ್ಥಾಪನೆ ಮಾಡಿದರೆಂದು ತಿಳಿದುಬರುತ್ತದೆ. ಅತ್ಯಂತ ಅಚ್ಚುಕಟ್ಟಾದ ರೀತಿಯಲ್ಲಿ ಕಟ್ಟಿದ ಈ ಮಠಕ್ಕೆ ಅಲ್ಲಿನ ಭಕ್ತರು ಪ್ರೀತಿಯಿಂದ ಗಜ್ಜಿನ ಮಠವೆಂದು ಹೆಸರಿಸುತ್ತಾರೆ.[೭೯]

ಆ ಊರಿನ ಭಕ್ತ ಸಮೂಹ ಮಲ್ಲಿಕಾರ್ಜುನ ದೇವರ ವಿಗ್ರಹಕ್ಕೆ ಪೂಜೆ ಸಲ್ಲಿಸುತ್ತಾರೆ. ಧಾರ್ಮಿಕ ಕಾರ್ಯ ಚಟುವಟಿಕೆಗಳು ಶಿವಾನುಭವ ಗೋಷ್ಠಿಗಳು ನಡೆಸಿಕೊಂಡು ಬರುತ್ತಾರೆ. ಈ ಮಠದಲ್ಲಿ ಸುಮಾರು ಎಂಟು ಮಠಾಧಿಪತಿಗಳು ಅಧಿಕಾರ ನಡೆಸಿದರೆಂದು ತಿಳಿದು ಬಂದಿದೆ. ಅವರೆಲ್ಲರ ಹೆಸರುಗಳು ಶ್ರೀ ರುದ್ರಸ್ವಾಮಿ ಶಿವಾಚಾರ್ಯರೆಂದು ಹೆಸರಿಸಲಾಗಿದೆ. ಪ್ರಸ್ತುತ ಮಠದ ಪರಂಪರೆ ಈ ಕೆಳಗಿನಂತಿದೆ.

೧. ಶ್ರೀ ಷ.ಬ್ರ.ರುದ್ರಸ್ವಾಮಿ ಶಿವಾಚಾರ್ಯ ಸ್ವಾಮಿಗಳು

೨. ಶ್ರೀ ಷ.ಬ್ರ.ಗಂಗಾಧರ ಶಿವಾಚಾರ್ಯ ಸ್ವಾಮಿಗಳು

೩. ಶ್ರೀ ಷ.ಬ್ರ.ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು
೪. ಶ್ರೀ ಷ.ಬ್ರ.ಮರುಘೇಂದ್ರ ಶಿವಾಚಾರ್ಯ ಸ್ವಾಮಿಗಳು
೫. ಶ್ರೀ ಷ.ಬ್ರ.ರುದ್ರದೇವ ಶಿವಾಚಾರ್ಯ ಸ್ವಾಮಿಗಳು(ಸದ್ಯದವರು)

**ಲಿಂಗಸೂಗೂರು ಮಹಾಂತೇಶ್ವರ ಮಠ**

ಲಿಂಗಸೂಗೂರು ಮತ್ತು ಕಸಬಾ ಲಿಂಗಸೂಗೂರು, ತಾಲ್ಲೂಕಿನ ಲಿಂಗಸೂಗೂರು ಹೃದಯ ಭಾಗದಲ್ಲಿ ಶ್ರೀ ವಿಜಯ ಮಹಾಂತೇಶ್ವರ ಮಠ ಇತ್ತೀಚೆಗೆ ಸ್ಥಾಪನೆಗೊಂಡಿದೆ. ಈ ಮಠದ ಸ್ಥಾಪನೆಯ ಪೂರ್ವ ಹಿನ್ನೆಲೆಯಲ್ಲಿ ನೋಡಿದರೆ ನಿಜಕ್ಕೂ ಆಶ್ಚರ್ಯವಾಗುತ್ತದೆ. ಈ ಮಠದ ಸ್ಥಾಪನೆಗೆ ಕಾರಣರಾದವರು ಇಳಕಲ್ ಶ್ರೀ ವಿಜಯ ಮಹಾಂತೇಶ್ವರ ಸ್ವಾಮಿಗಳು. ಇವರ ಅಮೃತಹಸ್ತದಿಂದ ಈ ಮಠವು ಸ್ಥಾಪನೆಗೊಂಡಿದೆ. ಕೆಲವು ವರ್ಷಗಳ ಕಾಲ ಈ ಮಠವು ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿತ್ತು. ಕಾಲಾನುಕ್ರಮವಾಗಿ ಕೆಲವು ಪ್ರಸಂಗಗಳು ಈ ಮಠದ ಗುರುಗಳಿಗೆ ಹಾಗೂ ಗ್ರಾಮದ ಭಕ್ತರಲ್ಲಿ ಭೇದವುಂಟಾಯಿತು. ಅಲ್ಲಿನ ಭಕ್ತರು ಶ್ರೀ ವಿಜಯ ಮಹಾಂತೇಶ್ವರ ಸ್ವಾಮಿಗಳಿಗೆ ಮಠಕ್ಕೆ ಬರಲು ಅವಕಾಶ ಮಾಡಿಕೊಡಲಿಲ್ಲ. ಆ ಮಠದಲ್ಲಿ "ಈಶ್ವರ" ದೇವಾಲಯವನ್ನು ನಿರ್ಮಾಣ ಮಾಡಿದ್ದಾರೆ. ಭಕ್ತರು ಪ್ರತಿ ದಿವಸ ಬಂದು ಈಶ್ವರ ದೇವಸ್ಥಾನಕ್ಕೆ ದರ್ಶನ ಪಡೆಯುತ್ತಾರೆ.

ಅಲ್ಲಿನ ಗ್ರಾಮದ ಕೆಲವು ಭಕ್ತರು ಶ್ರೀ ವಿಜಯ ಮಹಾಂತೇಶ್ವರ ಸ್ವಾಮಿಗಳಿಗೆ ಹೊರಡಲು ಬಿಡಲಿಲ್ಲ. ಗ್ರಾಮದ ಹೊರವಲಯದಲ್ಲಿ ಮಠವನ್ನು ಸ್ಥಾಪಿಸಲು ಶರಣಪ್ಪ ಸಕ್ರಿ, ವೀರಬಸಪ್ಪಾ, ಹುಲಕಡ್ಲಿ ಕೆ. ಶರಣಪ್ಪ ಮತ್ತು ಕಾಡಪ್ಪಾ ಸಾಹುಕಾರ ಮೊದಲಾದವರು ಒತ್ತಾಯಿಸುತ್ತಿದ್ದರು. ಶರಣಪ್ಪ ಸಕ್ರಿ ಲಿಂಗಸೂಗೂರು ಇವರು ಎರಡು ಎಕರೆ ೮ ಗುಮಟೆ ಭೂಮಿಯನ್ನು ಶ್ರೀಗಳಿಗೆ ದಾನವಾಗಿ ನೀಡಿದರು. ಶ್ರೀಗಳು ಆ ಸ್ಥಳದಲ್ಲಿ ಮಠವನ್ನು ಸ್ಥಾಪಿಸಿ ಸುಮಾರು ಏಳು ವರ್ಷಗಳ ಕಾಲ ಗತಿಸಿತ್ತು. ಪ್ರತಿ ಅಮವಾಸೆ ನಂತರ ಐದನೆ ದಿವಸಕ್ಕೆ ಶಿವಾನುಭವಗೋಷ್ಠಿ ನಡೆಯುತ್ತದೆ. ಪಂಚಮಿ ಮಾಸದಲ್ಲಿ ಸತತ ಒಂದು ತಿಂಗಳವರೆಗೆ ಪುರಾಣ ನಡೆಯುತ್ತದೆ.

ಸ್ವಾಮೀಜಿಯವರಲ್ಲಿ ಹಾಗೂ ಗ್ರಾಮಸ್ಥರಲ್ಲಿ ವೈಮನಸ್ಸು ಹುಟ್ಟಲು ಕಾರಣವೇನೆಂದರೆ ಶ್ರೀ ವಿಜಯ ಮಹಾಂತೇಶ್ವರ ಮಹಾಸ್ವಾಮಿಗಳು ಪ್ರತಿ ದಿವಸ ಮಠದಲ್ಲಿ ಇರುತ್ತಿರಲಿಲ್ಲ. ಇಳಿಕಲ ಮಠದಲ್ಲಿಯೇ ಹೆಚ್ಚಾಗಿ ಇರುತ್ತಿದ್ದರು. ಕೇವಲ ಆದಾಯ ತೆಗೆದುಕೊಳ್ಳುವುದಕ್ಕೆ ಮಾತ್ರ ಬರುತ್ತಿದ್ದರೆಂಬ ಭಕ್ತ ಗ್ರಾಮಸ್ಥರ ನಿಲುವಾಗಿತ್ತು. ಇದರಿಂದ ಈ ಸ್ವಾಮಿಗಳಿಂದ

ಗ್ರಾಮದ ಭಕ್ತರಿಗೆ ಯಾವುದೇ ಅನುಕೂಲ ದೊರೆಯದಂತಾಗಿದೆ ಎಂದು ರೋಷದಿಂದ ಗ್ರಾಮಸ್ಥರು ಈ ಘಟನೆಗೆ ಕಾರಣವಾಯಿತೆಂದು ತಿಳಿಸಿದ್ದಾರೆ. ಅಂದ ಹಾಗೆ ಶ್ರೀ ವಿಜಯ ಮಹಾಂತೇಶ್ವರ ಮಹಾಸ್ವಾಮಿಗಳು ಲಿಂಗಸೂಗೂರು ಮಠದಲ್ಲಿ ದೊರೆಯುವುದಿಲ್ಲ. ಹೊಸದಾಗಿ ಸ್ಥಾಪನೆಯಾದ ಮಠಕ್ಕೆ ಪ್ರತಿ ತಿಂಗಳಿಗೊಮ್ಮೆ ಮಾತ್ರ ಬಂದು ಮರುದಿವಸ ಮರಳಿ ಹೋಗುತ್ತಾರೆ.

**ಗುರುಗುಂಟ ಹಿರೇಮಠ**

ಲಿಂಗಸೂಗೂರು ತಾಲೂಕಿನಲ್ಲಿ ಬರುವ ಗುರುಗುಂಟ ಹಿರೇಮಠವು ಬಹಳ ಪ್ರಾಚೀನ ಮಠವೆಂದು ಪ್ರಖ್ಯಾತಿ ಪಡೆದಿದೆ. ಈ ಮಠಕ್ಕೆ ಶ್ರೀ "ತೋಪಿನ ಕಟ್ಟಿ ಸಂಸ್ಥಾನ ಮಠ"ವೆಂದು ಸಹ ಕರೆಯುತ್ತಾರೆ. ಅಲ್ಲದೆ "ಚರಮೂರ್ತೆಶ್ವರ ಮಠ"ವೆಂದು ಸಹ ಕರೆಯುತ್ತಾರೆ. ಶ್ರೀಶೈಲ ಪೀಠದ ಶಾಖಾ ಈ ಮಠವು ಪ್ರಗತಿಯತ್ತ ಸಾಗಿಸುತ್ತಿದೆ. ಧಾರ್ಮಿಕ ಪರಿಸರದಲ್ಲೇ ಹುಟ್ಟಿಕೊಂಡಿರುವ ಈ ಮಠವು ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳಿಗೆ ಪ್ರಸಿದ್ಧಿ ಪಡೆದುಕೊಂಡಿರುತ್ತದೆ. ಶ್ರೀ ವಿರೂಪಾಕ್ಷ ಶಿವಾಚಾರ್ಯ ಮಹಾಸ್ವಾಮಿಗಳು ಲೋಕ ಸಂಚಾರ ಕೈಗೊಂಡ ಗ್ರಾಮದ ಹೊರವಲಯದಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ಅನುಷ್ಠಾನ ಕೈಗೊಂಡಾಗ ಭಕ್ತರು ಇವರನ್ನು ನೋಡಿ ಗ್ರಾಮಕ್ಕೆ ಕರೆದುಕೊಂಡು ಬಂದು ಒಂದು ಮಠವನ್ನು ಕಟ್ಟಿಸಿಕೊಟ್ಟರು. ಅಂದಿನಿಂದ ಶ್ರೀ ವಿರೂಪಾಕ್ಷ ಸ್ವಾಮಿಗಳು ಶ್ರೀ ಮಠದಲ್ಲಿಯೇ ಪಾಠ ಪ್ರವಚನವನ್ನು ಹಮ್ಮಿಕೊಂಡು ಭಕ್ತರ ಮನಸ್ಸನ್ನು ಸೂರೆಗೊಳಿಸುತ್ತಿದ್ದರು. ಈ ಮಠದಲ್ಲಿ ಪ್ರಾರಂಭದಿಂದ ಸುಮಾರು ಐದು ಜನರು ಇಲ್ಲಿಯವರೆಗೆ ಪೀಠಾಧಿಪತಿಯಾಗಿ ಅಧಿಕಾರವನ್ನು ಸ್ವೀಕರಿಸಿದ್ದಾರೆ.

**ವಂಶಾವಳಿ**

೧. ಶ್ರೀ ಷ.ಬ್ರ.ವೀರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು

೨. ಶ್ರೀ ಷ.ಬ್ರ.ಮರಿಸ್ವಾಮಿಗಳು ಶಿವಾಚಾರ್ಯ ಸ್ವಾಮಿಗಳು

೩. ಶ್ರೀ ಷ.ಬ್ರ.ಮಹಾಂತ ಶಿವಾಚಾರ್ಯ ಮಹಾಸ್ವಾಮಿಗಳು

೪. ಷ.ಬ್ರ.ಶ್ರೀ.ವೀರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು

೫. ಶ್ರೀ ಷ.ಬ್ರ.ಸದಾನಂದ ಶಿವಾಚಾರ್ಯ ಸ್ವಾಮಿಗಳು

ಹೀಗೆ ಐದು ಸ್ವಾಮಿಗಳು ಅಧಿಕಾರವನ್ನು ನಡೆಸಿದ್ದಾರೆ. ನಾಲ್ಕನೆಯ ಪೀಠಾಧಿಪತಿಯಾದ ಷ.ಬ್ರ.ವಿರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು ಲಿಂಗೈಕ್ಯರಾದ ಶ್ರೀ ಮಠವು ಇಪ್ಪತ್ತೈದು

ವರ್ಷಗಳ ಕಾಲ ಖಾಲಿ ಉಳಿದಿತ್ತು. ಅಂದರೆ ಶ್ರೀಮಠಕ್ಕೆ ವಾರಸುದಾರರಿರಲ್ಲ. ಮಠಾಧಿಪತಿಗಳಿರಲಿಲ್ಲವೆಂದು ತಿಳಿದುಬರುತ್ತದೆ. ಇವರ ನಂತರ ೧೯೯೭ ಫೆಬ್ರವರಿಯಲ್ಲಿ ಶ್ರೀ ಷ.ಬ್ರ.ಸದಾನಂದ ಶಿವಾಚಾರ್ಯ ಸ್ವಾಮಜಿಗಳಿಗೆ ಪಟ್ಟಾಧಿಕಾರವನ್ನು ವಹಿಸಿಕೊಟ್ಟರು. ನೂತನ ಶ್ರೀಗಳು ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಚಟುವಟಿಕೆಗಳನ್ನು ಸತತವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಶ್ರೀ ಮಠವು ಹಿಂದೆ ತಿಪ್ಪರಾಜನಾಯಕ ದೊರೆಯ ಕಾಲದಲ್ಲಿ ಪ್ರಸಿದ್ಧಿಗೆ ಪಾತ್ರವಾಗಿ ಬೆಳೆಯತೊಡಗಿತ್ತು. ತಿಪ್ಪರಾಜನಾಯಕನವರು ಈ ಭಾಗದಲ್ಲಿ ಹೆಚ್ಚು ಪ್ರತಿಷ್ಠೆಯನ್ನು ಗಳಿಸಿದವರು. ಅವರು ಯಾವಾಗಲೂ ಧರ್ಮನಿಷ್ಠತೆಯನ್ನು ಹೊಂದಿದ್ದರು. ಆಗಾಗಿ ಅವರು ಧಾರ್ಮಿಕತೆಯ ಬಗ್ಗೆ ತುಂಬಾ ಅಭಿಮಾನ ಉಳ್ಳವರಾಗಿದ್ದರು. ಅವರು ಶ್ರೀಮಠಕ್ಕೆ ಸುಮಾರು ಐವತ್ತು ಎಕ್ಕರೆ ಭೂಮಿಯನ್ನು ಉಂಬಳಿಯಾಗಿ ನೀಡಿದರು. ಅದರಲ್ಲಿ ಈಗ ಹದಿನೈದು ಎಕ್ಕರೆ ಮಾತ್ರ ಭೂಮಿಯನ್ನು ಉಳಿದುಕೊಂಡಿದೆ. ಈ ಮಧ್ಯ ಬಂದ ಮಠಾಧೀಶ್ವರರೇ ಈ ಭೂಮಿಯನ್ನು ಮಾರಾಟ ಮಾಡಿರಬಹುದು. ನೂತನ ಶ್ರೀಗಳಾದ ಷ.ಬ್ರ.ಸದಾನಂದ ಶಿವಾಚಾರ್ಯ ಮಹಾಸ್ವಾಮಿಗಳು ಮಠದಲ್ಲಿ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಈ ಹಿಂದೆ ಇದ್ದ, ಪೂರ್ವ ಮಠಾಧಿಪತಿಗಳ ಗದ್ದುಗೆಯನ್ನು ಕಟ್ಟಿಸಿ ಅದಕ್ಕೆ ನಿತ್ಯ ಪೂಜೆಯನ್ನು ಸಲ್ಲಿಸುತ್ತಾರೆ. ಕಾರ್ತಿಕ ಮಾಸದಲ್ಲಿ ಪುರಾಣ ಪ್ರವಚನವನ್ನು ಹಮ್ಮಿಕೊಳ್ಳುತ್ತಾರೆ. ಶ್ರಾವಣಮಾಸದಲ್ಲಿ ಶರಣ ಶರಣೆಯರ ಪ್ರವಚನಗಳನ್ನು ನಡೆಸುತ್ತಾರೆ.

ಇದೇ ಗ್ರಾಮದ ಕೋಟೆಯ ಒಳಭಾಗದಲ್ಲಿ ಕಲ್ಲು ಗುಡ್ಡದ ಮೇಲೆ ಒಂದು ವಿರಕ್ತ ಸಂಪ್ರದಾಯದ ಮಠ ಸ್ಥಾಪನೆಯಾಗಿದೆ. ಈ ಮಠವು ರಾಜಗುರು ಮಹಾಸ್ವಾಮಿಗಳು ಸ್ಥಾಪಿಸಿರಬಹುದೆಂದು ತಿಳಿದುಬಂದಿದೆ. ಇವರ ನಂತರ ಸುಮಾರು ಐವತ್ತು ವರ್ಷಗಳ ಕಾಲ ಮಠವು ಮಠಾಧೀಶರಿಲ್ಲದೆ ಖಾಲಿ ಉಳಿದಿತ್ತು. ಶ್ರೀಮಠದ ಆವರಣದಲ್ಲಿ ಆರು ಗದ್ದುಗೆಗಳು ಕಂಡುಬರುತ್ತವೆ. ಆದರೆ ಮಠಾಧೀಶ್ವರ ಹೆಸರು ಪತ್ತೆಯಾಗಿಲ್ಲ. ಇಂದು ಈ ಮಠದ ನೂತನ ಪೀಠಾಧಿಪತಿಯಾಗಿ ಶ್ರೀ ಮ.ನಿ.ಪ್ರ.ರುದ್ರಸ್ವಾಮಿ ಎಂಬುವವರ ನೇತೃತ್ವದಲ್ಲಿ ಮಠವು ಅಭಿವೃದ್ಧಿ ಪಡೆಯುತ್ತದೆ.

**ಸಂತೆಕೆಲ್ಲೂರು ಮಠ**

ಈ ಮಠವು ಲಿಂಗಸೂಗೂರು ತಾಲ್ಲೂಕಿನಿಂದ ದಕ್ಷಿಣ ದಿಕ್ಕಿನಲ್ಲಿದೆ. ಇದು ಐದು ಶತಮಾನಗಳ ಪ್ರಾಚೀನತೆ ಹೊಂದಿರುವ ಮಠವಾಗಿದೆ. ಈ ಮಠ ತೋಂಟದಾರ್ಯ ಮಠದ

ಪರಂಪರೆ ಹೊಂದಿದೆ. ಇಲ್ಲಿನ ಶ್ರೀತೋಟದಾರ್ಯ ಮಠದಲ್ಲಿ ಲಿಂಗೈಕ್ಯರಾದ ಕೃಷಿಋಷಿ, ಅನುಭಾವಿ ಕವಿ ಘನಮಠ ಶಿವಯೋಗಿಗಳಿಂದಾಗಿ ಈ ಊರಿಗೆ ಮಹತ್ವ ಬಂದಿದೆ. ಶ್ರೀ ಘನಮಠ ಶಿವಯೋಗಿಗಳ ಮೂಲ ಹೆಸರು ನಾಗಭೂಷಣ 'ಘನಮಠ' ಎಂಬುದು ಅವರ ಗುರುಗಳ ಹೆಸರು. ಇವರು ತೆಲುಗು ನಾಡಿನವರಾಗಿದ್ದಾರೆ. ಆಧ್ಯಾತ್ಮ ಜೀವಿಯಾಗಿದ್ದರೂ ಅನಿವಾರ್ಯವಾಗಿ ಮದುವೆಯಾಗಿ ಮತ್ತೆ ವೈರಾಗ್ಯ ತಾಳಿ ಮನೆಬಿಟ್ಟು ಕನ್ನಡ ನಾಡಿಗೆ ಬರುವುದರ ಮೂಲಕ ಕನ್ನಡ ಕಲಿತು ಅಪ್ಪಟ ಬಸವಾನುಯಾಯಿಯಾಗಿ, ನಾಡೆಲ್ಲಾ ಸುತ್ತಿ, ಕೃಷಿಕರಿಗೆ ಕೃಷಿಯ ಕುರಿತಾಗಿ ಬೋಧಿಸುತ್ತ, ಭಕ್ತಜನಗಳಿಗೆ ಸಾರ್ವಜನಿಕರಿಗೆ ತಮ್ಮ ಅನುಭವವನ್ನು ಹಾಡುಗಳ ಮೂಲಕ ತಿಳುವಳಿಕೆ ನೀಡಿದರು. ನಾಡಿನ ಮಹಾತ್ಮರ ನೆಲೆಗಳಿಗೆ ಭೇಟಿ ನೀಡಿದ್ದಾರೆ. ಇವರು ಸಮಕಾಲೀನ ಮಹಾತ್ಮರನ್ನು ಭೇಟಿಯಾಗುವುದರ ಮೂಲಕ ಸಂಚಾರ ಮಾಡಿದ್ದಾರೆ.

ಈ ಮಠದಲ್ಲಿ ೨೦ಕ್ಕೂ ಹೆಚ್ಚು ಜನ ಪೂಜ್ಯರು ಧರ್ಮಪ್ರಸಾರ ನೀಡಿದ್ದಾರೆ. ಇಲ್ಲಿನ ಘನಮಠದಾರ್ಯರು ಕೃಷಿ-ಋಷಿ ಎಂದು ಗುರುತಿಸಿಕೊಂಡರು. ಮಳೆ ಆಶ್ರಿತ, ನೀರಾವರಿ, ಮಣ್ಣು ಮತ್ತು ನೀರು ಸಂರಕ್ಷಣೆ ಹಾಗೂ ಅಂತರಂಗ ಮತ್ತು ಬಹಿರಂಗ ಕೃಷಿಯ ಬಗ್ಗೆ ತತ್ವಪದಗಳ ರಚನೆ ಜೊತೆಗೆ ೨೩ ಅಧ್ಯಾಯಗಳನ್ನು ಒಳಗೊಂಡ "ಕೃಷಿಜ್ಞಾನ ಪ್ರದೀಪಿಕೆ" ಎಂಬ ಗ್ರಂಥವನ್ನು ಶಿಷ್ಯನಾದ ಕುನ್ನಾಳು ಸಿದ್ಧರಾಮಪ್ಪನ ಮೂಲಕ ರಚಿಸಿದ್ದಾರೆ. ಜಾಲಹಳ್ಳಿಯ ವೀರಭದ್ರ ಕವಿಯಿಂದ ಆತನ ತೊನ್ನು ರೋಗ ನಿವಾರಣಾರ್ಥವಾಗಿ ಅರುವತ್ಮೂರು ಪುರಾತನರ ಪುರಾಣವನ್ನು ಬರೆಸಿದ್ದಾರೆ. ಸ್ವತಃ ಆಶುಕವಿಗಳಾಗಿ ಅನುಭವ ಗೀತೆಗಳ ಹಾಡುತ್ತಾ, ಬಸವವಾದಿ ಶರಣ-ಶರಣೆಯರ ವಚನಗಳನ್ನು ಸದಾ ಹೆಗಲ ಮೇಲೆ ಹೊತ್ತು ಸಂರಕ್ಷಿಸಿದ್ದಾರೆ. ನಿತ್ಯವು ಐದು ಮನೆಯಲ್ಲಿ ಅನ್ನವನ್ನು ತಂದು ಅವೆಲ್ಲವನ್ನು ಕೂಡಿಸಿ 'ಬಸವಪಾಕ'ವೆಂದು ಮಾಡಿ ಸೇವಿಸುತ್ತಾ ಕೊನೆಗೆ ಸಂತೆಕೆಲ್ಲೂರ ಮಠದಲ್ಲಿ ನೆಲೆಸಿ ಅಲ್ಲಿಯೇ ಲಿಂಗೈಕ್ಯರಾಗಿದ್ದಾರೆ.

ಇವರ ಸ್ಮರಣಾರ್ಥವಾಗಿ ಪ್ರತಿವರ್ಷ ಪುಷ್ಯಶುದ್ಧ ೪ ರಂದು ಜಾತ್ರೆಯ ಮೂಲಕ ಅತಿ ವಿಜೃಂಭಣೆಯಿಂದ ಆಚರಿಸಲಾಗುತ್ತದೆ. ಸಾವಿರಾರು ಭಕ್ತರು ಜಾತ್ರೆಯಲ್ಲಿ ಪಾಲ್ಗೊಳ್ಳುವುದರ ಮೂಲಕ ಪ್ರಸಾದವನ್ನು ಸವಿಯುತ್ತಾರೆ. ಗುರುಬಸವ ಮಹಾಸ್ವಾಮಿಗಳು ಸಂತೆಕಲ್ಲೂರಿನಲ್ಲಿ ಶ್ರೀ ಘನಮಠೇಶ್ವರ ಉಚಿತ ಪ್ರಸಾದ ನಿಲಯ ಹಾಗೂ ಶಾಲೆಗಳನ್ನು ಪ್ರಾರಂಭಿಸಿ ಸುತ್ತಲಿನ ಗ್ರಾಮಗಳ ಮಕ್ಕಳಿಗೆ ಶಿಕ್ಷಣ ನೀಡುತ್ತಿದ್ದಾರೆ.

### ತೋಂಟದಾರ್ಯ ಮಠ

ಇದು ಕಸಬಾ ಲಿಂಗಸೂಗೂರಿನ ತೋಂಟದಾರ್ಯ ಮಠವಾಗಿದೆ. ಇದು ತಾಲ್ಲೂಕ ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೪ ಕಿ.ಮೀ. ಅಂತರದಲ್ಲಿದೆ. ಎಡೆಯೂರು ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರರಿಂದ ಸ್ಥಾಪಿಸಲ್ಪಟ್ಟಿದೆ. ಇಲ್ಲಿ ೨೨ ಸ್ವಾಮಿಗಳು ಆಗಿ ಹೋಗಿದ್ದಾರೆ. ಇದು ೧೮ ಶಾಖಾ ಮಠಗಳುಳ್ಳ ದೊಡ್ಡ ಸಂಸ್ಥಾನ ಮಠವಾಗಿತ್ತು. ಹೈದ್ರಾಬಾದ್ ಕರ್ನಾಟಕದಲ್ಲಿ ಶರಣ ಸಂಸ್ಕೃತಿಯ ಪ್ರಮುಖ ಪ್ರಸಾರ ಕೇಂದ್ರವಾಗಿತ್ತು. ಇಲ್ಲಿದ್ದ ಹಸ್ತಪ್ರತಿಗಳು ಹಾಗೂ ಲೇಖನ ಸಾಮಾಗ್ರಿಗಳೆಲ್ಲವೂ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ನೀಡಲಾಗಿದೆ. ಈ ಮಠದ ಶಾಖೆಗಳು ಸಂತೆಕೆಲ್ಲೂರು, ವ್ಯಾಕರನಾಳ, ಮರಳಿ, ಮುದಗಲ್, ಕಂದಗಲ್, ಗುಡಿಹಾಳ ಮುಂತಾದ ಕಡೆ ಇವೆ. ಈ ಮಠದ ಶ್ರೀಗಳ ಗದ್ದುಗೆಗಳನ್ನು ಇಂದು ಸಂತೆಕಲ್ಲೂರು, ಅಮೀನಗಾಡ, ಕಸಬಾ ಲಿಂಗಸೂಗೂರುಗಳಲ್ಲಿ ನೋಡಬಹುದಾಗಿದೆ. ಈ ಮಠವು ವಚನ ಸಾಹಿತ್ಯ ಹಾಗೂ ಸಂಸ್ಕೃತಿಯ ಕೇಂದ್ರವಾಗಿತ್ತು. ವಚನಗಳ ಸಂಕಲನ ಹಾಗೂ ಪ್ರತಿ ಮಾಡುವ ಕೆಲಸ ಕಾರ್ಯದಲ್ಲಿ ತೊಡಗಿತ್ತು. ಇಲ್ಲಿ ಅನೇಕ ತಾಳೆಗರಿಗಳು ಇಲ್ಲಿದ್ದವು.[೮೦]

ಹೀಗೆ ತನ್ನದೇ ಆದ ಐತಿಹಾಸಿಕ ಪರಂಪರೆ ಈ ಮಠವು ಹೊಂದಿದ್ದು, ಇಂದು ಪೀಠಾಧಿಕಾರಿಗಳಿಲ್ಲದೇ ಇರುವ ಹಣೆಪಟ್ಟಿಯನ್ನು ಹೊತ್ತಿರುವ ಅನಾಥ ಮಠವಾಗಿದೆ. ಈ ಮಠಕ್ಕೆ ಪೀಠಾಧಿಕಾರಿಗಳನ್ನು ನೇಮಿಸಬೇಕಾಗಿದೆ. ಮಠದ ಪರಂಪರೆಯನ್ನು ನೆನಪಿಸುವುದು, ಶರಣರ ಚಿಂತನೆಗಳನ್ನು ಈ ಭಾಗದ ಜನರಿಗೆ ತಲುಪಿಸಬೇಕಾಗಿದೆ.

## ೫.೧೦. ಇತರೆ ಸ್ಮಾರಕಗಳು

### ಮಸೀದಿ ಮತ್ತು ದರ್ಗಾಗಳು

ಭಾರತ ದೇಶದಲ್ಲಿ ಹಲವು ಧರ್ಮಗಳಿವೆ. ಅಂತಹ ಧರ್ಮಗಳಿಗನುಸಾರವಾಗಿ ದೇವಾಲಯ ಗಳು, ಮಸೀದಿಗಳು, ಚರ್ಚಗಳು, ವಿಹಾರಗಳು, ದೇಶದ ವಿವಿದ ಭಾಗದಲ್ಲಿ ಕಾಣಿಸುತ್ತವೆ. ಅದರಲ್ಲೂ ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ, ಮುಸ್ಲಿಂ ಮನೆತನಗಳ ಆಳ್ವಿಕೆಯ ಕಾಲದಲ್ಲಿ ಮುಸ್ಲಿಂ ಸ್ಮಾರಕಗಳು ಅವರವರ ಆಡಳಿತದ ಅವಧಿಯಲ್ಲಿ ನಿರ್ಮಾಣವಾಗಿವೆ. ಅಂತಹ ಸ್ಮಾರಕಗಳಾದ ಮಸೀದಿಗಳು,ದರ್ಗಾಗಳು ಈ ತಾಲ್ಲೂಕಿನಲ್ಲಿವೆ. ಅವುಗಳನ್ನು ಈ ಕೇಳ ಕಂಡಂತೆ ವಿವರಿಸಲಾಗಿದೆ.

**ಹಳೆಪೇಟೆ ಜಾಮಿಯಾ ಮಸೀದಿ**

ಲಿಂಗಸೂಗೂರು ತಾಲ್ಲೂಕಿನ ಕೇಂದ್ರದಿಂದ ದಕ್ಷಿಣಕ್ಕೆ ೧೮ ಕಿ.ಮೀ.ಅಂತರದಲ್ಲಿದೆ.ಇದು ಮುದಗಲ್ ಹಳೆಪೇಟೆಯಲ್ಲದೆ. ಕ್ರಿ.ಶ.೧೫೮೫ರ ಕಾಲದಲ್ಲಿ ನಿರ್ಮಾಣವಾದ ವಿಶಿಷ್ಟ ರೀತಿಯ ಭವ್ಯ ಮಸೀದಿಯಾಗಿದೆ.ಈ ಮಸೀದಿಯಲ್ಲಿ ಯಾವುದೇ ರೀತಿಯ ಮಜರ(ಸಮಾದಿ) ಕಂಡು ಬರುವುದಿಲ್ಲ. ಜಾಮಿಯಾ ಪದ ಈ ರೀತಿಯ ಅರ್ಥ ಕೋಡುತ್ತದೆ. ಜಮಾ ಎಂದರೆ ಒಂದೆಡೆ ಸೇರು ಎಂಬರ್ಥವಿದೆ. ಅದೇ ಮುಂದೆ ಜಾಮಿಯಾ ಮಸೀದಿಯಾಗಿ ಪರಿವರ್ತನೆ ಹೊಂದಿದೆ. ಇದನ್ನು ವಿಜಯಪುರದ ಎರಡನೇ ಇಬ್ರಾಹಿಂ ಆದಿಲ್‌ಶಾಹಿ ಕ್ರಿ.ಶ.೧೫೮೫ರಲ್ಲಿ ಆದಿಲ್ ಶಾಹಿಯವರ ವಾಸ್ತು ಶೈಲಿಯಲ್ಲಿ ಈ ಮುದಗಲ್ ಮಸೀದಿಯನ್ನು ನಿರ್ಮಿಸಿದ್ದಾರೆ.[೮೧]

ಪಟ್ಟಣದಲ್ಲಿ ದೊರೆಯುವ ಪರ್ಶಿಯನ್ ಭಾಷೆಯ ಶಾಸನಗಳು ಜಾಮಿಯಾ ಮಸೀದಿಯ ಬಗ್ಗೆ ವಿವರಣೆ ನೀಡುತ್ತದೆ. ೮೦ ಅಡಿ ಉದ್ದ ಮತ್ತು ೧೫೦ ಅಡಿ ಅಗಲ ವಿಸ್ತೀರ್ಣ ಹೊಂದಿದೆ. ಪಟ್ಟಣದಲ್ಲಿರುವ ಶಾಸನವು ಜಾಮಿಯಾ ಮಸೀದಿಯ ಬಗ್ಗೆ ಬೆಳಕು ಚಲ್ಲುವದು.ಮಸೀದಿಯಲ್ಲಿ ಪ್ರತಿದಿನ ಪ್ರಾರ್ಥನೆಯನ್ನು ಸಲ್ಲಿಸಲಾಗುತ್ತದೆ. ಪ್ರಾರ್ಥನಾ ಮಂದಿರದ ಮಹರಬ್ ಕಮಾನಿನಲ್ಲಿ ಪರ್ಶಿಯನ್ ಭಾಷೆಯ ಶಾಸನ ಇದೆ.[೮೨]

**ನೀರದೊಡ್ಡಿ ಜಾಮಿಯಾ ಮಸೀದಿ**

ಲಿಂಗಸೂಗೂರು ತಾಲ್ಲೂಕಿನ ಕೇಂದ್ರದಿಂದ ೧೮ ಕಿ.ಮೀ. ದೂರದಲ್ಲಿರುವ ಮುದಗಲ್ ಪಟ್ಟಣದಲ್ಲಿದೆ. ಅಂದು ಯುದ್ಧದಲ್ಲಿ ಜಯ ಸಿಕ್ಕಿದ ನಂತರ ಆದಿಲ್ ಶಾಹಿಗಳು ಮುದಗಲ್‌ನ್ನು ಸಂಪೂರ್ಣವಾಗಿ ತಮ್ಮ ಕೈವಶಕ್ಕೆ ಪಡೆದ ನಂತರ ಕಾಲಘಟ್ಟದಲ್ಲಿ ಅಂದರೆ ಈ ಮಸೀದಿಯನ್ನು ಕ್ರಿ.ಶ.೧೫೮೮ ರಲ್ಲಿ ನಿರ್ಮಿಸಿರಬೇಕು. ಪೂರ್ವಾಭಿಮುಖವಾಗಿರುವ ಈ ಮಸೀದಿ ದೊಡ್ಡದಾದ ಗ್ರಾನ್ಯೆಟ್ ಶಿಲೆಯನ್ನು ಬಳಕೆ ಮಾಡಿರುವುದರ ಮುಲಕ ಮುಖ್ಯದ್ವಾರದ ಬಾಗಿಲನ್ನು ನಿರ್ಮಿಸಿದ್ದಾರೆ. ಬಾಗಿಲವಾಡದಲ್ಲಿ ಹೂವಿನ ಲತಾ ಸುರಳಿಗಳಿವೆ. ಎರಡು ಬದಿಗಳಿಗೆ ಮಿನಾರುಗಳು,ಚಿಕ್ಕ ಕಿಂಡಿ ಬಾಗಿಲುಗಳು,ಕೊನೆಯಲ್ಲಿ ಚಿಕ್ಕ ಗುಮ್ಮಟವಿದೆ. ३೦x೪೦ ಅಡಿಯ ವಿಸ್ತೀರ್ಣ ಹೊಂದಿರುವ ಮಸೀದಿ ನೂರಕ್ಕೂ ಹೆಚ್ಚುಜನ ಕುಳಿತು ಒಂದೇ ವೇಳೆಯಲ್ಲಿ ಪ್ರಾರ್ಥನೆ ಸಲ್ಲಿಸಲು ಅನುಕೂಲವಿದೆ. ಇಲ್ಲಿನ ಪ್ರವೇಶದ್ವಾರವನ್ನು ಆಗಿನ ಪಟ್ಟಣದ ಮುಖ್ಯಾಧಿಕಾರಿ ನಿಜಾಮ್ ಸ್ಕುರಬಿ ನಿರ್ಮಿಸಿದ.[೮೩] ಇಲ್ಲಿನ ಶಾಸನವನ್ನು ಕರೀಮ-ಉ-ದ್ದೀನ್ ಬರೆದ ಎಂದು ತಿಳಿದು ಬಂದಿದೆ. ಇದು ಪರ್ಶಿಯನ್ ಭಾಷೆಯಲ್ಲಿದೆ.

## ಹುಸೇನ ಆಲಂ ಮಸೀದಿ

ಇದು ಕ್ರಿ.ಶ.೧೬-೧೭ನೇ ಶತಮಾನದಲ್ಲಿ ವಿಜಯಪುರ ಆದಿಲ್‌ಶಾಹಿಗಳು ವಾಸ್ತುಶೈಲಿಯಲ್ಲಿ ನಿರ್ಮಾಣವಾಗಿದೆ.ಇದು ಮೂಲತಃ ಮುದ್ದು ರಂಗನಾಥ ದೇವಾಲಯವಾಗಿತ್ತು. ನಂತರ ಹುಸೇನ ಆಲಂ ಅಶುರಖಾನ ಮಸೀದಿಯಾಗಿದೆ ಪರಿವರ್ತನೆಗೊಂಡಿದೆ ಈ ಮಸೀದಿಯ ಬಾಗಿಲಿನ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬು ಶಿಲ್ಪ ಇದೆ. ಬಾಗಿಲುವಾಡದಲ್ಲಿ ಸಿಂಹಗಳು, ಲತಾಬಳ್ಳಿಗಳಿವೆ. ಇದರಲ್ಲಿ ಹಿಂದೂ ಮೂರ್ತಿ ಶಿಲ್ಪಗಳು ಸ್ಪಷ್ಟವಾಗಿ ಕಾಣಿಸುತ್ತದೆ. ಈ ಮಸೀದಿಯಲ್ಲಿ ಕಮಾನುಗಳು ನೋಡುವುದಕ್ಕೆ ಗಮನ ಸೆಳೆಯುತ್ತವೆ. ಇದು ಸಾಕಷ್ಟ ಬಾರಿ ಜೀರ್ಣೋದ್ಧಾರ ಕಂಡಿದೆ.[೮೪]

## ಬಾಬರಿ ಮಸೀದಿ

ಇಲ್ಲಿರುವ ಮಸೀದಿಯು ಕ್ರಿ.ಶ.೧೬-೧೭ನೇ ಶತಮಾನದಲ್ಲಿ ನಿರ್ಮಾಣವಾಗಿರಬಹುದು. ಇದು ಲಿಂಗಸೂಗೂರು ತಾಲ್ಲೂಕಿನ ಮುದಗಲ್ ಪಟ್ಟಣದ ವೆಂಕಟರಾಯನ ಪೇಟೆಯಲ್ಲಿದೆ. ಇದು ವಿಜಯಪುರ ಆದಿಲಶಾಹಿ ಕಾಲಾವಧಿಯಲ್ಲಿ ನಿರ್ಮಾಣವಾಗಿದೆ. ಲಲಾಟದ ಮೇಲ್ಭಾಗದಲ್ಲಿ ಕಮಾನಿನಾಕಾರದ ಚಿಕ್ಕ ಕಿಂಡಿಗಳಿವೆ. ಎರಡು ಬದಿಗೆ ನಾಲ್ಕು ಮಿನಾರುಗಳಿವೆ. ಇಲ್ಲಿರುವ ಪ್ರಾರ್ಥನೆ ಸ್ಥಳವು ಹಲವು ಬಾರಿ ಜೀರ್ಣೋದ್ಧಾರ ಕಂಡಿದೆ.

## ಕಿಲ್ಲಾದಲ್ಲಿರುವ ಅಸ್ಸಾರ ಮಸೀದಿ

ಇದು ತಾಲ್ಲೂಕಿನ ಮುದಗಲ್ ಪಟ್ಟಣದಲ್ಲಿದೆ. ಕ್ರಿ.ಶ.೧೬ನೇ ಶತಮಾನದಲ್ಲಿ ನಿರ್ಮಾಣವಾಗಿದೆ. ಇದು ಕಿಲ್ಲಾದಲ್ಲಿರುವ ಗರಡಿ ಮನೆ ಎದುರುಗಿದೆ. ಇಲ್ಲಿ ಕಮಾನು, ಮೆಹರಬ್ ಮಿನಾರಗಳನ್ನು ಹೊಂದಿದೆ. ಗಾರೆಯಿಂದ ಕಮಾನುಗಳನ್ನು ನಿರ್ಮಿಸಲಾಗಿದೆ. ಎಡ ಮತ್ತು ಬಲ ಸೇರಿ ಆರು ಕಮಾನುಗಳಿವೆ.ಇದರ ಮಧ್ಯದಲ್ಲಿ ಪ್ರಾರ್ಥನಾ ಸ್ಥಳವಿದೆ. ಇದರ ಮೇಲ್ಭಾಗದಲ್ಲಿ ಎರಡು ಕಡೆ ಮೀನಾರಗಳಿವೆ.[೮೫]

## ಕಾಲಿ ಮಸೀದಿ

ಇದು ತಾಲ್ಲೂಕಿನಲ್ಲಿರುವ ಮುದಗಲ್ ಪಟ್ಟಣದಲ್ಲಿ ಕಂಡು ಬರುತ್ತದೆ. ಈ ಮಸೀದಿಯನ್ನು ವಿಜಯಪುರದ ಸುಲ್ತಾನರು ನಿರ್ಮಿಸಿದ್ದಾರೆ. ಇದು ಆದಿಲ್ ಶಾಹಿಗಳ ವಾಸ್ತುಶ್ಯಲಿ ಹೊಂದಿರುವದು. ಮಸೀದಿಯ ಪ್ರವೇಶ ದ್ವಾರದ ಎರಡು ಬದಿಯಲ್ಲಿ ಎತ್ತರವಾದ ಮಿನಾರುಗಳು ಇದ್ದು, ಒಳಭಾಗದಲ್ಲಿ ಮೂರು ಕಮಾನುಗಳುಳ್ಳ ಮೆಹರಬ್ ಪ್ರಾರ್ಥನಾ ಸ್ಥಳವಿರುವುದು. ಇದರ ಪಕ್ಕದಲ್ಲಿ ಮೆಂಬರ ಇದೆ. ಗೋಡೆಯ ಮೇಲೆ ಚಿಕ್ಕ ಅರ್ಧ

ಚಂದ್ರಾಕೃತಿಯ ಮಿನಾರುಗಳಿವೆ. ಇಲ್ಲಿರುವ ಮಸೀದಿಯ ಪಶ್ಚಿಮ ಗೋಡೆಯಲ್ಲಿ ವಿಜಯಪುರ ಸುಲ್ತಾನ ಸೇವಕನಾದ ದಿನ್‌ದಾರಖಾನನು ಮಸೀದಿಯನ್ನು ನಿರ್ಮಿಸಿದ ಬಗ್ಗೆ ಪರ್ಶಿಯನ್ ಶಾಸನ ತಿಳಿಸುತ್ತದೆ.[೮೯]

## ಗಗನ್ ಮಹಲ್ ಮಸೀದಿ

ಇದು ಲಿಂಗಸೂಗೂರು ತಾಲ್ಲೂಕಿನ ಮುದಗಲ್ ಪಟ್ಟಣದಲ್ಲಿದ್ದು, ಬಾಗಲಕೋಟ ರಸ್ತೆಯಲ್ಲಿ ಬರುವ ಗಗನ್ ಮಹಲ್ ಹತ್ತಿರದಲ್ಲಿದೆ. ಇದು ಕ್ರಿ.ಶ.೧೬ನೇ ಶತಮಾನದಲ್ಲಿ ನಿರ್ಮಾಣವಾಗಿದ್ದು, ಪೂರ್ವಾಭಿಮುಖವಾಗಿದೆ. ಅಧಿಷ್ಠಾನದ ಭಾಗದಲ್ಲಿ ಕಲ್ಲುಗಳು ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ. ಸ್ಥಳೀಯ ಮುಸ್ಲೀಂ ಬಾಂಧವರು ರಂಜಾನ್ ಹಾಗೂ ಬಕ್ರೀದ ಹಬ್ಬದ ವೇಳೆಯಲ್ಲಿ ಸಾಮೂಹಿಕ ಪ್ರಾರ್ಥನೆ ಮಾಡಲು ತೆರಳುತ್ತಾರೆ. ಅಲ್ಲದೆ ರಂಜಾನ ಸಂದರ್ಭದಲ್ಲಿ ಉಪವಾಸ ವ್ರತದಲ್ಲಿ ೩೦ ದಿನ ಉಪವಾಸವಿದ್ದ ಎಲ್ಲಾ ಬಂದವರು ವ್ರತ ಬಿಡಲು ಮಸೀದಿಗೆ ಹೆಜ್ಜೆ ಇಡುತ್ತಾರೆ.

## ಜಾಮೀಯಾ ಮಸೀದಿ

ಇದು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೪ಕಿ.ಮೀ ಅಂತರದಲ್ಲಿರುವುದೇ ಕಸಬಾ ಲಿಂಗಸೂಗೂರು.ಇದು ಅಮೃತಲಿಂಗ ದೇವಾಲಯದ ಪಕ್ಕದಲ್ಲಿರುವುದು. ಇದನ್ನು ಅಲ್ಲಾಹನ ಮನೆಯೆಂದು ಮುಸ್ಲಿಂ ಬಾಂಧವರು ತಿಳಿದಿದ್ದಾರೆ. ಸ್ಥಳೀಯ ಮುಸ್ಲಿಂ ಬಾಂಧವರು ದಿನಕ್ಕೆ ೫ ಬಾರಿ ನಮಾಜ ಮಾಡಲು ತೆರಳುತ್ತಾರೆ. ರಂಜಾನ ಸಂದರ್ಭದಲ್ಲಿ ಉಪವಾಸ ವ್ರತದಲ್ಲಿ ೩೦ ದಿನ ಉಪವಾಸವಿದ್ದ ಎಲ್ಲಾ ಬಂದವರು ವ್ರತ ಬಿಡಲು ಮಸೀದಿಗೆ ಹೆಜ್ಜೆ ಇಡುತ್ತಾರೆ.[೯೦]

## ದರ್ಗಾಗಳು

ಸೂಫಿ ಸಂತರ ಸ್ಮಾರಕಗಳಿಗೆ ದರ್ಗಾ ಎನ್ನುವರು. ಸೂಫಿ ಪದದ ಅರ್ಥವನ್ನು ನೋಡುವು ದಾದರೆ, ಅನುಭಾವಿ, ಯೋಗಿ, ಮಹಾಪುರುಷ, ಸಿದ್ದಿಪುರುಷ ಎಂದರ್ಥಗಳಿವೆ. ಈ ಸೂಫಿ ಸಂತತಿ ಮಧ್ಯ ಏಶಿಯಾದ ಇಸ್ಲಾಂ ಜಗತ್ತಿನಲ್ಲಿ ಹುಟ್ಟಿದೆ.ಎಂದು ತಿಳಿಯಬಹುದಾಗಿದೆ.

## ರೆಹಮಾನ ದೂಲಾ ದರ್ಗಾ

ರೆಹಿಮಾನ ದೂಲಾ ದರ್ಗಾವು ಮುದಗಲ್ ಕೋಟೆಯ ಹೊರಗೆ ಪೂರ್ವದಿಕ್ಕಿನಲ್ಲಿ ೭ ಫರ್ಲಾಂಗ ದೂರದಲ್ಲಿದೆ. ಇದು ಒಂದು ದೂಡ್ಡ ವೇದಿಕಿಯ ಮೇಲೆ ಕಂಗೊಳಿಸುವಂತಿದೆ.

ಇಲ್ಲಿ ಪ್ರತಿವರ್ಷ ಉರುಸು ಮತ್ತು ಗಂಧ ಅತಿ ವೈಭವದಿಂದ ಜರುಗುತ್ತದೆ. ಉರುಸಿನ ೩ನೇ ದಿನ ಮತ್ತು ಮುಕ್ತಾಯದ ಅಂಗವಾಗಿ ಕುರಾನ್ ಪಠಣೆ ಮಾಡಿ ನಂತರ ಬಡಜನರಿಗೆ ಅನ್ನ ಸಂತರ್ಪಣೆ ಮಾಡುತ್ತಾರೆ. ರೆಹಮಾನ ದೂಲಾ ಹಾಗೂ ಅವರ ಐದು ಜನ ಶಿಷ್ಯರಾದ ನಿಜಾಮುದ್ದೀನ್ ಅವಲಿಯಾ, ಬುರಾದ್ದೀನ ಅವಾಲಿಯ, ಖಾಜಿಪೀರ ಸಾಹೇಬ, ಮುಣೇಶಹಿದ್ ಸಾಹೇಬ, ಮಸ್ತಾನಶಹಾ ಸೂಫಿಗಳು ಆದಿಲ್‌ಶಾಹಿ ಕಾಲದಲ್ಲಿ ಮುದಗಲ್‌ಗೆ ಬಂದು ನೆಲೆಸಿದ್ದರು.ಆಗಿನ ಸಂದರ್ಭದಲ್ಲಿ ಧರ್ಮಬೋಧನೆ ಮಾಡಿದ್ದರು ಎನ್ನಲಾಗಿದೆ. ಈ ಸೂಫಿಗಳ ಸಮಾಧಿ ಮಸ್ಕಿ ರಸ್ತೆಯಲ್ಲಿದೆ. ಇದು ಕ್ರಿ.ಶ.೧೬ನೇ ಶತಮಾನದಲ್ಲಿ ನಿರ್ಮಾಣಗೊಂಡಿದೆ. ಇಲ್ಲಿರುವ ಕಟ್ಟಡಕ್ಕೆ ದೂಡ್ಡ ಗ್ರಾನೈಟ್ ಕಲ್ಲುಗಳನ್ನು ಬಳಸಿದ್ದಾರೆ.[೮೮]

**ಹಜರತ್ ಹುಸೇನ ಆಲಂ ದರ್ಗಾ**

ಈ ಹುಸೇನ ಆಲಂ ದರ್ಗಾ ಮುದಗಲ್ ಕೋಟೆಯ ಒಳಗೆ ಪೂರ್ವದಿಕ್ಕಿನಲ್ಲಿ ಇದೆ. ಈ ದರ್ಗಾದಲ್ಲಿ ಮೊಹರಂ ಹಬ್ಬದ ಆಚರಣೆಯು ಅತಿ ವೈಭವದಿಂದ ನಡೆಯುತ್ತಿರುವುದರಿಂದ ಬಹು ಪ್ರಸಿದ್ಧವಾಗಿದೆ. ಮೊಹರಂ ಹಬ್ಬದಿಂದ ಭಕ್ತರಿಂದ ಸುಮಾರು ಒಂದು ಲಕ್ಷದಿಂದ ೨ ಲಕ್ಷದ ವರೆಗೆ ಹಣವು ಕಾಣಿಕೆಯಾಗಿ ಹರಿದು ಬರುತ್ತದೆ. ಸುಮಾರು ೪೫ ರಿಂದ ೫೦ ಸಾವಿರ ದಷ್ಟು ಜನಸಂಖ್ಯೆ ಉರಸಿನ ಸಮಯದಲ್ಲಿ ಸೇರರುತ್ತಾರೆ. ಈ ದರ್ಗಾವು ಕ್ರಿ.ಶ.೧೬ನೇ ಶತಮಾನದಲ್ಲಿ ಕೋಟೆಯ ಒಳಭಾಗದಲ್ಲಿ ನಿರ್ಮಾಣವಾಗಿದೆ. ಇತ್ತೀಚಿಗೆ ಇದನ್ನು ಜೀರ್ಣೋದ್ಧಾರ ಮಾಡಿದ್ದು, ಸುತ್ತಲು ಗ್ರಾನೈಟ್ ಕಲ್ಲಿನಿಂದ ಅಲಂಕಾರಗೊಳಿಸಿದ್ದಾರೆ. ತ್ರಿಕೂಟ ಆಕಾರದಲ್ಲಿದ್ದು, ವಿಶಾಲ ಸಭಾ ಮಂಟಪ ಇದೆ. ದುರ್ಗಾದ ಬಾಗಿಲು ಲಲಾಟದಲ್ಲಿ ಗಜಲಕ್ಷ್ಮಿ, ಬಾಗಿಲವಾಡುಗಳಲ್ಲಿ ಲತಾ ಬಲ್ಲಿ, ಸಿಂಹಗಳು ಇನ್ನಿತರ ಹಿಂದೂ ಮೂರ್ತಿ ಶಿಲ್ಪಗಳು ಸ್ಪಷ್ಟವಾಗಿ ಕಾಣಿಸುತ್ತದೆ.

ಇಂತಹ ಐತಿಹಾಸಿಕ ಭವ್ಯ ಪರಂಪರೆಯ ಹಿನ್ನೆಲೆಯನ್ನು ಹೊಂದಿರುವ ಮುದಗಲ್‌ನ ಹೆಸರಿನಲ್ಲಿ ಸರ್ಕಾರ ಪ್ರತಿ ವರ್ಷ ಉತ್ಸವವೊಂದನ್ನು ಮಾಡುವ ಮೂಲಕ ಗತಕಾಲದ ಇತಿಹಾಸ ಮರುಕಳಿಸಬಹುದಾಗಿದೆ ಎನ್ನುತ್ತಾರೆ[೮೯]ಸ್ಥಳೀಯ ಗ್ರಾಮಸ್ಥರು.

**ಹಜರತ ಅಮೀನುದ್ದೀನ್ ಬಾಬ ದರ್ಗಾ**

ಇದು ಲಿಂಗಸೂಗೂರು ತಾಲ್ಲೂಕು ಕೇಂದ್ರದಿಂದ ದಕ್ಷಿಣ ದಿಕ್ಕಿಗೆ ೪ಕಿ.ಮೀ ಅಂತರದಲ್ಲಿರುವುದೇ ಕಸಬಾ ಲಿಂಗಸೂಗೂರು. ಇದು ಪುರಸಭೆ ವ್ಯಾಪ್ತಿಯಲ್ಲಿ ಬರುತ್ತದೆ. ದರ್ಗಾವು ಗ್ರಾಮದಿಂದ ೨ ಕಿ.ಮೀ.ದೂರದಲ್ಲಿದೆ. ಇಲ್ಲಿ ಜಾತಿ, ಮತ, ಪಂಥ, ಮರೆತು

ಎಲ್ಲಾ ಧರ್ಮ ವರ್ಗದವರು ಈ ಉರುಸನ್ನು ಆಚರಿಸುವ ಸಂದರ್ಭದಲ್ಲಿ ದರ್ಗಾಕ್ಕೆ ಬರುವರು. ಈ ಉರುಸನ್ನು ಏಪ್ರಿಲ್ ತಿಂಗಳು ಎರಡನೇ ವಾರದಲ್ಲಿ ಆಚರಿಸಲಾಗುತ್ತದೆ. ಆ ಸಂದರ್ಭದಲ್ಲಿ ಖವಾಲಿ ಕಾರ್ಯಕ್ರಮಗಳು ಜರುಗುತ್ತವೆ. ನೋಡುಗರಿಗೆ ವಿವಿಧ ಕಾರ್ಯಕ್ರಮಗಳು ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತವೆ.[೧೦]

**ಅಡಿಟಿಪ್ಪಣಿಗಳು**

೧. ಡಾ.ಸಿಎಸ್.ವಾಸುದೇವನ್, **ಕರ್ನಾಟಕ ದೇವಾಲಯ ಕೋಶ: ರಾಯಚೂರು ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨, ಪು.೯೧

೨. ದೇವರಕೊಂಡಾರೆಡ್ಡಿ(ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩, ಪು.೧೫೭

೩. ಅದೇ, ಪು.೨೨೨

೪. ಅದೇ, ಪು.೧೨೩

೫. ಅದೇ, ಪು.೧೫೩

೬. ಡಾ.ಎಸ್.ವಾಸುದೇವನ್, **ಪೂರ್ವೋಕ್ತ,** ೨೦೧೩, ಪು.೧೦೧

೭. ಡಾ.ಅಮರೇಶ ಯತಗಲ್, **ಇತಿಹಾಸ ಮಂಥನ,** ಅದಿತಿ ಪ್ರಕಾಶನ, ೨೦೦೭, ಪು.೧೫

೮. ಡಾ.ಎಸ್.ವಾಸುದೇವನ್, **ಪೂರ್ವೋಕ್ತ,** ೨೦೧೩, ಪು.೧೦೨

೯. ದೇವರಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೧೩, ಪು.೧೫೪

೧೦. ಅದೇ, ಪು.೧೬೧

೧೧. ಡಾ.ಎಸ್.ವಾಸುದೇವನ್, **ಪೂರ್ವೋಕ್ತ,** ೨೦೧೩, ಪು.೧೦೭

೧೨. ಅದೇ, ಪು.೧೯೯

೧೩. ಅದೇ, ಪು.೧೧೧

೧೪. ದೇವರಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೧೩, ಪು.೧೮೨

೧೫. ಆರ್.ವಿ.ಗುಮಾಸ್ತ, **ಮುದಗಲ್ಲಿನ ದೇವಾಲಯಗಳು, ದೋ-ಅಬ್ ರಾಯಚೂರು ಇತಿಹಾಸ,** ಅಮರೇಶ ಯತಗಲ್(ಸಂ), ಪು.೨೭೪

೧೬. ದೇವರಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೧೩, ಪು.೧೮೦

೧೭.ಆರ್.ವಿ.ಗುಮಾಸ್ತ, **ಪೂರ್ವೋಕ್ತ,** ಪು.೨೭೪

೧೮. ದೇವರಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೧೩, ಪು.೧೫೧

೧೯. ಡಾ.ಎಸ್.ವಾಸುದೇವನ್, **ಪೂರ್ವೋಕ್ತ,** ೨೦೧೩, ಪು.೧೧೬

೨೦. ಅದೇ, ಪು.೧೧೬

೨೧.ಅದೇ, ಪು.೧೧೫

೨೨. ಅದೇ, ಪು.೯೪

೨೩. ಶಂಕ್ರಪ್ಪ ದೊಡ್ಡಪ್ಪ, ಆನೆಗುಡಿ ಪೂಜಾರಿ ಇವರ ಹೇಳಿಕೆಯಿಂದ

೨೪. ಡಾ.ಎಸ್.ವಾಸುದೇವನ್, **ಪೂರ್ವೋಕ್ತ,** ೨೦೧೩, ಪು.೯೨

೨೫. ಅದೇ, ಪು.೯೫

೨೬. ಅದೇ, ಪು.೯೩

೨೭. ಡಾ.ಎಸ್.ವಾಸುದೇವನ್, **ಪೂರ್ವೋಕ್ತ,** ೨೦೧೩, ಪು.೧೧೭

೨೮. ಅದೇ, ಪು.೧೦೮

೨೯. ಅದೇ, ಪು.೧೦೩

೩೦. ಡಾ.ಅಮರೇಶ ಯತಗಲ್, **ಇತಿಹಾಸ ಇಂಚರ,** ಅದಿತಿ ಪ್ರಕಾಶನ, ೨೦೦೭, ಪು.೨

೩೧. ಡಾ.ಶರಣಪ್ಪ, **ಮುದಗಲ್ ಇತಿಹಾಸ,** ಸಾಗರ ಪ್ರಕಾಶನ, ೨೦೧೭, ಪು.೪೫

೩೨. ಹುಸೇನಪ್ಪ, ದಲಿತ ಸಂಘಟನೆಯ ಮುಖಂಡರು, ವಯಸ್ಸು ೩೯, ಮುದಗಲ್ ಇವರ ಹೇಳಿಕೆಯಿಂದ

೩೩. ಮುತ್ತಪ್ಪ, ದಲಿತ ಸಂಘಟನೆಯ ಮುಖಂಡರು, ಮುದಗಲ್ ಇವರ ಹೇಳಿಕೆಯಿಂದ

೩೪. ಗಿರಿರಾಜ ಹೊಸಮನಿ, **ಲಿಂಗಸೂಗೂರು ತಾಲ್ಲೂಕು ದರ್ಶನ,** ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೮೬, ಪು.೨೦

೩೫. ರಡ್ಡೆಪ್ಪಹಳ್ಳಿ, **ರಾಯಚೂರು ಕೋಟೆ,** ಅರುಣೋದಯ ಪ್ರಕಾಶನ, ೨೦೧೭, ಪು.೧೮

೩೬. ಡಾ.ಅರಮೇಶ ಯತಗಲ್, **ಪೂರ್ವೋಕ್ತ,** ೨೦೦೭, ಪು.೧೪

೩೭. ಪ್ರಜಾವಾಣಿ ದಿನಪತ್ರಿಕೆ, **ವಿಶೇಷ ಪುರವಣಿ,** ಕರ್ನಾಟಕ ದರ್ಶನ, ದಿನಾಂಕ ೧೬-೦೯-೨೦೧೦

೩೮. ದೇವರಕೊಂಡಾರೆಡ್ಡಿ(ಸಂ), **ಪೂರ್ವೋಕ್ತ,** ೨೦೧೩, ಪು.೧೯೦

೩೯. ಅದೇ, ಪು.೧೮೯

೪೦. ಅದೇ, ಪು.೩೧೪

೪೧. ಅದೇ, ಪು.೨೦೭

೪೨. ಅದೇ, ಪು.೨೦೦

೪೩. ಡಾ.ಚನ್ನಬಸಪ್ಪ ಎಸ್.ಪಾಟೀಲ, **ಕರ್ನಾಟಕ ಕೋಟೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೧೧೦

೪೪. **ಛಾವಣಿ,** ಸ್ಮರಣ ಸಂಚಿಕೆ, ಸ್ವಾಗತ ಸಮಿತಿ ಮೂರನೇ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ, ೨೦೧೬, ಪು.೫೦

೪೫. ಸಂಗಮೇಶ ತಿಮ್ಮಣ್ಣ, ಕೆ.ಎಸ್.ಆರ್.ಟಿ.ಸಿ. ಚಾಲಕರು, ಮುದಗಲ್ ಇವರ ಹೇಳಿಕೆಯಿಂದ

೪೬. ರೆಡ್ಡೆಪ್ಪಹಳ್ಳಿ, **ಪೂರ್ವೋಕ್ತ,** ೨೦೧೭, ಪು.೨೧

೪೭. ಡಾ.ಅಮರೇಶ ಯತಗಲ್, **ಪೂರ್ವೋಕ್ತ,** ೨೦೧೭, ಪು.೨೧

೪೮. ಅದೇ, ಪು.೧೭

೪೯. ಸುಜಾತ ಮಲ್ಲನಗೌಡ, **ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು: ಒಂದು ಅಧ್ಯಯನ,** ಪಿಎಚ್.ಡಿ.ಮಹಾಪ್ರಬಂಧ, ಪು.೧೫೨

೫೦. ಅದೇ, ಪು.೧೫೨

೫೧. ಅದೇ, ಪು.೧೫೩

೫೨. ಅದೇ, ಪು.೧೫೪

೫೩. ನಾಗರಾಜ, ಅರ್ಥಶಾಸ್ತ್ರ ಉಪನ್ಯಾಸಕರು, ಆನೆಹೊಸರು ಇವರ ಹೇಳಿಕೆಯಿಂದ

೫೪. ಸಂಜೀವಪ್ಪ ಹುನಕುಂಟಿ, ಮಾಜಿ ಗ್ರಾಮಪಂಚಾಯತಿ ಸದಸ್ಯರು, ಮಾವಿನಬಾವಿ ಇವರ ಹೇಳಿಕೆಯಿಂದ

೫೫. **ಭಿಲ್ಲಮ್ಮ ಸ್ಮರಣ ಶಂಚಿಕೆ,** ೨ನೇ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ, ೨೦೦೪, ಪು.೦೫

೫೬. ಡಾ.ಅಮರೇಶ ಯತಗಲ್, **ಪೂರ್ವೋಕ್ತ,** ೨೦೦೭, ಪು.೪

೫೭. ಅದೇ, ಪು.೫

೫೮. ಅದೇ, ಪು.೬

೫೯. ಡಾ. ಅಮರೇಶ ಯತಗಲ್, **ಏಕಲವ್ಯ,** ರಂಗಮ್ಮ ರಾಮನಗೌಡ ಪಾಟೀಲ ಪ್ರಕಾಶನ, ೨೦೦೮, ಪು.೧೬

೬೦. **ಇತಿಹಾಸ ದರ್ಶನ,** ಸಂಪುಟ ೧೫, ಕರ್ನಾಟಕ ಇತಿಹಾಸ ಅಕಾಡೆಮಿ, ೨೦೦೦, ಪು.೧೯೩

೬೧. **ಭಿಲ್ಲಮ** ಸ್ಮರಣ ಸಂಚಿಕೆ, ಪೂರ್ವೋಕ್ತ, ೨೦೦೪, ಪು.೩೦

೬೨. ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ಶಾ.ಸಂ.೧೨೫, ಪು.೨೧೬

೬೩. ಡಾ. ಅಮರೇಶ ಯತಗಲ್, **ಕಸಬಾ ಲಿಂಗಸೂಗೂರು ಶ್ರೀ ಕುಪ್ಪಿಭೀಮ,** ಪಲ್ಲವಿ ಪಬ್ಲಿಕೇಶನ್, ೨೦೧೫, ಪು.೫೨

೬೪. ಡಾ. ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೧೩, (ಶಾ.ಸಂ.೧೨೩), ಪು.೨೨೩

೬೫. ಶಂಕ್ರಪ್ಪ ತಾ., ದೊಡ್ಡಪ್ಪ ಆನೆಹೊಸೂರು ಇವರ ಹೇಳಿಕೆಯಿಂದ

೬೬. ಸಿದ್ದಪ್ಪ, ಹೂವಿನಬಾವಿ, ಅವರ ಹೇಳಿಕೆಯಿಂದ

೬೭. ಪ್ರೊ. ಶಿವಶರಣಯ್ಯ ಸೊಪ್ಪಿಮಠ, **ಸ್ವರ್ಣಪ್ರಭ,** ಸ್ಮರಣ ಸಂಪುಟ, ವಜ್ರಮಹೋತ್ಸವ ಸಮಿತಿ, ೨೦೦೭, ಪು.೨೩

೬೮. ಡಾ. ಅಮರೇಶ ಯತಗಲ್, **ಪೂರ್ವೋಕ್ತ,** ೨೦೦೭

೬೯. ವಿಜಯಲಕ್ಷ್ಮೀ, **ಹಟ್ಟಿ ಚಿನ್ನದ ಗಣಿ: ಚಾರಿತ್ರಿಕ ಹಾಗೂ ಸಮಾಜೋ ಆರ್ಥಿಕ ಅಧ್ಯಯನ,** ೨೦೦೬, ಪಿಎಚ್.ಡಿ. ಮಹಾಪ್ರಬಂಧ, ಪು.೧೫

೭೦. ರಾಜಶೇಖರ ದಂಬಳ, ಸಹಾಯಕ ಆಯುಕ್ತರು ಲಿಂಗಸೂಗೂರು ಇವರ ಹೇಳಿಕೆ.

೭೧. ಅಮರೇಶ, **ಲಿಂಗಸೂಗೂರಿನ ಐತಿಹಾಸಿಕ ಕುರುಹುಗಳ ಕುರಿತು ಅಧ್ಯಯನ,** ಪ್ರಾಯೋಗಿಕ ಕಾರ್ಯ ಬಿ.ಎಡ್.ಪ್ರಬಂಧ, ೨೦೦೭, ಪು.೧೭

೭೨. ಡಾ. ಅಮರೇಶ ಯತಗಲ್, **ಪೂರ್ವೋಕ್ತ,** ೨೦೧೫, ಪು.೪

೭೩. **ಭಿಲ್ಲಮ,** ಸ್ಮರಣ ಸಂಚಿಕೆ, ೨೦೦೪, ಪು.೭೩

೭೪. ಚಂದ್ರಶೇಖರ ನಾರಣಾಪುರ, **ಕರ್ನಾಟಕದ ವೀರಶೈವ ಮಠಗಳು,** ಗೆಳೆಯ ಪ್ರಕಾಶನ, ೨೦೦೨, ಪು.೪೦

೭೫. ಅದೇ

೭೬. ಡಾ.ದೇವರಕೊಂಡಾರೆಡ್ಡಿ, **ಪೂರ್ವೋಕ್ತ,** ೨೦೧೩, ಪು.೧೫೭

೭೭. ಡಾ.ಕೆ.ಶಶಿಕಾಂತ, **ಪೂರ್ವೋಕ್ತ,** ೨೦೧೦, ಪು.೩೭

೭೮. ಗಿರಿರಾಜ ಹೊಸಮನಿ, **ಪೂರ್ವೋಕ್ತ,** ೧೯೮೬, ಪು.೩೬

೭೯. ರಮೇಶ ಮೂಲಗೆ, **ಹೈದ್ರಾಬಾದ್-ಕರ್ನಾಟಕ ವೀರಶೈವ ಮಠಗಳು: ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪಿಎಚ್.ಡಿ ಮಹಾಪ್ರಬಂಧ, ೨೦೦೨, ಪು.೧೧೯

೮೦. ಡಾ. ಅಮರೇಶ ಯತಗಲ್, **ಕಸಬಾ ಲಿಂಗಸೂಗೂರಿನ ಅಧಿದೈವ ಶ್ರೀ ಕುಪ್ಪಿಭೀಮ,** ಪಲ್ಲವಿ ಪಬ್ಲಿಕೇಶನ್, ೨೦೧೫, ಪು.೫೮

೮೧. ಡಾ.ಶರಣಪ್ಪ,ಮುದಗಲ್ **ಇತಿಹಾಸ,** ಸಾಗರ ಪ್ರಕಾಶನ, ೨೦೧೭. ಪು.೫೭

೮೨. ತಿಮ್ಮಣ್ಣ ತಂದಿ ಸಂಗಪ್ಪ, ಮುದಗಲ್ ಇವರ ಹೇಳಿಕೆಯಿಂದ

೮೩. ಡಾ.ಶರಣಪ್ಪ, **ಪೂರ್ವೋಕ್ತ,** ೨೦೧೭, ಪು.೫೬

೮೪. ಅದೇ ಪು.೫೭

೮೫. ಅದೇ ಪು.೫೭

೮೬. ಅದೇ ಪು.೫೮

೮೭. ಹನುಮಂತಪ್ಪ ಕಸಬಾ ಲಿಂಗಸೂಗೂರು ಇವರ ಹೇಳಿಕೆಯಿಂದ

೮೮. ಜಯಶ್ರೀ ಕುಲಕರ್ಣಿ, **ಐತಿಹಾಸಿಕ ಸ್ಥಳವಾದ ಮುದಗಲ್ ಕೋಟೆಯ ಗತವೈಭವದ ಚರಿತ್ರೆಯ ಕುರಿತು ಒಂದು ಅಧ್ಯಯನ,** ಪಾಯೋಗಿಕ ಕಾರ್ಯ ಬಿ.ಎಡ್.ಪ್ರಬಂಧ, ೨೦೦೭, ಪು.೩೪

೮೯. ಗುರುಬಸಪ್ಪ ಸಜ್ಜನ್ ಮುದಗಲ್ ಇವರ ಹೇಳಿಕೆಯಿಂದ

೯೦. ಡಾ.ಅಮರೇಶ ಯತಗಲ್, **ಪೂರ್ವೋಕ್ತ,** ೨೦೧೫, ಪು.೬೩

ಅಧ್ಯಾಯ : ಆರು

# ಸಮಾರೋಪ

ಇತಿಹಾಸ ರಚನೆಗೆ ಆಕರಗಳೇ ಆಧಾರ. ಆಕರಗಳಿಲ್ಲದೆ ಇತಿಹಾಸ ನಿರ್ಮಿಸುವುದು ಅಸಾಧ್ಯ ಎಂದು ಹೇಳಬಹುದು. ಇದಕ್ಕೆ ಕಾರಣ ಗತಕಾಲದ ಇತಿಹಾಸಕ್ಕೆ ಮರುಜೀವ ತುಂಬುವುದೇ ಆಕರಗಳು. ಇವುಗಳ ಅಡಿಯಲ್ಲಿ ವ್ಯವಸ್ಥಿತವಾದ ಅಧ್ಯಯನಕ್ಕೆ ಪ್ರಾಕ್ತನ ಅಕರಗಳು ನಿಖರವಾದ ಮಾಹಿತಿಯನ್ನು ಒದಗಿಸುತ್ತವೆ. ಆಯಾ ಕಾಲದ ಜನರು ಕೊರೆಯಿಸಿದ ಶಾಸನಗಳು ಅರ್ಥಬದ್ಧವಾದ ಇತಿಹಾಸವನ್ನು ನಿರ್ಮಿಸಲು ಸಹಾಯಕವಾಗಿವೆ. ಜೊತೆಗೆ ಅಲ್ಲಿನ ಜನರ ರಾಜಕೀಯ ಬಗ್ಗೆ ತಿಳಿಯಲು ಆ ಕಾಲದದಲ್ಲಿ ನಿರ್ಮಿಸಿದ ದೇವಾಲಯಗಳ ಮೂರ್ತಿಶಿಲ್ಪ ಮತ್ತು ಶಾಸನಗಳು ಪ್ರಮುಖ ಆಕರಗಳಾಗಿವೆ. ಪ್ರಸ್ತುತ ಲಿಂಗಸೂಗೂರು ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳಿಗೆ ಸೀಮಿತ ಮಾಡಿಕೊಂಡು ಶಾಸನಗಳು, ದೇವಾಲಯಗಳು, ಕೋಟೆಗಳು, ಮಠಗಳು, ಬಸದಿಗಳು, ಮೂರ್ತಿಶಿಲ್ಪಗಳ ಆಕರಗಳನ್ನು ಆಧಾರವಾಗಿಟ್ಟುಕೊಂಡು ಈ ಪ್ರಬಂಧ ರಚಿಸುವ ಪ್ರಯತ್ನವನ್ನು ಬರೆಯಲಾಗಿದೆ. ಪ್ರಸ್ತುತ ಪ್ರಬಂಧವನ್ನು ಆರು ಅಧ್ಯಾಯಗಳಲ್ಲಿ ವಿಭಾಗಿಸಲಾಗಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ಪೂರ್ವಾಧ್ಯಯನಗಳ ಸಮೀಕ್ಷೆ ಮತ್ತು ವಿಧಾನವನ್ನು ವಿವರಿಸಲಾಗಿದೆ. ಈ ಅಧ್ಯಯನದ ಉದ್ದೇಶ ಲಿಂಗಸೂಗೂರು ತಾಲ್ಲೂಕಿನ ಶಾಸನಗಳು ಮತ್ತು ಸ್ಮಾರಕಗಳ ಮಾಹಿತಿಯನ್ನು ಒಂದೆಡೆ ದಾಖಲಿಸಿ ಅಧ್ಯಯನ ಮಾಡುವುದಾಗಿದೆ. ಪೂರ್ವಾಧ್ಯಯನಗಳ ಸಮೀಕ್ಷೆಯನ್ನು ಇಲ್ಲಿ ಮಾಡುವುದರ ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಪ್ರಕಟಿತ ಆಕರಗಳನ್ನು ಪ್ರಧಾನವಾಗಿರಿಸಿಕೊಳ್ಳಲಾಗಿದೆ. ಆಕರಗ್ರಂಥ, ವಿಧಾನ, ತೌಲನಿಕ ಅಧ್ಯಯನ ಕ್ಷೇತ್ರ ಕಾರ್ಯವನ್ನೊಳಗೊಂಡು ಎಲ್ಲಾ ವಿಧಾನಗಳನ್ನು ಅನುಸರಿಸುವುದು ಮೊದಲ ಅಧ್ಯಾಯದ ವಿಶೇಷತೆಯಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭೂ ಭೌಗೋಳಿಕ ಅಂಶಗಳಾದ ವಿಸ್ತೀರ್ಣ, ಜನಸಂಖ್ಯೆ, ಹವಾಮಾನ, ಅರಣ್ಯ, ಖನಿಜ ನಿಕ್ಷೇಪಗಳು, ಮಳೆ, ಬೆಳೆಗಳು, ಮಣ್ಣು, ಯಾವ ರೀತಿ ಪ್ರಭಾವ ಬೀರಿದೆ ಎಂಬುವುದನ್ನು ವಿವರಿಸಲಾಗಿದೆ. ಐತಿಹಾಸಿಕ ಹಿನ್ನೆಲೆಯ ಅಡಿಯಲ್ಲಿ ತಾಲ್ಲೂಕಿನ ಪ್ರಾಗೈತಿಹಾಸಿಕ ಕಾಲದ ಅವಶೇಷಗಳ ಕುರಿತು ಚರ್ಚಿಸಲಾಗಿದೆ. ಮಸ್ಕಿ, ಪಿಕ್ಳಿಹಾಳ, ಗೌಡುರು, ಮಟ್ಟೂರು, ಮಾಚನೂರು, ಕರಡಿಕಲ್ ಇತ್ಯಾದಿ ಪ್ರಾಗೈತಿಹಾಸಿಕ ಕಾಲದ ತಾಣಗಳಾಗಿದ್ದರ ಬಗ್ಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಶಾಸನಗಳ ವೈವಿಧ್ಯತೆಯಲ್ಲಿ ಲಿಂಗಸೂಗೂರು ತಾಲ್ಲೂಕಿನ ಕಲ್ಯಾಣಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ದಾನಶಾಸನಗಳು, ವೀರಗಲ್ಲುಗಳು, ಪ್ರಶಸ್ತಿ ಶಾಸನಗಳ ಕುರಿತಿದೆ. ಒಟ್ಟಾರೆ ತುಲನಾತ್ಮಕವಾಗಿ ನೋಡಿದರೆ ಇಲ್ಲಿ ದಾನ ಶಾಸನಗಳೇ ಹೆಚ್ಚಾಗಿರುವುದು ಕಾಣಬಹುದು. ವೀರಗಲ್ಲುಗಳನ್ನು ಇಲ್ಲಿ ಕಲಾ ದೃಷ್ಠಿಯಿಂದ ನೋಡಲು ಮಾತ್ರ ಸಾಧ್ಯ.ಇವು ಅಂದಿನ ಪರಂಪರೆಯ ಪ್ರತೀಕವಾಗಿವೆ. ಮಧ್ಯಕಾಲೀನ ಮಹಾಸತಿಗಲ್ಲುಗಳ ಭಾಗದಲ್ಲಿ, ಮಹಾಸತಿ ಹೋಗುವ ಬಗೆಯನ್ನು ವಿವರಿಸಿದೆ. ಈ ಪರಿಸರದಲ್ಲಿ ಮಹಾಸತಿಗಲ್ಲುಗಳಲ್ಲಿನ ವೈವಿಧ್ಯತೆ, ಮಹಾಸತಿಯಾಗುವ ಸನ್ನಿವೇಶ, ಕಲಾಪರಂಪರೆಯನ್ನು ತಿಳಿಸಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಮೂರ್ತಿಶಿಲ್ಪಗಳ ಬಗ್ಗೆ ಚರ್ಚಿಸಲಾಗಿದೆ. ಗಾಣಪತ್ಯ, ಶೈವ, ವೈಷ್ಣವ, ಶಾಕ್ತ ಮತ್ತು ಜೈನ ಮೂರ್ತಿಶಿಲ್ಪದ ಕಲೆ ಲಿಂಗಸೂಗೂರು ಪರಿಸರದಲ್ಲಿ ಬೆಳೆದು ಬಂದಿದೆ. ಗಾಣಪತ್ಯ ಮೂರ್ತಿಶಿಲ್ಪಗಳು ಹುನಕುಂಟಿ, ಮುದಗಲ್, ಕರಡಿಕಲ್, ಕೋಟಾ, ಗುರುಗುಂಟಿಯಲ್ಲಿ ಕಂಡುಬರುತ್ತವೆ. ವಿಷ್ಣುವಿನ ಮೂರ್ತಿಶಿಲ್ಪಗಳು ಮುದಗಲ್‌ನಲ್ಲಿ ದೊರೆತಿದ್ದು, ವಿಷ್ಣುವಿನ ವೈವಿದ್ಯ ಮೂರ್ತಿಶಿಲ್ಪಗಳು ಕಲಾ ಪ್ರೌಢಮೆಯನ್ನು ಬಿಂಬಿಸುತ್ತವೆ. ಇನ್ನೂ ಜೈನ ಪರಂಪರೆಯ ೨೪ನೇ ತೀರ್ಥಂಕರರಲ್ಲಿ ಪಾರ್ಶ್ವನಾಥ ಶಿಲ್ಪವು ಮುದಗಲ್ ಗ್ರಾಮದಲ್ಲಿ ಕಂಡುಬರುತ್ತದೆ. ಇವು ಅಂದಿನ ಜೈನಧರ್ಮ ಅಸ್ತಿತ್ವದಲ್ಲಿರುವದನ್ನು ತೋರಿಸುತ್ತದೆ. ಶಾಕ್ತ ಶಿಲ್ಪಗಳಲ್ಲಿ ಗಜಲಕ್ಷ್ಮಿ, ಸಪ್ತಮಾತೃಕೆಯರ ಶಿಲ್ಪಗಳ ಬಗ್ಗೆ ವಿವರಿಸಿದೆ. ಇಲ್ಲಿ ನಾಗಶಿಲ್ಪಗಳು ಕಂಡು ಬಂದಿದ್ದು, ನಾಗರಾಧನೆ ಪರಿಕಲ್ಪನೆಯನ್ನು ತಿಳಿಸುತ್ತದೆ. ಈ ಎಲ್ಲಾ ಶಿಲ್ಪಗಳು ಆಯಾ ಧರ್ಮದ ಸಮಕಾಲಿನ ಆಚಾರ–ವಿಚಾರ, ನಂಬಿಕೆ, ಸಂಪ್ರದಾಯಗಳ ಪರಿಕಲ್ಪನೆಗೆ ಇಲ್ಲಿನ ಶಿಲ್ಪಗಳು ಸಾಕ್ಷಿಯಾಗಿ ನಿಂತಿವೆ.

ಐದನೆಯ ಅಧ್ಯಾಯದಲ್ಲಿ ಸ್ಮಾರಕಗಳ ಬಗ್ಗೆ ಚರ್ಚಿಸಲಾಗಿದೆ. ಲಿಂಗಸೂಗೂರು ತಾಲ್ಲೂಕಿನಲ್ಲಿ ದೊರೆಯುವ ಪ್ರಮುಖ ದೇವಾಲಯಗಳನ್ನು ಯಾವ ಯಾವ ಅರಸರ ಕಾಲದಲ್ಲಿ ನಿರ್ಮಿಸಲಾಗಿದೆ ಎನ್ನುವದನ್ನು ಆ ದೇವಾಲಯಗಳ ಕಾಲ ಮತ್ತು ಸೌಂದರ್ಯ ಮತ್ತು ಶಾಸನಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಈ ತಾಲ್ಲೂಕಿನಲ್ಲಿ

ಕಂಡು ಬರುವ ಕೋಟೆ ಕೋತ್ತಲುಗಳನ್ನು ಮತ್ತು ಆ ಪ್ರದೇಶದ ಅಳಿದುಳಿದ ಸ್ಮಾರಕ ಅವಶೇಷಗಳನ್ನು ಕ್ಷೇತ್ರಕಾರ್ಯದಲ್ಲಿ ಗಮನಿಸಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ಶಾಸನಗಳು ನಂಬಲಾರ್ಹ ಐತಿಹಾಸಿಕ ದಾಖಲೆಗಳಾಗಿರುವುದರಿಂದ ಅವುಗಳನ್ನು ಸಂರಕ್ಷಿಸುವುದು ನಮ್ಮ ನಿಮ್ಮೆಲ್ಲರ ಕರ್ತವ್ಯ ಜೊತೆಗೆ ಜವಾಬ್ದಾರಿ ಕೂಡಾ ಹೌದು. ಅವುಗಳನ್ನು ನಿರ್ಲಕ್ಷಿಸಿದರೆ ಇತಿಹಾಸವು ಕುರುಡಾಗುತ್ತದೆ. ಹಾಗೆಯೇ ಶಾಸನಗಳು ಪ್ರಾಚೀನ ಕಾಲದ ಒಳಗೆ ಪ್ರವೇಶಿಸುವ ಮುಕ್ತದ್ವಾರಗಳಿದ್ದಂತೆ. ಅವುಗಳ ಅಧ್ಯಯನದ ಮೂಲಕ ಪ್ರಾಚಿನವಾದ ಎಷ್ಟೋ ಐತಿಹಾಸಿಕ ವಿವರಗಳನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಆರೋಗ್ಯ ಪ್ರತಿಯೊಬ್ಬರ ಸಂಪತ್ತು ಇರುವ ಹಾಗೆ, ಶಾಸನಗಳು ನಮ್ಮ ನಾಡಿನ ಸಂಪತ್ತು, ಅಮೂಲ್ಯ ನಿಧಿ ಎಂದರೆ ತಪ್ಪಾಗಲಿಕ್ಕಿಲ್ಲ. ಕಳೆದು ಹೋದ ವಸ್ತುಗಳನ್ನು, ಭೂಮಿ, ಸೀಮೆಯನ್ನು ಮರಳಿ ಸಂಪಾದಿಸಬಹುದು. ಶಾಸನ ಸಂಪತ್ತು ಅಂತಹದಲ್ಲ. ಇದು ನಮ್ಮ ಸಂಸ್ಕೃತಿಯ ಜ್ಞಾನದ ಗಣಿ. ಈ ಗಣಿಯನ್ನು ನಾವು ಸಂರಕ್ಷಿಸಬೇಕು, ನಿರಂತರವಾಗಿ ಸಂಶೋಧಿಸಬೇಕು. ಈ ಕೆಲಸವನ್ನು ಕೇವಲ ಸರ್ಕಾರ, ಪ್ರಾಚ್ಯವಸ್ತು ಇಲಾಖೆಗಳು, ವಿಶ್ವವಿದ್ಯಾಲಯಗಳು ಸಂರಕ್ಷಿಸಲು ಸಾಧ್ಯವಿಲ್ಲ. ಇಂದು ಪ್ರಕೃತಿಯ ವಿಕೋಪದಿಂದಾಗಿ, ಜನರ ಮೂಢನಂಬಿಕೆ, ಅಜ್ಞಾನಗಳಿಂದ ಶಾಸನಗಳು ಅಳಿವಿನ ಅಂಚಿನಲ್ಲಿವೆ ಹಾಗೂ ಸಂಪೂರ್ಣ ನಾಶವಾಗುತ್ತಲಿವೆ. ಈ ತಾಲ್ಲೂಕಿನಲ್ಲಿ ಬರುವ ಯಾವುದೇ ಗ್ರಾಮಗಳು ಶಾಸನಗಳನ್ನು ಸಂರಕ್ಷಿಸದಿರುವುದು ತುಂಬ ದುರಾದೃಷ್ಟಕರ ವಿಷಯ. ಕ್ಷೇತ್ರಕಾರ್ಯದ ನಿಮಿತ್ಯವಾಗಿ ನವಿಲೆ ಗ್ರಾಮಕ್ಕೆ ತೆರಳಿದಾಗ, ಈ ಹಿಂದೆ ನೋಡಿದ್ದ ಪುರಾತನ ಜಡೆಶಂಕರ ದೇವಾಲಯ ಕಾಣದಿದ್ದರಿಂದ ದಿಕ್ಕು ತೋಚದಂತಾಯಿತು. ತಾಯಿಯನ್ನು ಕಳೆದು ಕೊಂಡಾಗ ಎಷ್ಟು ಸಂಕಟಪಟ್ಟಿದ್ದೆ ಅದರ ದುಪ್ಪಟ್ಟು ಸಂಕಟವಾಯಿತು. ಆ ದೇವಾಲಯವನ್ನು ಕೆಡವಿ ನೂರಾರು ಕೋಟಿ ರೂಪಾಯಿ ವೆಚ್ಚದಲ್ಲಿ ಹೊಸದಾಗಿ ನಿರ್ಮಾಣ ಮಾಡಲು ಕಟ್ಟಡದ ತಳಪಾಯ ಹಾಕಿದ್ದಾರೆ. ಈ ಹಿಂದೆ ಇದ್ದ ದೇವಾಲಯದ ಮುಂಭಾಗದಲ್ಲಿರುವ ಶಾಸನ, ಆವರಣದಲ್ಲಿದ್ದ ಶಾಸನಗಳು ದೇವಾಲಯದಿಂದ ಸ್ಥಳಾಂತರ ಮಾಡುತ್ತಿರುವ ಸಂದರ್ಭದಲ್ಲಿ ಸಂಪೂರ್ಣವಾಗಿ ತ್ರುಟಿತವಾಗಿವೆ. ಹಿಗಾಗಿ ಪ್ರಾಚೀನ ದೇವಾಲಯ ಅಲ್ಲಿ ಇತ್ತು ಎನ್ನುವುದಕ್ಕೆ ಯಾವುದೇ ಗುರುತು ಸಿಗದಂತಾಗಿದೆ.

ಈ ತಾಲ್ಲೂಕಿನಲ್ಲಿ ಬರುವ ಮುದಗಲ್, ಜಲದುರ್ಗ, ಗುಡಗುಂಟಿ, ಕೋಟಾ, ಹೊನ್ನಳ್ಳಿ, ಹುನಕುಂಟಿ ಮೊದಲಾದ ಕೋಟೆಗಳು ಒಂದಾನೊಂದು ಕಾಲದಲ್ಲಿ ಅರಸರುಗಳನ್ನು ಶತ್ರುಗಳಿಂದ ರಕ್ಷಣೆ ಮಾಡಿದ್ದು ನಿಜ. ಆದರೆ ಇಂದು ತಮ್ಮ ವೈಭವದ ಇತಿಹಾಸವನ್ನು ಕಳೆದುಕೊಳ್ಳುತ್ತಿವೆ. ಕಾರಣಗಳನ್ನು ಪಟ್ಟಿ ಮಾಡುತ್ತಾ ಹೋದರೆ ಹನುಮಂತನ ಬಾಲದಂತೆ ಬೆಳೆಯುತ್ತಲೇ ಹೋಗುತ್ತದೆ. ನಿಧಿಗಳ್ಳರು ನಿಧಿಯ ಆಸೆಗಾಗಿ, ನಿದ್ದೆ ಬಿಟ್ಟು ರಾತ್ರೋರಾತ್ರಿ ಜನರ ಕಣ್ಣು ತಪ್ಪಿಸಿ

ಕೋಟೆಯನ್ನು ಹಾಗೂ ನೆಲವನ್ನು ಅಗೆಯುತ್ತಿದ್ದಾರೆ. ಈ ರೀತಿಯ ನಷ್ಟಕ್ಕೆ ಮಂಗಳ ಹಾಡಲು ಸರ್ಕಾರ ಮತ್ತು ವಿಶ್ವವಿದ್ಯಾಲಯ, ಸಂಘ ಸಂಸ್ಥೆಗಳು ಜನರಿಗೆ ಇವುಗಳ ಬಗ್ಗೆ ತಿಳುವಳಿಕೆಯನ್ನು ನೀಡುವ ಪ್ರಯತ್ನ ಮಾಡಬೇಕು. ಅಲ್ಲಲ್ಲಿ ಚದುರಿ ಹೋಗಿರುವ ಶಾಸನಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳನ್ನು ಆಯಾ ಗ್ರಾಮದಲ್ಲಿರುವ ಯುವಕರು ಸಂರಕ್ಷಣೆ ಮಾಡಬೇಕಾಗದೆ. ಹಾಗೆಯೇ ಶಾಲಾ ಕಾಲೇಜುಗಳಲ್ಲಿ ನಡೆಯುವ ಎನ್‌ಎಸ್‌ಎಸ್ ಮತ್ತು ಎನ್‌ಸಿಸಿ ಕಾರ್ಯಕ್ರಮಗಳು ನಡೆದಾಗ ಉಪನ್ಯಾಸಕರು ವಿದ್ಯಾರ್ಥಿಗಳನ್ನು ಹಳೆಯ ಕಾಲದ ದೇವಾಲಯಗಳಿಗೆ ಕರೆದುಕೊಂಡು ಹೋಗಿ ಆ ದೇವಾಲಯದ ಮುಂದೆ ಬಿದ್ದಿರುವ ಶಾಸನ ಮತ್ತು ಇನ್ನಿತರ ಶಿಲ್ಪಗಳನ್ನು ಸಂರಕ್ಷಿತ ಸ್ಥಳಗಳಿಗೆ ಸ್ಥಳಾಂತರಗೊಳಿಸಬೇಕು. ಹೀಗೆ ಸ್ಥಳಾಂತರ ಮಾಡುವಲ್ಲಿ ಯಾವ ಸ್ಥಳದಿಂದ ಅವುಗಳನ್ನು ರವಾನಿಸಲಾಯಿತೆಂಬ ಅಂಶವನ್ನು ಆಯಾ ಪಂಚಾಯಿತಿ ಕಚೇರಿಗಳಲ್ಲಿ ಅವುಗಳನ್ನು ನೋಂದಾಯಿಸಬೇಕು. ಇಂತಹ ಘನಕಾರ್ಯವನ್ನು ಕರ್ನಾಟಕ ಸರಕಾರ ಪ್ರಾಚ್ಯವಸ್ತು ಇಲಾಖೆಯವರು ಲಿಂಗಸೂಗೂರು ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ಅನಾಥವಾಗಿ ಬಿದ್ದ ಶಿಲ್ಪಗಳನ್ನು ತೆಗೆದುಕೊಂಡು ಹೋಗಿ ರಾಯಚೂರು ನಗರದ ನವರಂಗ ದರವಾಜ ಮತ್ತು ಪೋಲೀಸ್ ಸೂಪರಿಡೆಂಟ್ ಕಚೇರಿಗಳಲ್ಲಿ ಸಂರಕ್ಷಿಸಿದ್ದು ಶ್ಲಾಘನೀಯ ವಿಷಯವಾಗಿದೆ. ಹಾಗೆಯೇ ವೀರಗಲ್ಲುಗಳು, ಮಾಸ್ತಿಗಲ್ಲುಗಳು ಹಾಗೂ ಇನ್ನಿತರ ಶಿಲ್ಪಗಳು ಈ ತಾಲ್ಲೂಕಿನಲ್ಲಿ ಬರುವ ಪೋಲೀಸ್ ಠಾಣೆಗಳಲ್ಲಿ, ಎ.ಸಿ ಕಛೇರಿ ಮುಂಭಾಗದಲ್ಲಿ ಕೆಲ ಶಿಲ್ಪಗಳು ರಕ್ಷಣೆ ಪಡೆದಿವೆ.

ಹೀಗೆ ಈ ಅಧ್ಯಯನದ ವ್ಯಾಪ್ತಿಯಲ್ಲಿ ಕಂಡುಬರುವ ಅಂಶಗಳನ್ನು ಸಾಧ್ಯವಾದ ಮೇಟ್ಟಿಗೆ ಚರ್ಚಿಸಲಾಗಿದೆ. ಸಾಂದರ್ಭಿಕವಾಗಿ ವಿಶ್ಲೇಷಿಸಲಾಗಿದೆ ಮತ್ತು ಸಂಶೋಧನೆಗೆ ಒಳಪಡಿಸಲಾಗಿದೆ. ಮುಂದಿನ ಸಂಶೋಧಕರು ಈ ಶಾಸನಗಳನ್ನು ಇನ್ನು ಹೆಚ್ಚಿನ ಸಂಶೋಧನೆಗೆ ಒಳಪಡಿಸುವ ಅವಶ್ಯಕತೆ ಇದೆ.

## ಅನುಬಂಧಗಳು

೧. ಗ್ರಂಥಋಣ

೨. ಶಾಸನದ ಪಾಠ

೩. ನಕ್ಷೆಗಳು

೪. ವಕ್ತೃಗಳು

೫. ಛಾಯಾಚಿತ್ರಗಳು

# ೧. ಗ್ರಂಥ ಋಣ


೧. ಅಪರ್ಣ ಕೂ.ಸ., ೧೯೯೯, **ದೇವಾಲಯ ವಾಸ್ತುಶಿಲ್ಪ ಪರಿಚಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಅಮರೇಶ ಯತಗಲ್, ೨೦೦೭, **ಇತಿಹಾಸ ಇಂಚರ**, ಅದಿತಿ ಪ್ರಕಾಶನ, ಲಿಂಗಸೂಗೂರು

೩. ಅಮರೇಶ ಯತಗಲ್, ೨೦೦೭, **ಇತಿಹಾಸ ಮಂಥನ**, ಅದಿತಿ ಪ್ರಕಾಶನ, ಲಿಂಗಸೂಗೂರು

೪. ಅಮರೇಶ ಯತಗಲ್, ೨೦೦೮ **ಕರ್ನಾಟಕ ನಾಯಕ ಮನೆತನಗಳ ಸಾಂಸ್ಕೃತಿಕಾಚರಣೆಗಳು**, ಪಲ್ಲವಿ ಪಬ್ಲಿಕೇಶನ್, ಲಿಂಗಸೂಗೂರು

೫. ಅಮರೇಶ ಯತಗಲ್(ಸಂ), ೨೦೦೮, **ಏಕಲವ್ಯ**, ರಂಗಮ್ಮ ರಾಮನಗೌಡ ಪಾಟೀಲ ಪ್ರಕಾಶನ, ರಾಯಚೂರು

೬. ಅಮರೇಶ ಯತಗಲ್, ೨೦೧೫, **ಕಸಬಾ ಲಿಂಗಸೂಗೂರಿನ ಶ್ರೀ ಕುಪ್ಪಭೀಮ**, ಪಲ್ಲವಿ ಪಬ್ಲಿಕೇಶನ್, ಕಸಬಾ ಲಿಂಗಸೂಗೂರು

೭. ಅಮರೇಶ ಯತಗಲ್(ಸಂ), ೨೦೦೭, **ಸ್ವರ್ಣಪ್ರಭೆ**, ಸ್ಮರಣ ಸಂಪುಟ, ವಜ್ರಮಹೋತ್ಸವ ಸಮಿತಿ, ಲಿಂಗಸೂಗೂರು

೮. ಕಲಬುರ್ಗಿ ಎಂ.ಎಂ., ೧೯೮೦, **ಸಮಾಧಿ, ಬಲಿದಾನ, ವೀರಮರಣ ಸ್ಮಾರಕಗಳು**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು

೯. ಕೆಂಚನಗೌಡ ಜಿ.ವಿ.(ಪ್ರ.ಸಂ.), ೧೯೯೯, **ಸುವರ್ಣಸಿರಿ**, ರಾಯಚೂರು ಜಿಲ್ಲಾ ಐದನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಲಿಂಗಸೂಗೂರು

೧೦. ಕೋಟ್ರೇಶ್(ಸಂ), ೨೦೧೦, **ಕಲ್ಯಾಣ ಕರ್ನಾಟಕದ ಅರಸುಮನೆತನಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಗಿರಿರಾಜ ಹೊಸಮನಿ, ೧೯೮೬, **ಲಿಂಗಸೂಗೂರು ತಾಲೂಕು ದರ್ಶನ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು

೧೨. ಗೋಪಾಲರಾವ್ ಎಚ್.ಎಸ್.(ಸಂ), ೨೦೦೮, **ರಾಷ್ಟ್ರಕೂಟ ಶಿಲ್ಪಕಲೆ**, ಕರ್ನಾಟಕ ಸಿಲ್ಪಕಲಾ ಅಕಾಡೆಮಿ, ಬೆಂಗಳೂರು

೧೩. ಘನಮಠದಯ್ಯ ಸಾಲಿಮಠ, ೧೯೯೬, **ಅಶೋಕ ಪಥ**, ಶತಮಾನೋತ್ಸವ ಸ್ಮರಣ ಸಂಚಿಕೆ, ಮಸ್ಕಿ

೧೪. ಚಂದ್ರಶೇಖರ ನಾರಣಾಪುರ, ೨೦೦೨, **ಕರ್ನಾಟಕದ ವೀರಶೈವ ಮಠಗಳು**, ಗೆಳಯರ ಪ್ರಕಾಶನ

೧೫. ಚನ್ನಬಸಪ್ಪ ಎಸ್.ಪಾಟೀಲ್, ೧೯೯೯, **ಕರ್ನಾಟಕ ಕೋಟೆಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೬. ಚನ್ನಬಸವ ಹಿರೇಮಠ, ೨೦೧೧, **ಎಡೆದೊರೆ ನಾಡು, ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ವಿಭಾಗ**, ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ, ಸೇಡಂ

೧೭. ಚೆನ್ನಕ್ಕ ಎಲಿಗಾರ, ೧೯೯೦, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ**, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೮. ಚನ್ನಬಸಪ್ಪ, ೨೦೧೦, **ರಾಯಚೂರು ಜಿಲ್ಲೆಯ ಚರಿತ್ರೆ ಶಾಸನಗಳ ಹಿನ್ನೆಲೆಯಲ್ಲಿ**, ಅಕ್ಷರ ಮಂಟಪ ಪ್ರಕಾಶನ, ಬೆಂಗಳೂರು

೧೯. ಚಿದಾನಂದಮೂರ್ತಿ ಎಂ., ೨೦೦೨, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸಪ್ನಬುಕ್ ಹೌಸ್, ಬೆಂಗಳೂರು

೨೦. ಚಿಲ್ಕರಾಗಿ ಸಿ.ಬಿ.(ಪ್ರ.ಸಂ.) ಹಾಗೂ ಇತರರು, ೨೦೧೬, **ಭಾವಣಿ**, ಸ್ಮರಣ ಸಂಚಿಕೆ ೩ನೇ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ, ಲಿಂಗಸೂಗೂರು

೨೧. ದೇವರಕೊಂಡಾರೆಡ್ಡಿ, ೧೯೮೨, **ಸಪ್ತಮಾತೃಕೆಯರು, ಹರತಿಸಿರಿ**, ಎಚ್.ವಿ.ವೀರನಾಯಕ ನೆನಪಿನ ಸಂಪುಟ, ಚಿತ್ರದುರ್ಗ

೨೨. ದೇವರಕೊಂಡಾರೆಡ್ಡಿ, ೨೦೦೨, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೩. ದೇವರಕೊಂಡಾರೆಡ್ಡಿ, ೨೦೦೩, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭,** ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೪. ದೇಸಾಯಿ ಪಿ.ಬಿ., ೧೯೮೨, **ಕನ್ನಡ ನಾಡಿನ ಶಾಸನಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨೫. ನರಸಿಂಹಮೂರ್ತಿ ಎ.ವಿ., ೨೦೦೭, **ಕರ್ನಾಟಕ ನಾಣ್ಯ ಪರಂಪರೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೨೬. ನಾಗಯ್ಯ ಜೆ.ಎಂ., ೧೯೯೨, **ಆರನೆಯ ವಿಕ್ರಮಾದಿತ್ಯನ ಶಾಸನಗಳು: ಒಂದು ಅಧ್ಯಯನ,** ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ

೨೭. ನರಸಿಂಹಮೂರ್ತಿ ಎ.ವಿ., ೧೯೭೨, **ಕರ್ನಾಟಕದ ಶಾಸನ ಸಂಪತ್ತು,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೨೮. ಪರಮಶಿವಮೂರ್ತಿ ಡಿ.ವಿ., ೧೯೯೯, **ಕನ್ನಡ ಶಾಸನಶಿಲ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೯. ಪ್ರಭಾಕರ ಎಂ.ಎನ್., ೨೦೦೦, **ದೇವಾಲಯ ವಾಸ್ತು ಚಂದ್ರಿಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಬಸವಂತರಾಯ ಕುರಿತ(ಪ್ರ.ಸಂ.), ೨೦೧೫, **ಕಾಯಕ,** ಬೆಳ್ಳಿ ಸಂಭ್ರಮ ಸ್ಮರಣ ಸಂಪುಟ, ವೀರಶೈವ ವಿದ್ಯಾವರ್ಧಕ ಸಂಘ(ರಿ), ಲಿಂಗಸೂಗೂರು

೩೧. ಬಸವಲಿಂಗ ಸೊಪ್ಪಿನ ಮಠ(ಪ್ರ.ಸಂ.) ೧೯೯೫, **ದೇವನಾಂಪ್ರಿಯ,** ಲಿಂಗಸೂಗೂರು ತಾಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಲಿಂಗಸೂಗೂರು

೩೨. ಭಟ್‌ಸೂರಿ ಕೆ.ಜಿ.(ಸಂ), ೨೦೦೯, **ಕನ್ನಡ ಶಾಸನ ಸಂಕಥನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೩. ಮಹಾಂತಗೌಡ ಪಾಟೀಲ, **ಚಿನ್ನದ ಭಾವಣಿ,** ಸ್ಮರಣ ಸಂಚಿಕೆ, ಸರ್ಕಾರಿ ಪ್ರಥಮದರ್ಜೆ ಕಾಲೇಜು, ಲಿಂಗಸೂಗೂರು

೩೪. ಮೇವುಂಡಿ ಮಲ್ಲಾರಿ, ೨೦೧೩, **ಕನ್ನಡ ನಾಡಿನ ಶಾಸನ ಕವಿಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩೫. ರಮೇಶ ನಾಯಕ, ೨೦೦೭, **ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೬. ರಾಮಚಂದ್ರರಾವ್ ಎಸ್.ಕೆ., ೧೯೭೨, **ಮೂರ್ತಿಶಿಲ್ಪ: ನೆಲೆ–ಹಿನ್ನೆಲೆ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಹಂಪಿ

೩೭. ವಾಸುದೇವನ್ ಸಿ.ಎಸ್., ೨೦೧೨, **ಕರ್ನಾಟಕ ದೇವಾಲಯ ಕೋಶ,** ರಾಯಚೂರು ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೮. ಶಶಿಕಾಂತ ಕೆ., ೨೦೧೦, **ಲಿಂಗಸೂಗೂರು,** ಬಸವ ಪ್ರಕಾಶನ, ಕಲಬುರ್ಗಿ

೩೯. ಶರಣಪ್ಪ ಆನೆಹೂಸೂರು, ೨೦೧೬, **ಮುದಗಲ್ ಶಾಸನಶಿಲ್ಪ,** ಸಾಗರ ಪ್ರಕಾಶನ, ಲಿಂಗಸೂಗೂರು

೪೦. ಶರಣಪ್ಪ ಆನೆಹೂಸೂರು, ೨೦೧೭, **ಲಿಂಗಸೂಗೂರು ದರ್ಶನ,** ಸಾಗರ್ ಪ್ರಕಾಶನ, ಲಿಂಗಸೂಗೂರು

೪೧. ಶಿವರಾಮ ಕಾರಂತ, ೧೯೭೫, **ಭಾರತೀಯ ಶಿಲ್ಪ,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೪೨. ಶಿವಾನಂದ ವಿ., ೧೯೯೨, **ಹೈದ್ರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು**

೪೩. ಶರಣಪ್ಪ ಸಿ.(ಪ್ರಸಂ.) ಹಾಗೂ ಇತರರು, ೨೦೦೪, **ಭಿಲ್ಲಮ,** ಸ್ಮರಣ ಸಂಚಿಕೆ, ೨ನೇ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನ ಸಮಿತಿ, ಲಿಂಗಸೂಗೂರು

೪೪. ಶರಣಪ್ಪ ಆನೆಹೂಸೂರು, ೨೦೧೭, **ಮುದಗಲ್ ಇತಿಹಾಸ,** ಸಾಗರ ಪ್ರಕಾಶನ, ಲಿಂಗಸೂಗೂರು

೪೫. ಶರಣಬಸಪ್ಪ ಕೋಲ್ಕಾರ, ೨೦೧೦, **ಶಿಲಾಯುಗದ ಗವಿಚಿತ್ರಗಳು,** ಬಸವ ಪ್ರಕಾಶನ, ಕಲಬುರ್ಗಿ

೪೬. ಶಾಶ್ವತಸ್ವಾಮಿ ಮುಕ್ಕುಂದಿಮಠ(ಪ್ರಸಂ.), **ಹೊನ್ನಸಿರಿ,** ನೆನಪಿನ ಸಂಚಿಕೆ, ರಾಯಚೂರು ಜಿಲ್ಲಾ ೩ನೇ ಕನ್ನಡ ಸಾಹಿತ್ಯ ಸಮ್ಮೇಳನ, ಸಿಂಧನೂರು

೪೭. ಶ್ರೀನಿವಾಸ ರಿತ್ತಿ(ಸಂ), ೨೦೦೦, **ಪ್ರಾಚೀನ ಕರ್ನಾಟಕ ಆಡಳಿತ ಪರಿಭಾಷಾಕೋಶ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೪೮. ಶೇಷಶಾಸ್ತ್ರಿ ಆರ್., ೧೯೮೨, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೯. ಷೇಕ್ ಅಲಿ ಮತ್ತು ಸುಂದರ ಅ., ೨೦೧೮, **ಪ್ರಾಗಿತಿಹಾಸ ಕಾಲದ ನಿರ್ಮಿತಿ ಮತ್ತು ಚಿತ್ರಕಲೆ,** ಕನಾಟಕ ಚರಿತ್ರೆ, ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಸಂಶೋಧನಾ ಪ್ರಬಂಧಗಳು**

**ಪಿಎಚ್.ಡಿ.ಮಹಾಪ್ರಬಂಧಗಳು**

೧. ಅಮರೇಶ ಯತಗಲ್, ೨೦೦೫, **ಕರ್ನಾಟಕ ನಾಯಕ ಅರಸು ಮನೆತನಗಳು ವಿಶಿಷ್ಟ ಸಾಂಸ್ಕೃತಿಕ ಕಾರಣಗಳು: ಚಾರಿತ್ರಿಕ ಅಧ್ಯಯನ,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಅಮರೇಶ ಅಲ್ಕೋಡ, ೨೦೧೪, **ರಾಯಚೂರು ದೋ-ಅಬ್ ಪ್ರದೇಶ: ಅಧಿಕಾರ ಮತ್ತು ಹೋರಾಟ,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಅರ್ಚನಾ ಸಿದ್ಧರಾಮಪ್ಪ, ೨೦೦೫, **ಗುಲ್ಬರ್ಗಾ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಶಾಸನಗಳು,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ರಮೇಶ ಮೂಲಗಿ, ೨೦೦೦, **ಹೈದ್ರಾಬಾದ್-ಕರ್ನಾಟಕ ವೀರಶೈವ ಮಠಗಳು: ಒಂದು ಅಧ್ಯಯನ,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫. ಸುಜಾತ ಮಲ್ಲನಗೌಡ, ೨೦೦೦, **ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು: ಒಂದು ಅಧ್ಯಯನ,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೬. ಶಿಲ್ಪಾ ಜೆ.ಎಂ., ೨೦೦೯, **ರಾಯಚೂರು ಜಿಲ್ಲಾ ಶಾಸನ ಸಾಹಿತ್ಯದಲ್ಲಿ ಮಹಿಳೆಯರು,** ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭. ಯಲ್ಲಪ್ಪ ಭೀಮಣ್ಣ, **ರಾಯಚೂರು ಜಿಲ್ಲೆಯ ದೊಡ್ಡಿಗಳ ತೌಲನಿಕ ಅಧ್ಯಯನ,** ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಎಂ.ಫಿಲ್.ನಿಬಂಧಗಳು**

೧. ಅಮರೇಶ ಹಾಲ್ಕೋಡ, ೨೦೧೦, **ದೇವದುರ್ಗ ಚಾರಿತ್ರಿಕ ಅಧ್ಯಯನ,** ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಮಹೇಶ ಎಂ.ಎ., ೨೦೧೬, **ಕೋಟೆಗಳು ಮತ್ತು ಪುಷ್ಕರಣಿಗಳು,** ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಮಹೇಶ ಎಂ.ಎ., ೨೦೧೬, **ದೇವದುರ್ಗ ತಾಲೂಕಿನ ಶಾಸನಗಳು ಮತ್ತು ಅವಶೇಷಗಳು,** ಎಂ.ಫಿಲ್. ಮಹಾಪ್ರಬಂಧ

**೩. ಕನ್ನಡ ಲೇಖನಗಳು**

೧. ಅಮರೇಶ ಯತಗಲ್, ೨೦೦೩, 'ಲಿಂಗಸೂಗೂರಿನ ಐತಿಹಾಸಿಕ ಕುರುಹುಗಳು', **ಇತಿಹಾಸ ದರ್ಶನ,** ಸಂಪುಟ ೧೮, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೨. ಅಮರೇಶ ಯತಗಲ್, ೨೦೦೪, ಗುಂತಗೋಳ ಸಂಸ್ಥಾನದ ಐತಿಹಾಸಿಕ ಪದಗಳು, **ಇತಿಹಾಸ ದರ್ಶನ,** ಸಂಪುಟ ೧೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೩. ಅಮರೇಶ ಯತಗಲ್, ೨೦೦೪, 'ಲಿಂಗಸೂಗೂರು ತಾಲೂಕಿನ ಐತಿಹಾಸಿಕ ಸ್ಮಾರಕಗಳ ಮಹತ್ವ ಮತ್ತು ರಕ್ಷಣೆ', **ಜ್ಯೋತಿ, ಸ್ಮರಣಸಂಚಿಕೆ,** ಶ್ರೀ ವಿಜಯ ಮಹಾಂತೇಶ್ವರ ವಿದ್ಯಾವರ್ಧಕ ಸಂಘ(ರಿ), ಮುದಗಲ್

೪. ಚನ್ನಬಸಪ್ಪ ಮಲ್ಕಂದಿನ್ನಿ, ೨೦೧೬, 'ಲಿಂಗಸೂಗೂರು ತಾಲೂಕಿನ ಐದು ಅಪ್ರಕಟಿತ ಶಾಸನಗಳು', **೩ನೇ ಕನ್ನಡ ಸಾಹಿತ್ಯ ಸಮ್ಮೇಳನ,** ಸ್ಮರಣ ಸಂಚಿಕೆ, ಲಿಂಗಸೂಗೂರು

೫. ಚನ್ನಬಸವ ಹಿರೇಮಠ, ೨೦೦೦, 'ಎಡೆದೊರೆ ಪದದ ನಿಷ್ಪತ್ತಿ', **ಇತಿಹಾಸ ದರ್ಶನ,** ಸಂಪುಟ ೧೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

೬. ಚಿತ್ರಗಾರ ಎಚ್.ಎನ್., ೧೯೯೯, 'ರಾಯಚೂರು ಜಿಲ್ಲೆಯ ಐತಿಹಾಸಿಕ ನೆಲೆಗಳು', **ಸುವರ್ಣಸಿರಿ,** ರಾಯಚೂರು ಜಿಲ್ಲಾ ೫ನೇ ಕನ್ನಡ ಸಾಹಿತ್ಯ ಸಮ್ಮೇಳನ, ಲಿಂಗಸೂಗೂರು

೭. ಮಹಾದೇವಪ್ಪ ನಾಗರಾಳ, ೨೦೧೬, 'ಮುದಗಲ್ಲ ಶಾಸನಗಳ ಸಾಂಸ್ಕೃತಿಕ ಅನ್ವೇಷಣೆ', **೩ನೇ ಕನ್ನಡ ಸಾಹಿತ್ಯ ಸಮ್ಮೇಳನ,** ಸ್ಮರಣ ಸಂಚಿಕೆ, ಲಿಂಗಸೂಗೂರು

೮. ಶರಣಪ್ಪ ಸಿ., ೨೦೦೪, 'ಛಾವಣಿ ಒಂದು ಪರಿಚಯ', ೨ನೇ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ ಸಮಿತಿ, ಲಿಂಗಸೂಗೂರು

**ಶಾಸನ ಸಂಪುಟಗಳು**

೧. **Annual Report on Indian Epigraphy,** 1914-1994

೨. Biden C. and Krishnashasthri H., **The New Ashoken Editct Maski,** 1915

೩. **Epigrapia Indica,** Arabic and persion Supplemen 1959-60, 1992, 1963 A.D.

೪. **ಚನ್ನಬಸವ ಹಿರೇಮಠ, ರಾಯಚೂರು-ಕೊಪ್ಪಳ ಜಿಲ್ಲೆಯ ಶಾಸನಗಳು,** ಚೇತನ ಪ್ರಕಾಶನ, ಮಸ್ಕಿ, ರಾಯಚೂರು ಜಿಲ್ಲೆ, ೧೯೯೯

೫. ದೇವರಕೊಂಡಾ ರೆಡ್ಡಿ(ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ,** ರಾಯಚೂರು ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೬. ಶಿವಾನಂದ ವಿ., **ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು,** ಕನ್ನಡ ಪೀಠ, ಬನಾರಸ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨

**ನಿಘಂಟುಗಳು**

೧. **ಕನ್ನಡ ರತ್ನಕೋಶ,** ೧೯೯೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೨. ಕನ್ನಡ ಸಿರಿಗನ್ನಡ, ಅರ್ಥಕೋಶ, **ಕನ್ನಡ ಅಭಿವೃದ್ಧಿ ಪ್ರಾಧಿಕಾರ,** ಬೆಂಗಳೂರು

೩. **ಕನ್ನಡ ಶಬ್ದಕೋಶ,** ೨೦೦೬, ಬೆಂಗಳೂರು

**ಗ್ಯಾಜೆಟಿಯರ್‌ಗಳು**

೧. ಕೆ.ಅಭಿಶಂಕರ(ಸಂ), ೧೯೭೦, **ಕರ್ನಾಟಕ ರಾಜ್ಯ ಗ್ಯಾಜೆಟಿಯರ್ ಇಲಾಖೆ,** ರಾಯಚೂರು ಜಿಲ್ಲೆ

೨. ಕಾಮತ್ ಸೂರ್ಯನಾಥ(ಸಂ), ೧೯೮೪, **ಕರ್ನಾಟಕ ರಾಜ್ಯ ಗ್ಯಾಜೆಟಿಯರ್,** ಭಾಗ ೧, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು

೩. ಕಾಮತ್ ಸೂರ್ಯನಾಥ(ಸಂ), ೧೯೮೬, **ಕರ್ನಾಟಕ ರಾಜ್ಯ ಗ್ಯಾಜೆಟಿಯರ್,** ಭಾಗ ೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು

೪. ಚಂದ್ರಶೇಖರ ಎನ್.(ಸಂ), ೨೦೧೭, **ಕನಾಟಕ ರಾಜ್ಯ ಗ್ಯಾಜೆಟಿಯರ್ ಇಲಾಖೆ,** ಕರ್ನಾಟಕ ಕೈಪಿಡಿ ವರ್ಷ.

**ಪತ್ರಿಕೆಗಳು**

೧. ಪ್ರಜಾವಾಣಿ ದಿನಪತ್ರಿಕೆ, ವಿಶೇಷ ಪುರವಣಿ, **ಕರ್ನಾಟಕ ದರ್ಶನ,** ದಿನಾಂಕ ೧೬-೦೯-೨೦೧೦

೨. ಪ್ರಜಾವಾಣಿ ದಿನಪತ್ರಿಕೆ, ಪು.೩, ದಿನಾಂಕ ೭-೧೦-೨೦೧೮

## ೨. ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ಉದ್ಯೋಗ | ಊರು | ವಯಸ್ಸು |
|---|---|---|---|---|
| ೧ | ಶ್ರೀ ನಾಗರಾಜ | ಉಪನ್ಯಾಸಕರು | ಆನೆಹೊಸುರು | ೩೮ |
| ೨ | ಶ್ರೀ ಸಂಗಮೇಶ | ಕೆ.ಎಸ್.ಆರ್.ಟಿ.ಸಿ ನಿರ್ವಾಹಕರು | ಮುದಗಲ್ | ೩೯ |
| ೩ | ಶ್ರೀ ಹುಸೇನಪ್ಪ | ದ.ಸಂ.ಮುಖಂಡರು | ಮುದಗಲ್ | ೪೦ |
| ೪ | ಶ್ರೀ ಸಂಜೀವಪ್ಪ | ಮಾ.ಗ್ರಾ.ಪ.ಸದಸ್ಯರು ಮಾವಿನಬಾವಿ | ಹುನಕುಂಟಿ | ೪೩ |
| ೫ | ಶ್ರೀ ಮುತ್ತಪ್ಪ | ದ.ಸಂ.ಮುಖಂಡರು | ಮುದಗಲ್ | ೫೦ |
| ೬ | ಶ್ರೀ ರಾಜಶೇಖರ ಡಂಬಳ | ಸಹಾಯಕ ಆಯುಕ್ತರು | ಲಿಂಗಸೂಗೂರು | ೫೬ |
| ೭ | ಶ್ರೀ ಗುರುಬಸಪ್ಪ ಸಜ್ಜನ್ | ರಾಜಕೀಯ ಮುಖಂಡರು | ಮುದಗಲ್ | ೬೫ |
| ೮ | ಶ್ರೀ ಶಂಕ್ರಪ್ಪ | ಪೂಜಾರಿ | ಆನೆಹೊಸುರು | ೭೦ |

# ಸಂಕೇತ ಸೂಚಿ

೧. ಕ.ವಿ.ವಿ.ಶಾ.ಸಂ.: ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ

೨. ಕ.ಶಾ.ಸಾಂ.ಅ: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ

೩. ರಾ.ಕೊ.ಜಿ.ಶಾ: ರಾಯಚೂರು ಕೊಪ್ಪಳ ಜಿಲ್ಲೆಯ ಶಾಸನಗಳು

೪. ಇದ: ಇತಿಹಾಸ ದರ್ಶನ

೫. ಕಭಾ: ಕರ್ನಾಟಕ ಭಾರತಿ

೬. ಕಸಾಪ: ಕನ್ನಡ ಸಾಹಿತ್ಯ ಪರಿಷತ್ತು

೭. ಪಂಭಾ: ಪಂಪ ಭಾರತಂ

೮. ಪ್ರಕಂಇ: ಪ್ರವಾಸಿ ಕಂಡ ಇಂಡಿಯಾ

೯. ಶಾಪಮಂ: ಶಾಸನ ಪದ್ಯ ಮಂಜರಿ

೧೦. ಶಿಚಿಂ: ಶಿವತತ್ವ ಚಿಂತಾಮಣಿ

# ನಕ್ಷೆಗಳು

## ಕರ್ನಾಟಕ ನಕ್ಷೆ



## ರಾಯಚೂರು ಜಿಲ್ಲಾ ನಕ್ಷೆ



ಆಂಧ್ರ ಪ್ರದೇಶ
ಗುಲ್ಬರ್ಗಾ ಜಿಲ್ಲೆ
ವಿಜಾಪುರ ಜಿಲ್ಲೆ
ದೇವದುರ್ಗ
ತಾಲೂಕು
ರಾಯಚೂರು
ತಾಲೂಕು
ಲಿಂಗಸೂಗೂರು
ತಾಲೂಕು
ಮಾನ್ವಿ
ತಾಲೂಕು
ಬಾಗಲಕೋಟೆ ಜಿಲ್ಲೆ
ಸಿಂಧನೂರು
ತಾಲೂಕು
ಕೊಪ್ಪಳ ಜಿಲ್ಲೆ
ಬಳ್ಳಾರಿ ಜಿಲ್ಲೆ

# ಲಿಂಗಸೂಗೂರು ತಾಲೂಕು ನಕ್ಷೆ



# ಛಾಯಾಚಿತ್ರಗಳು



ಕುಣಿಸೋಮೇಶ್ವರ ದೇವಾಲಯದಲ್ಲಿರುವ ಶಾಸನ, ಕರಡಿಕಲ್



ಊರ ಹೊರಗಿನ ಹನುಮಂತನ ಗುಡಿಯ ಮುಚ್ಚಿಗೆಯಲ್ಲಿ ಸೇರಿ

ಶಾಸನ, ಕೀಲಾರಹಟ್ಟಿ



ಜಡೆಶಂಕರ ದೇವಾಲಯದ ಮುಂಭಾಗದಲ್ಲಿರುವ ಶಾಸನ, ನವಿಲಿ



ಗೋನವಾಟ್ಲ ಗುಮ್ಮಟ ಸಮೀಪ ಬಿದ್ದಿರುವ ಶಾಸ



ಅಮರೇಗೌಡರ ಹೊಲದ ಬದುವಿನಲ್ಲಿರುವ ಶಾಸನ, ಯರಡೋಣಿ



ಊರ ನಡುವೆ ವೀರಭದ್ರನ ಗುಡಿ ಮುಂದಿನ ಶಾಸನ, ಅನ್ವರಿ



ಕಲ್ಲೇಶ್ವರ ದೇವಾಲಯದಲ್ಲಿರುವ ಶಾಸನ,

ಕಸಬಾ ಲಿಂಗಸೂಗೂರು



ಕೋಟೆ ಒಳಗಿರುವ ಬಸವಣ್ಣ ಗುಡಿಯ

ಮುಂದಿರುವ ಶಾಸನ, ಗುರುಗುಂಟ



ರಾಮಲಿಂಗೇಶ್ವರ ದೇವಾಲಯದಲ್ಲಿರುವ ಶಾಸನ, ಮುದಗಲ್



ಬಾವಿಯ ಮೇಲ್ಭಾಗದಲ್ಲಿರುವ ವೀರಗಲ್ಲು , ಹುನಕುಂಟಿ



ಹಳೇ ಪೋಲಿಸ್ ಸ್ಟೇಷನ್ ಮುಂದಿರುವ ವೀರಗಲ್ಲು,
ಲಿಂಗಸೂಗೂರು



ಗ್ರಾಮದಲ್ಲಿರುವ ಕುಲಕರ್ಣಿಯವರ ಮನೆಯ
ಮುಂದಿರುವ ಬೇವಿನ ಮರದ ಕೆಳಗಿರುವ ಮಹಾಸತಿ ಕಲ್ಲು
ಆನೆಹೊಸೂರು



ಗ್ರಾಮದಲ್ಲಿನ ಶಾಸನ ಸಹಿತ ವೀರಗಲ್ಲು, ಕುಪ್ಪೆಗುಡ್ಡ



ರಾಮಲಿಂಗೇಶ್ವರ ದೇವಾಲಯದ ಮುಂಭಾಗದಲ್ಲಿರುವ ವೀರಗಲ್ಲು,

ಬೊಮ್ಮನಾಳ



ಹನುಮಂತ ದೇವರ ಗುಡಿ ಒಳಗಿರುವ ವೀರಗಲ್ಲು,

ಸೀಲಹಳ್ಳಿ



ಛಲವಾದಿ ಮುತ್ಯನ ವೀರಗಲ್ಲು, ಕಸಬಾ ಲಿಂಗಸೂಗೂರು



ರಾಮಲಿಂಗೇಶ್ವರ ದೇವಾಲಯದ ಈಶ್ವರ ಲಿಂಗ, ಆನೆಹೊಸೂರು



ರಾಮಲಿಂಗ ಗುಡಿ ಪ್ರಾಚೀನ ಲಿಂಗ, ಕರಡಿಕಲ್ಲು




ಕಲ್ಲೇಶ್ವರ ದೇವಲಯದಲ್ಲಿರುವ ಲಿಂಗ, ಕಸಬಾ ಲಿಂಗಸೂಗೂರು



ಕಲ್ಲೇಶ್ವರ ದೇವಾಲಯ ನಂದಿ ಶಿಲ್ಪ, ಕಸಬಾ ಲಿಂಗಸೂಗೂರು



ರಾಮಲಿಂಗೇಶ್ವರ ದೇವಾಲಯದಲ್ಲಿರುವ ನಂದಿ, ಮುದಗಲ್



ಹನುಮಂತ ಮೂರ್ತಿ, ಯಲಗಲದಿನ್ನಿ



ರಾಮಲಿಂಗೇಶ್ವರ ದೇವಾಲಯ ದ್ವಾರಬಾಗಿಲ ಮೇಲಿರುವ ಗಜಲಕ್ಷ್ಮಿ, ಬೊಮ್ಮನಾಳ್



ಪಾರ್ಶ್ವನಾಥ ಶಿಲ್ಪ, ಮುದಗಲ್



ರಾಮಲಿಂಗೇಶ್ವರ ದೇವರ ಮುಂದಿರುವ ಗಜಲಕ್ಷ್ಮಿ, ಯರಡೋಣಿ



ರಾಮಲಿಂಗೇಶ್ವರ ದೇವಾಲಯ, ಅನ್ವರಿ



ವೀರಭದ್ರ ಗುಡಿ, ಕರಡಿಕಲ್ಲು




ರಾಮಲಿಂಗೇಶ್ವರ ದೇವಾಲಯ ದ್ವಾರಬಾಗಿಲು, ಗುಡಿಹಾಳ



ರಾಮಲಿಂಗೇಶ್ವರ ದೇವಾಲಯ ನವರಂಗ, ಗುಡಿಹಾಳ(ದೇವಾಪುರ)



ಶ್ರೀನಿವಾಸ ದೇವಾಲಯ ಹೊರನೋಟ, ಗುರುಗುಂಟಾ



ಶ್ರೀನಿವಾಸ ದೇವಾಲಯ ಗರ್ಭಗುಡಿ, ಗುರುಗುಂಟಾ



ಕಾಳಮುತ್ತಪ್ಪ ದೇವಾಲಯ ಹೊರನೋಟ, ಸೀಲಹಳ್ಳಿ



ಕುಣಿ ಸೋಮೇಶ್ವರ ದೇವಾಲಯ, ಕರಡಿಕಲ್ಲು



ರಾಮ ಮಂದಿರ, ಕಸಬಾ ಲಿಂಗಸೂಗೂರು



ಕಲ್ಲೇಶ್ವರ ದೇವಾಲಯದ ಮುಂಭಾಗದ ಒರನೂಟ,
ಕಸಬಾ ಲಿಂಗಸೂಗೂರು



ರಾಮಲಿಂಗೇಶ್ವರ ದೇವಾಲಯ ಹೊರನೋಟ, ಬೊಮ್ಮನಾಳ್




ರಾಮಲಿಂಗೇಶ್ವರ ದೇವಾಲಯ ಹೊರನೋಟ, ಮುದಗಲ್



ರಾಮಲಿಂಗೇಶ್ವರ ದೇವಾಲಯ, ಆನೆಹೊಸೂರು



ಹೊನ್ನಹಳ್ಳಿ ಕೋಟೆ



ಮುದಗಲ್ ಕೋಟೆ



ಲಿಯೋ ನಾರ್ಡ್‌ಮನ್‌ನ್ನನ ಸಮಾದಿ. ಕಸಬಾ ಲಿಂಗಸೂಗೂರು



ಮೇರಿಯಾಳ ಸಮಾದಿ (ಮೇಡೋಸ್ ಟೈಲರನ ಪತ್ನಿ) ಲಿಂಗಸೂಗೂರು



ಲಿಯೋನಾರ್ಡ್‌ಮನ್ ಅವರ ಭಾವಚಿತ್ರ



ಲಿಯೋನಾರ್ಡ್‌ಮನ್‌ನ ವಾಸಿಸುವ ಮನೆ, ಲಿಂಗಸೂಗೂರು



ಹಳೇ ವಿ.ಸಿ.ಬಿ ಕಾಲೇಜು ಕಟ್ಟಡ, ಲಿಂಗಸೂಗೂರು



ನೂರೊಂದು ಬಾಗಿಲು ಕಟ್ಟಡ, ಲಿಂಗಸೂಗೂರು



ಬ್ರಿಟೀಷ್ ಅಧಿಕಾರಿಗಳ ಸ್ಪೋರ್ಟ್ಸ್ ಕ್ಲಬ್, ಲಿಂಗಸೂಗೂರು



ನಿಜಾಮಂ ಶೈಲಿಯ ನಿರೀಕ್ಷಣಾ ಮಂದಿರ, ಲಿಂಗಸೂಗೂರು



ಕೋಟೆಯ ಒಳಗಿರುವ ಗರಡಿಮನೆ, ಗುರುಗುಂಟಾ



ಗ್ರಾಮದ ಸಜ್ಜಿ ಹೊಲದ ಬಾವಿ, ಹುನಕುಂಟಿ



ಲಿಯೋನಾರ್ಡ್‌ಮನ್ನನ ಬಾವಿ, ಹುನಕುಂಟಿ



ಖಾನ್‌ಸಾಬ್ ಬಾವಿ, ಮುದಗಲ್ಲು



ರಾಮ ಮಂದಿರ ಮುಂದಿರುವ ಪುಷ್ಕರಣಿ, ಕಸಬಾ ಲಿಂಗಸೂಗೂರು



ಹಳೇ ವಿ.ಸಿ.ಬಿ ಕಾಲೇಜು ಆವರಣದಲ್ಲಿರು ಬಾವಿ, ಲಿಂಗಸೂಗೂರು



ಅಗಸಿ ಒಳಗಡೆ ಇರುವ ಬಾವಿ, ಕೋಟಾ



ಚಿಕ್ಕಕೆರೆ ತೂಬು, ಕರಡಿಕಲ್



ಕರಡಿಕಲ್ ಕೆರೆ, ಲಿಂಗಸೂಗೂರು



ತೋಂಟದಾರ್ಯಮಠ, ಕಸಬಾ ಲಿಂಗಸೂಗೂರು


ಹಜರತ್ ಹುಸೇನ್ ಹಲಾಂ ದರ್ಗಾ, ಮುದಗಲ್


ಜಾಮೀಯಾ ಮಸೀದಿ, ಕಸಬಾ ಲಿಂಗಸೂಗೂರು


ಹಜರತ್ ಬೀಬಿ ಪಾತೀಮಾ ದರ್ಗಾ, ಮುದಗಲ್


ಬಾಗಲುಕೋಟೆ ರಸ್ತೆಯಲ್ಲಿರುವ ಮಸಿದಿ, ಮುದಗಲ್

